# ಹೊಸತು

ನೆಮ್ಮದಿಯ ನಾಳೆ ನಮ್ಮದು


## ಒಳಗೇನಿದೆ ...




**ಚಿತ್ರಗಳು :** ಸುವರ್ಣ, ಕಮಲಂ ಅರಸು, ವಿ. ಗೋಪಾಲ್, ರವಿ ಹೆಗ್ಗಡಿ, ಉಮೇಶ್ ಹಿರೇಮಠ, ಪ್ರತೀಕ್ ಸಿನ್ಹಾ, ಶ್ರೀಹರಿ, ಗೋಪಿ, ಡಾ|| ವಿ. ಪುಗಳೇಂದಿ

**ಮುಖಪುಟದ ಛಾಯಾಚಿತ್ರ :** ಸುನೀಲಕುಮಾರ ಸುಧಾಕರ, ಬಿಜಾಪುರ

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

ಯಡಿಯೂರಪ್ಪ ಏನೇ ಲಾಗ ಹಾಕಿದರೂ ಮುಖ್ಯಮಂತ್ರಿ ಜಗದೀಶ ಶೆಟ್ಟರು ಬಜೆಟ್ ಮಂಡಿಸುವುದನ್ನು ತಡೆಯಲಾಗಲಿಲ್ಲ. ಅವರೊಂದಿಗೆ ಗುರುತಿಸಿಕೊಂಡವರು ಬೆರಳೆಣಿಕೆಯಷ್ಟು ಮಂದಿ ಶಾಸಕರು ಮಾತ್ರ. ಇವರ ಪೈಕಿ ಇಬ್ಬರು ಸಚಿವರು. ಅಧಿಕಾರ ಕಳೆದುಕೊಂಡ ಮೇಲೆ ಸಚಿವೆ ಶೋಭಾ ಕರಂದ್ಲಾಜೆ ಈಗ ಒಮ್ಮಿಂದೊಮ್ಮೆಗೇ ಸ್ತ್ರೀಯರ ಮೇಲಿನ ದೌರ್ಜನ್ಯದ ವಿರುದ್ಧ ಕಿಡಿಕಾರತೊಡಗಿದ್ದಾರೆ. ಅಧಿಕಾರದಲ್ಲಿದ್ದಾಗ ಮಂಗಳೂರಿನ 'ಹೋಮ್ ಸ್ಟೇ'ಳ ಪ್ರಕರಣದಲ್ಲಿ ಚಕಾರವೆತ್ತದಿದ್ದ ಈಕೆ ಈಗ ಸರಕಾರವನ್ನು ತರಾಟೆಗೆ ತೆಗೆದುಕೊಂಡಿದ್ದಾರೆ. ಈಗಾಗಲೇ ಮೂರು ಸುದೀರ್ಘ ಪತ್ರಗಳನ್ನು ರವಾನಿಸಿದ್ದಾರೆ. ಈಗ ಈಕೆ ಕೆ.ಜೆ.ಪಿ.ಯ ಸೆಕೆಂಡ್ ಇನ್ ಕಮಾಂಡ್. ಯಡಿಯೂರಪ್ಪ ಎಡವಿದ್ದೆಲ್ಲಿ ಎನ್ನುವುದೇ ಈಗ ಪ್ರಶ್ನೆ. ತನ್ನ ಅಬ್ಬರಗಳಿಂದ ಭಾಜಪ ಕೇಂದ್ರ ನಾಯಕತ್ವವನ್ನೇ ಕಂಗೆಡಿಸಿದ್ದ ಈತ ಈಗ ಬಾಲ ಕತ್ತರಿಸಿಕೊಂಡಿರುವ ನರಿ. ಪಕ್ಷ ತೊರೆದಮೇಲೆ ಯಾರಿಗೂ ಬೇಡವಾಗಿದ್ದಾರೆ. ಅವರಿಗೆ ಈ ಹಿಂದೆ ನಿಷ್ಠೆ ತೋರಿದವರು ಯಾರೂ ಹಿಂಬಾಲಿಸಲಿಲ್ಲ. ಅವರು ನೀಡಿದ ಊಟ ಉಪಚಾರದಲ್ಲಿ ಪಾಲ್ಗೊಂಡಿದ್ದವರು ಕೈಕೊಟ್ಟರು, ಉಂಡು ಜಾಣರಾದರು. ಇಷ್ಟೆಲ್ಲಾ ಅವಾಂತರ ಮಾಡಿಕೊಂಡಿರುವ ಯಡಿಯೂರಪ್ಪನವರನ್ನು ಮತ್ತೆ ಭಾಜಪ ತೆಕ್ಕೆಗೆ ತೆಗೆದುಕೊಳ್ಳಲು ಸಿದ್ಧವಾಗಿದೆ. ಹೀಗೆ ಹೇಳಿದವರು ಬೇರಾರೂ ಅಲ್ಲ, ಭಾಜಪದ ಹೊಸ ಅಧ್ಯಕ್ಷ ರಾಜನಾಥಸಿಂಗ್. ಇದೀಗ ಶಿಸ್ತಿನ ಪಕ್ಷದ ವರಸೆ.

✶ ✶ ✶

ಭಾಜಪದ ಮೂರನೇ ಮುಖ್ಯಮಂತ್ರಿ ಮಂಡಿಸಿರುವ ಬಜೆಟ್ ಮಕ್ಕಳಿರುವ ಮನೆಯಲ್ಲಿ ಮಗುವಿಗೆ ಊಟ ತಿನ್ನಿಸುವಾಗ ಕೇಳಿಬರುವ ಮಾತುಗಳು ನೆನಪಿಗೆ ಬರುತ್ತವೆ: 'ಸಾರಿಸಿ, ಗುಡಿಸಿ, ರಂಗೋಲಿ ಇಟ್ಟು, ಬಾಳೆಲೆ ಹಾಸಿ, ಅನ್ನ ಬಡಿಸಿ, ಅವರಿಗೊಂದು ತುತ್ತು, ಇವರಿಗೊಂದು ತುತ್ತು, ನಿನಗೊಂದು ತುತ್ತು,' .... ಹೀಗೆ ಅದು ಮುಂದುವರಿಯುತ್ತದೆ. ಬಜೆಟ್‌ನಲ್ಲೂ ಅದೇ ರೀತಿಯಾಗಿ ಜಗದೀಶ ಶೆಟ್ಟರು ಬೊಕ್ಕಸದ ಹಣವನ್ನು ಹಂಚಲು ಹೊರಟಿದ್ದಾರೆ. ಹೇಗೂ ಅವರೇನೂ ಬಜೆಟ್‌ನಲ್ಲಿ ಹೇಳಿರುವುದೆಲ್ಲವನ್ನು ಕಾರ್ಯಗತ ಮಾಡುವುದಿಲ್ಲ. ಇದು ಅವರಿಗೂ ಗೊತ್ತು, ನಮಗೂ ಗೊತ್ತು. ಏಕೆಂದರೆ ಮೇ ತಿಂಗಳಲ್ಲಿ ಚುನಾವಣೆಗಳು ಬರುತ್ತಿವೆ. ಅವರೇನೂ ಹೊಸ ರೀತಿಯ ಆಯವ್ಯಯವನ್ನೇನೂ ಮಂಡಿಸಿಲ್ಲ. ಯಡಿಯೂರಪ್ಪ, ಸದಾನಂದ ಗೌಡರ ಪರಂಪರೆಯನ್ನೇ ಮುಂದುವರಿಸಿದ್ದಾರೆ ಚುನಾವಣೆ ದೃಷ್ಟಿಯಲ್ಲಿರಿಸಿಕೊಂಡು. ಮಠಮಾನ್ಯಗಳಿಗೆ ತುಂಬ ಧಾರಾಳವಾಗಿ ಕೋಟಿಗಟ್ಟಳೆ ಹಣದ ಹೊಳೆ ಹರಿಸಿದ್ದಾರೆ. 'ಅಂದಿರಿಕಿ ಮಂಚವಾಡು ಅನಂತಯ್ಯ' (ಅನಂತಯ್ಯ ಎಲ್ಲರಿಗೂ ಒಳ್ಳೆಯವನು) ಎಂಬ ತೆಲುಗು ಮಾತಿನಂತೆ ಎಲ್ಲ ಜಾತಿಯ ಮಠಗಳಿಗೂ ದಾನ ಮಾಡಿದ್ದಾರೆ. ಮೊದಲು ಕೊಟ್ಟದ್ದು ಸಾಲದಾಯಿತೇನೋ, ಚರ್ಚೆಯೇ ಆಗದ ಬಜೆಟ್ 'ಚರ್ಚೆ'ಗೆ ಉತ್ತರ ನೀಡುವಾಗ ಮಠಗಳಿಗೆ ಇನ್ನಷ್ಟು ಕೋಟಿ ಚೆಲ್ಲಿದ್ದಾರೆ. ಕರ್ನಾಟಕದ ಜನ ಧನ್ಯರು. ಗ್ರಾಮಗಳಲ್ಲಿ, ಶಾಲಾ ಕಾಲೇಜುಗಳಲ್ಲಿ, ಹಾಸ್ಟೆಲುಗಳಲ್ಲಿ ಶೌಚಾಲಯಗಳನ್ನು ಕಟ್ಟುವುದಕ್ಕೆ ದುಡ್ಡಿಲ್ಲದಿದ್ದರೂ ಚಿಂತೆಯಿಲ್ಲ, ಮಠಗಳು ಶ್ರೀಮಂತವಾಗಿದ್ದರೆ ಸಾಕು! ಯಾರದೋ ದುಡ್ಡು ಎಲ್ಲಮ್ಮನ ಜಾತ್ರೆ.

✶ ✶ ✶

ಹಗರಣಗಳ ಸರಮಾಲೆಯನ್ನೇ ಬೆನ್ನಿಗಂಟಿಸಿಕೊಂಡಿರುವ ಮನಮೋಹನ ಸಿಂಗ್ ಸರಕಾರ ಈಗ ಇನ್ನೊಂದು ಹಗರಣದಲ್ಲಿ ಸಿಕ್ಕಿಕೊಂಡಿದೆ. ಅದು ಅತಿಗಣ್ಯರನ್ನು ಹೊತ್ತೊಯ್ಯುವ ಹೆಲಿಕಾಪ್ಟರುಗಳ ಖರೀದಿಗೆ ಸಂಬಂಧಿಸಿದ್ದು. ಅಂದಹಾಗೆ ಈ 'ಅತಿಗಣ್ಯರು' ನಿಜಕ್ಕೂ ಸಾರ್ವಜನಿಕ ಬೊಕ್ಕಸಕ್ಕೆ ಒಂದು ದೊಡ್ಡ ಹೊರೆ. ಇವರೆಲ್ಲ ಜನಪ್ರಿಯ ನಾಯಕರುಗಳು ಹೆಸರಿಗೆ. ಆದರೆ ಇವರ ಹತ್ತಿರ ಜನಸಾಮಾನ್ಯರ ನೆರಳೂ ಬೀಳುವಂತಿಲ್ಲ ಅಂಥ ಪಹರೆ. ಇವರ ರಕ್ಷಣೆಗೆ ಮಷಿನ್ ಗನ್ ಧಾರಿಗಳು ಸದಾ ಕಾಲವೂ ಇರುತ್ತಾರೆ. ಇವರನ್ನು ಕಾಪಾಡಲು ಸರಕಾರ ಸಾವಿರಾರು ಕೋಟಿ ರೂಪಾಯಿ ಖರ್ಚು ಮಾಡುತ್ತಿದೆ. ಅದರ ಅಂದಾಜು ಮಾತ್ರ ಇದುವರೆಗೆ ಯಾರಿಗೂ ಸಿಕ್ಕಿಲ್ಲ. ಸದ್ಯ ಇದೀಗ ಸುಪ್ರೀಮ್ ಕೋರ್ಟು ಈ ವಿಷಯವನ್ನು ಕೈಗೆತ್ತಿಕೊಂಡಿದೆ. ಸರಕಾರದಿಂದ ಈ 'ವಿವಿಐಪಿ' ಸಂರಕ್ಷಣೆಯ ವಿವರ ಕೇಳಿದೆ. ಇದರಿಂದ ಏನು ಹೊರಗೆ ಬರುವುದೋ ನೋಡೋಣ, ಇರಲಿ. ಈಗ


*(೬ನೇ ಪುಟಕ್ಕೆ)*




ಸಂಪುಟ-೧೪ ಸಂಚಿಕೆ-೮ ಮಾರ್ಚ್ ೨೦೧೩

**ಗೌರವ ಸಂಪಾದಕ**

ಜಿ. ರಾಮಕೃಷ್ಣ

**ಸಂಪಾದಕ**

ಸಿದ್ದನಗೌಡ ಪಾಟೀಲ

**ಸಹಸಂಪಾದಕರು**

ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ರಾಮಲಿಂಗಪ್ಪ ಟಿ. ಬೇಗೂರು
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೮
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**





# ಅಕ್ಷರ ಜಾತ್ರೆಯ ಅಂತರಂಗ

ವಿಜಾಪುರ ನಗರದಲ್ಲಿ ೭೯ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ ನಡೆಯಿತು. ಪ್ರತಿಸಲದಂತೆ ಈ ಬಾರಿಯೂ ದೊಡ್ಡ ಸುದ್ದಿಯಾಗಿ ಮರೆತೂ ಹೋಯಿತು. ಸಮ್ಮೇಳನದ ಕುರಿತು ಆಗಬೇಕಾದ ಸುದ್ದಿಗಳಿಗಿಂತ ಆಗಬಾರದ ಸುದ್ದಿಗಳೇ ಹೆಚ್ಚು ಪ್ರಚಾರ ಪಡೆದವು. ಬಿಸಿಲು, ಧೂಳು, ನೂಕುನುಗ್ಗಲು, ಊಟದ ಸಮಸ್ಯೆ ಇತ್ಯಾದಿ. ಕೆಲವರಂತೂ ವಿಜಾಪುರ ನಗರ ಇಂಥ ಸಮ್ಮೇಳನ ನಡೆಸಲು ಸರಿಯಾದ ಸ್ಥಳವಲ್ಲ ಎಂಬಂತೆ ವರ್ತಿಸಿದರು. ಇನ್ನು ಕೆಲವರು ಇಂಥ ಜಾತ್ರೆಯಲ್ಲಿ ಏನು ಮಾತನಾಡುವುದು ಎಂದು ತಮ್ಮ ಅಸಮಾಧಾನ ವ್ಯಕ್ತಪಡಿಸಿದರು. ಅಲ್ಲಿ ಸೇರಿದ ಲಕ್ಷಾಂತರ ಜನರನ್ನು ಜಾತ್ರೆಯೆಂದೂ, ಅವರು ಸಾಹಿತ್ಯ ಚಿಂತನೆಯ ಗಂಭೀರ ವಿಷಯಗಳನ್ನು ಕೇಳಲು ಅನರ್ಹರೆಂದೂ ಅಥವಾ ಅಂಥ ಸಾಮಾನ್ಯರ ಮುಂದೆ ಬುದ್ಧಿ ಜೀವಿಗಳು ತಮ್ಮ ಚಿಂತನೆ ಮಂಡಿಸುವುದು ವ್ಯರ್ಥ ಎಂದು ಭಾವಿಸುವುದು ಜನರಿಗೆ, ಪ್ರಜಾಸತ್ತೆಗೆ ಮಾಡುವ ಅಪಮಾನ. ಇತ್ತೀಚಿನ ದಿನಗಳಲ್ಲಿ ಜಾತಿ, ಧರ್ಮದ ಹೆಸರಿನಲ್ಲಿ, ಸಮಾಜೋತ್ಸವದ ಹೆಸರಿನಲ್ಲಿ ಜನ ಸೇರುವುದನ್ನು ನೋಡಿದ್ದೇವೆ. ಆದರೆ ಸಾಹಿತ್ಯ, ಸಂಸ್ಕೃತಿ, ಕಲೆಯ ವಿಷಯಕ್ಕೆ ಎಲ್ಲ ಜಾತಿ, ಧರ್ಮಗಳ ಲಕ್ಷಾಂತರ ಜನ ಸೇರಿ, ಸ್ಪಂದಿಸುತ್ತಿರುವುದಕ್ಕೆ ನಾವು ಸಂತೋಷಪಡಬೇಕು. ಊಟದ ಸಮಸ್ಯೆ ಉಂಟಾಗಿದ್ದುದು ನಿಜ. ಸಂಘಟಕರ ನಿರೀಕ್ಷೆ ಮೀರಿ ಜನ ಸೇರಿದಾಗ ಇಂಥ ಸಮಸ್ಯೆ ಉಂಟಾಗುವುದು ಸಹಜ. ಆದರೆ ಬಂದವರೆಲ್ಲ ಊಟಕ್ಕಾಗಿ ಬಂದವರಲ್ಲ. ಸಮ್ಮೇಳನ ನಡೆವ ಸ್ಥಳ ನಗರದ ಹೊರವಲಯದಲ್ಲಿದ್ದುದರಿಂದ ಅಲ್ಲಿ ಏರ್ಪಡಿಸಿದ ಊಟದ ವ್ಯವಸ್ಥೆಯ ಮೇಲೆಯೇ ಅವಲಂಬಿತರಾಗಿರಬಹುದು. ಅದೇ ಸಂದರ್ಭದಲ್ಲಿ ಅಲ್ಲಿಗೆ ಬಂದ ಬಹುತೇಕ ಜನ ಮುಖ್ಯ ವೇದಿಕೆ, ಸಮಾನಾಂತರ ವೇದಿಕೆಗಳಲ್ಲಿ ಕುಳಿತು ಭಾಷಣಗಳನ್ನೂ, ಉಪನ್ಯಾಸಗಳನ್ನೂ ಕೇಳಿದ್ದಾರೆ. ಪ್ರತಿಯೊಂದು ಪುಸ್ತಕ ಮಳಿಗೆಗಳಿಗೆ ಹೋಗಿದ್ದಾರೆ. ವೇದಿಕೆಯ ಮುಂದಾಗಲೀ, ಪುಸ್ತಕ ಮಳಿಗೆಗಳಲ್ಲಾಗಲೀ ಜನ ತುಂಬಿ ತುಳುಕುತ್ತಿದ್ದರು. ಪ್ರತಿಯೊಬ್ಬರ ಭಾಷಣಗಳನ್ನು ಬಿಸಿಲಿನಲ್ಲಿ ನಿಂತೂ ಕೇಳಿದ್ದಾರೆ. ಭಾಷಣಕಾರರ ಮಾತುಗಳಿಗೆ ಸ್ಪಂದಿಸಿದ್ದಾರೆ. ಒಪ್ಪಿಗೆಯಾದಾಗ ಚಪ್ಪಾಳೆ ಹೊಡೆದಿದ್ದಾರೆ. ಬೇಸರವಾದಾಗ ಆಕಳಿಸಿದ್ದಾರೆ. ಸಾಹಿತಿಗಳಿಗೆ ಇದಕ್ಕಿಂತಲೂ ಇನ್ನೇನು ಬೇಕು. ಸಾಹಿತ್ಯದ ಖಾಸಗೀಕರಣದ ಸಂಭ್ರಮಗಳು ನಡೆಯುತ್ತಿರುವ ಸಂದರ್ಭದಲ್ಲಿ, ಸಾಹಿತಿಗಳ ಮಾತು ಕೇಳಲು ಲಕ್ಷಾಂತರ ಜನ ಬರುವುದು ಸ್ವಾಗತಿಸಬೇಕಾದ ಅಂಶ. ಇನ್ನು ಸೇರಿರುವ ಲಕ್ಷಾಂತರ ಜನರಿಗೂ ಅವರಿಗೆ ಅರ್ಥವಾಗುವ ಶೈಲಿಯಲ್ಲಿ ಸಂವಹನ ಸಾಮರ್ಥ್ಯವನ್ನು ಬೆಳೆಸಿಕೊಳ್ಳಬೇಕಾದದ್ದು ಮಾತನಾಡುವವರ ಜವಾಬ್ದಾರಿ. ಜಾತ್ರೆ ಎಂಬ ಹೆಸರಿನಲ್ಲಿ ಜನರ ಭಾವನೆಗಳನ್ನು ನಿರ್ಲಕ್ಷಿಸುವುದು ಸೂಕ್ತವಲ್ಲ. ಸಮ್ಮೇಳನ ಸಂದರ್ಭದಲ್ಲಿ ಮತ್ತು ನಂತರ ಹೆಚ್ಚು ಚರ್ಚೆಗೆ ಬರಬೇಕಾದದ್ದು ಸಮ್ಮೇಳನಾಧ್ಯಕ್ಷರ ಭಾಷಣ. ಕೋಮುವಾದಿ ಸರಕಾರ, ಕೋಮುವಾದಿಗಳ ರಾಜಕೀಯ ಪ್ರಾಬಲ್ಯವಿರುವ ಸಮ್ಮೇಳನ ನಡೆದ ಸ್ಥಳದಲ್ಲಿ ಮುಖ್ಯ ಮಂತ್ರಿಗಳ ಸಮ್ಮುಖದಲ್ಲಿ ಅಧ್ಯಕ್ಷರಾದ ಕೋ. ಚೆನ್ನಬಸಪ್ಪನವರು ಹೇಳಿದ ಮಾತುಗಳು ಇಡೀ ಸಮಾಜ ಗಮನಿಸಬೇಕಾದ ವಿಷಯಗಳನ್ನೊಳಗೊಂಡಿದ್ದವು. ಸಾಹಿತ್ಯ ಮತ್ತು ರಾಜಕಾರಣ, ಸಾಹಿತಿಗಳ ರಾಜಕೀಯ-ಸಾಮಾಜಿಕ ಬದ್ಧತೆ, ಕೋಮು-ಜಾತಿ ಸಂಘರ್ಷಗಳ ಅಪಾಯ, ಸರಕಾರದ ಭೂಸ್ವಾಧೀನ ನೀತಿ, ಜಾಗತೀಕರಣ, ನಿರುದ್ಯೋಗ, ನೆರೆ ರಾಜ್ಯಗಳೊಡನೆ ಸಂಬಂಧ, ಲಿಂಗತಾರತಮ್ಯ, ಅಭಿವ್ಯಕ್ತಿ ಸ್ವಾತಂತ್ರ್ಯ, ಟಿಪ್ಪೂ ವಿಶ್ವವಿದ್ಯಾಲಯ ವಿವಾದ, ಡಬ್ಬಿಂಗ್ ವಿಷಯ, ದಲಿತ, ಮಹಿಳೆ, ಕೃಷಿಕ, ಕಾರ್ಮಿಕರ ಸಮಸ್ಯೆಗಳು ಹೀಗೆ ಸಮಾಜದ ಎಲ್ಲ ಜನತೆಯ ಸಂಕಷ್ಟಗಳಿಗೆ, ಸಮಸ್ಯೆಗಳಿಗೆ ಸಾಹಿತಿ, ಸಾಹಿತ್ಯ ಸ್ಪಂದಿಸಬೇಕಾದ ರೀತಿಯ ಬಗೆಗೆ ಮಾತನಾಡಿದರು. ಈ ವಿಷಯಗಳಿಗೆ ಹೆಚ್ಚು ಪ್ರಚಾರ ಸಿಕ್ಕು ಸಮ್ಮೇಳನದ ನಂತರವೂ ನಿರಂತರ ಚರ್ಚೆ ನಡೆವ ರೀತಿ ಸುದ್ದಿಯಾಗ ಬೇಕಿತ್ತು. ಸಮ್ಮೇಳನ ಮುಗಿದ ಮಾರನೇ ದಿನ ಈ ಯಾವ ವಿಷಯಗಳೂ ಪ್ರಸ್ತುತವಾಗದೆ ಕಲುಷಿತಗೊಂಡ ರಾಜಕಾರಣ, ಪಕ್ಷಾಂತರ ಮುಂತಾದ ಅನಪೇಕ್ಷಿತ, ಅನಾರೋಗ್ಯಕರ ಸುದ್ದಿಗಳು ಪ್ರಚಾರ ಪಡೆಯುತ್ತಿವೆ. ಸಮ್ಮೇಳನಾಧ್ಯಕ್ಷರು ಎತ್ತಿರುವ ಪ್ರಶ್ನೆಗಳನ್ನು ಕನ್ನಡ ಸಾಹಿತ್ಯ ಪರಿಷತ್‌ನವರಾದರೂ ತಮ್ಮ ವೇದಿಕೆಗಳ ಮೇಲೆ ಚರ್ಚಿಸಿದರೆ ಒಳ್ಳೆಯದು.

ವಿಜಾಪುರ ಸಮ್ಮೇಳನಕ್ಕೆ ಬಂದವರಲ್ಲಿ ಕೆಲವರಿಗೆ ಬಿಸಿಲು, ಧೂಳಿನ ಸಮಸ್ಯೆಯೆನ್ನಿಸಿದರೂ ಬಹುತೇಕರು ಆದಿಲ್‌ಶಾಹಿ ಕಾಲದ ಇಮಾರತುಗಳಾದ ಗೋಳಗುಮ್ಮಟ, ಬಾರಾಕಮಾನ್, ಇಬ್ರಾಹಿಂ ರೋಜಾ, ಬಸವನ ಬಾಗೇವಾಡಿ, ಕೂಡಲಸಂಗಮ ಮುಂತಾದ ಪ್ರದೇಶಗಳನ್ನು ನೋಡಿ ಸಂತೋಷಪಟ್ಟಿದ್ದಾರೆ. ಇದೇ ಸಂದರ್ಭದಲ್ಲಿ ವಿಜಾಪುರದ ಆತಂಕಕಾರಿಯಾದ ವಿಷಯಗಳ ಕುರಿತು ಗಮನಹರಿಸಬೇಕಾದ ಅವಶ್ಯಕತೆ ಇದೆ. ಈ ಕುರಿತು ಸಮ್ಮೇಳನದ ಮೊದಲ ಗೋಷ್ಠಿಯಲ್ಲಿ ನಾನು ಮಾತನಾಡಿದ್ದೆ. ವಿಜಾಪುರ ಜಿಲ್ಲೆ ಶತಮಾನಗಳ ಸಂಕಟದಲ್ಲಿದೆ. ೧೬೮೬ರ ಆದಿಲ್‌ಶಾಹಿ ಆಡಳಿತದ ನಂತರ ಇಂದಿನ ತನಕ ಈ ಜಿಲ್ಲೆ ರಾಜಕೀಯ ಅಸ್ಥಿರತೆ ಹಾಗೂ ಸಾಮಾಜಿಕ ಅಭದ್ರತೆಯಿಂದ ಬಳಲುತ್ತಿದೆ. ಆದಿಲ್‌ಶಾಹಿಗಳನ್ನು ಮೊಘಲ್ ದೊರೆ ಔರಂಗಜೇಬ್ ಸೋಲಿಸಿ ವಿಜಾಪುರ ಪ್ರದೇಶವನ್ನು ಲೂಟಿ ಮಾಡಿದ. ೧೭೨೪ರಲ್ಲಿ ಹೈದರಾಬಾದ್ ನಿಜಾಮ್ ಮನೆತನ, ೧೭೪೬ರಲ್ಲಿ ಮರಾಠಾ ಪೇಶ್ವೆಗಳ ದಾಳಿ ಕೊನೆಗೆ ೧೮೧೮ರಲ್ಲಿ ಬ್ರಿಟೀಷರ ದಾಳಿ ಹೀಗೆ ೧೯೪೭ರವರೆಗೂ ಈ ಪ್ರದೇಶ ಯುದ್ಧಭೂಮಿಯಾಗಿ ದೋಚಿಕೊಳ್ಳುವವರಿಗೆ

ವಿಜಯಪುರವಾಗಿತ್ತು. ಯಾರೂ ಇಲ್ಲಿನ ಕೃಷಿ, ಆರ್ಥಿಕ ಅಭಿವೃದ್ಧಿಗೆ ಗಮನ ಕೊಡದೇ ಸ್ಥಳೀಯ ದೇಸಾಯಿ, ದೇಶಮುಖರಂಥ ಜಮೀನ್ದಾರರ ಮೂಲಕ ರೈತರನ್ನೂ, ಕೃಷಿ ಉತ್ಪನ್ನಗಳನ್ನೂ ಲೂಟಿ ಮಾಡಿದರು. ಬ್ರಿಟೀಷರ ಕಾಲದಲ್ಲಿ ಬಾಂಬೆ ಕರ್ನಾಟಕದ ವ್ಯಾಪ್ತಿಗೆ ಸೇರಿದ್ದ ಈ ಜಿಲ್ಲೆ ಯಾವುದೇ ಬೃಹತ್ ಕೈಗಾರಿಕೆಗಳಿಲ್ಲದೆ, ಕೃಷಿಗೆ ಮೂಲಭೂತ ಸೌಕರ್ಯಗಳಿಲ್ಲದೆ ಅಭಿವೃದ್ಧಿಯಿಂದ ವಂಚಿತವಾಯಿತು.

ಕರ್ನಾಟಕ ಏಕೀಕರಣದ ನಂತರವೂ ಈ ಜಿಲ್ಲೆ ಜಮೀನ್ದಾರರ ರಾಜಕೀಯ ಪ್ರತಿಷ್ಠೆ, ಪೈಪೋಟಿಗೆ ಬಲಿಯಾಯಿತು. ಎಪ್ಪತ್ತರ ದಶಕದಲ್ಲಿ ಭೂಸುಧಾರಣೆ ಕಾನೂನು ಬಂದರೂ ಈ ಜಿಲ್ಲೆಯಲ್ಲಿ ಪ್ರತಿಶತ ಮೂವತ್ತರಷ್ಟು ಜಮೀನ್ದಾರರು ಅರವತ್ತರಷ್ಟು ಭೂಮಿ ಒಡೆತನ ಹೊಂದಿದ್ದಾರೆ. ರಾಜ್ಯದಲ್ಲಿಯೇ ದೊಡ್ಡ ಹಿಡುವಳಿದಾರರ ಸಂಖ್ಯೆಯಲ್ಲಿ ವಿಜಾಪುರ ಮೊದಲ ಸ್ಥಾನದಲ್ಲಿದೆ. ಪಂಚನದಿಗಳ ಬೀಡು, ಕರ್ನಾಟಕದ ಪಂಜಾಬ್ ಎಂದು ಹೆಸರು ಪಡೆದಿದ್ದ ಈ ಜಿಲ್ಲೆ ಇಂದು ಕೃಷ್ಣಾ ನದಿಯ ಒಂದು ದಡ, ಭೀಮಾ ನದಿಯ ಒಂದು ದಡ ಹೊಂದಿ ಒಂದು ಪುಟ್ಟ ಡೋಣಿ ನದಿಯನ್ನು ಹೊಂದಿದೆ. ಪಕ್ಕದಲ್ಲಿಯೇ ಆಲಮಟ್ಟಿ ಜಲಾಶಯವಿದ್ದರೂ ಕುಡಿವ ನೀರಿನ ಬರವಿದೆ. ಬರಗಾಲ ಈ ಪ್ರದೇಶದ ಖಾಯಂ ಅತಿಥಿ. ೨೧,೭೫,೦೦೦ ಜನಸಂಖ್ಯೆಯ ಈ ಜಿಲ್ಲೆಯ ಪ್ರತಿಶತ ೭೮ ಜನಸಂಖ್ಯೆ ಗ್ರಾಮೀಣರು ಅಂದರೆ ಕೃಷಿಯನ್ನು ನಂಬಿದವರು. ಅದರಲ್ಲಿ ಶೇ. ೧೮ ಪರಿಶಿಷ್ಟ ಪಂಗಡದವರು ಅವರಲ್ಲಿ ಶೇ. ೯೦ ಬಡತನರೇಖೆಗಿಂತ ಕೆಳಗಿನವರು. ಬರಗಾಲ ಬಂದರೆ ಸಾಕು ಬಹುತೇಕ ಗ್ರಾಮೀಣ ಜನ ವಲಸೆ ಹೋಗುತ್ತಾರೆ.

ಡಾ|| ನಂಜುಂಡಪ್ಪನವರ ವರದಿಯ ಪ್ರಕಾರ ಈ ಜಿಲ್ಲೆಯ ಐದು ತಾಲೂಕುಗಳಲ್ಲಿ ನಾಲ್ಕು ಅತಿ ಹಿಂದುಳಿದ ತಾಲೂಕುಗಳು, ಜಿಲ್ಲಾ ಕೇಂದ್ರವಾದ ವಿಜಾಪುರ ಹಿಂದುಳಿದ ತಾಲೂಕು. ಈ ಜಿಲ್ಲೆ ಆರ್ಥಿಕ, ಮಾನವ ಅಭಿವೃದ್ಧಿಯಲ್ಲಿ ರಾಜ್ಯದ ಜಿಲ್ಲೆಗಳಲ್ಲಿ ಕೊನೆಯ ಮೂರು, ನಾಲ್ಕನೇ ಸ್ಥಾನದಲ್ಲಿದೆ. ಈಗ ಹೈದರಾಬಾದ್ ಕರ್ನಾಟಕ ಆರ್ಟಿಕಲ್ ೩೭೧ಜೆ ಯಿಂದಾಗಿ ಸ್ವಲ್ಪ ಅನುಕೂಲ ಪಡೆಯುತ್ತದೆ. ಆಗ ವಿಜಾಪುರ ರಾಜ್ಯದ ಹಿಂದುಳಿದ ಜಿಲ್ಲೆಗಳಲ್ಲಿ ಮೊದಲನೆಯದಾಗುತ್ತದೆ. ಹತ್ತು ಲಕ್ಷ ಹೆಕ್ಟರ್ ಫಲವತ್ತಾದ ಭೂಮಿ, ಪಕ್ಕದಲ್ಲಿ ರಾಜ್ಯದ ದೊಡ್ಡ ಜಲಾಶಯ (ಆಲಮಟ್ಟಿ)ವನ್ನಿಟ್ಟುಕೊಂಡು, ರಾಜಕೀಯ ಇಚ್ಛಾಶಕ್ತಿ ಇಲ್ಲದ ನಾಯಕರನ್ನಿಟ್ಟುಕೊಂಡು ಈ ಜಿಲ್ಲೆ ಬಳಲುತ್ತಿದೆ. ಈ ಜಿಲ್ಲೆಗೆ ಬೇಕಾದ್ದು ಐದಾರು ಟಿ.ಎಂ.ಸಿ. ನೀರು, ಮುನ್ನೂರು ಕೋಟಿ ರೂಪಾಯಿ. ಪ್ರತಿವರ್ಷ ಮಠಾಧಿಪತಿಗಳಿಗೆ ನೂರು ಕೋಟಿಗಿಂತ ಹೆಚ್ಚಿಗೆ ಕೊಡುವ ಸರಕಾರ ಈ ಜಿಲ್ಲೆಗೆ ಗಮನ ಕೊಟ್ಟರೆ, ಜಮೀನ್ದಾರಿ ಮನೆತನದ ಪ್ರತಿಷ್ಠಿತ ರಾಜಕಾರಣಿಗಳು, ಅವರ ಕಣ್ಣನ್ನೆಯಲ್ಲಿಯೇ ನಡೆವ ಮೀಸಲು ಕ್ಷೇತ್ರಗಳ ಶಾಸಕರು, ಸಂಕಷ್ಟದಲ್ಲಿರುವ ಜನತೆ ಬೀದಿಗಿಳಿದು ಹೋರಾಡದಿದ್ದರೆ ಶತಮಾನಗಳ ಸಂಕಷ್ಟದಲ್ಲಿರುವ ಈ ಜಿಲ್ಲೆ ಎಲ್ಲ ಇದ್ದೂ ಎಲ್ಲವನ್ನೂ ಕಳೆದುಕೊಳ್ಳುವ ಅಪಾಯದಲ್ಲಿದೆ.

ಕಾಯಕ ಹಾಗೂ ದಾಸೋಹ ಎಂಬ ಆರ್ಥಿಕ ಸಿದ್ಧಾಂತವನ್ನು ಕೊಟ್ಟ ನೆಲದಲ್ಲಿ ಕಾಯಕ (ಉತ್ಪಾದನೆ)ವೂ ಇಲ್ಲ, ದಾಸೋಹ (ವಿತರಣೆ)ವೂ ಇಲ್ಲ. ವಚನಕಾರರ ಈ ಆರ್ಥಿಕ ನೀತಿ ಕೇವಲ ಉತ್ಪಾದನೆ ಮತ್ತು ಉಪಭೋಗವನ್ನು ಮಾತ್ರ ಹೇಳಲಿಲ್ಲ, ಕಾಯಕಮೂಲದ ವ್ಯಕ್ತಿಗತ ಉತ್ಪಾದನೆಯಿದ್ದರೂ ಅದು ದಾಸೋಹದ ಮೂಲಕ ಸಾಮಾಜಿಕ ಉಪಭೋಗಕ್ಕೆ ಒಳಪಡಬೇಕೆಂಬ ಉದಾತ್ತ ಆಶಯವನ್ನು ಹೊಂದಿದ್ದರು. ಅಂಥ ನೆಲದಲ್ಲಿ ಸಾಮೂಹಿಕ ಶ್ರಮ, ಸಂಪತ್ತು ವ್ಯಕ್ತಿಗತ ಉಪಭೋಗಕ್ಕೆ ಬಳಕೆಯಾಗುತ್ತಿದೆ. ಈ ಜಿಲ್ಲೆ ಶತಮಾನಗಳಿಂದ ಆಂತರಿಕ ಸಮಸ್ಯೆಗಳನ್ನೇ ಇನ್ನೂ ಪರಿಹರಿಸಿಕೊಳ್ಳದಿರುವಾಗ, ಈಗ ಇಡೀ ದೇಶವೇ ಎದುರಿಸುತ್ತಿರುವ ಜಾಗತೀಕರಣ ನೀತಿಯ ಹೊಸ ಸವಾಲುಗಳನ್ನೂ ಎದುರಿಸಬೇಕಾಗಿದೆ. ಇದರ ಜೊತೆಗೇ ಸರಕಾರದ ಯೋಜನೆಗಳು ಭ್ರಷ್ಟಾಚಾರದ ಹಿಡುಗಿನಿಂದಾಗಿ ಸಮರ್ಪಕವಾಗಿ ಜಾರಿಯಾಗುತ್ತಿಲ್ಲ, ಆಂತರಿಕ ಉತ್ಪನ್ನವೂ ಕುಸಿದು ಅನುದಾನಗಳೂ ಕಸಿದು ಸಾಮಾನ್ಯ ಜನತೆಯ ಬದುಕು ಸಂಕಷ್ಟದಿಂದ ಕೂಡಿದೆ. ಆ ಜಿಲ್ಲೆಗೆ ಹೋಗಿಬಂದ ಸಾಹಿತಿಗಳು, ಬರಹಗಾರರು ಮೇಲಿನ ವಿಷಯ ಕುರಿತು ವಿವರವಾಗಿ ಅಧ್ಯಯನ ಮಾಡಿ ತಮ್ಮ ಬರಹಗಳ ಮೂಲಕ ಆ ಜಿಲ್ಲೆಯ ಶತಮಾನದ ಸಂಕಟಕ್ಕೆ ವೇದಿಕೆ ಒದಗಿಸಲೆಂಬುದು ನನ್ನ ಆಶಯ.

ಸಿದ್ದನಗೌಡ ಪಾಟೀಲ

## ಜೂನ್ ತಿಂಗಳಲ್ಲಿ ಮತ್ತೊಮ್ಮೆ ಚರ್ಚಿಸಬೇಕಾದ ಬಜೆಟ್...

## ಕರ್ನಾಟಕ ಬಜೆಟ್ ೨೦೧೩-೧೪

## ರಾಜ್ಯದ ಮುಂಗಡ ಪತ್ರ ೨೦೧೩

ಇದೊಂದು ತರಾತುರಿ ಬಜೆಟ್ಟು. ಅಕಾಲಿಕ. ಅದು ಹೊರಗೆಡಹುವ ಚಿಂತನೆಯೂ ಅಕಾಲಿಕ ಮತ್ತು ಅಪ್ರಸ್ತುತ. ಕೇಂದ್ರದ ಬಜೆಟ್ಟಿಗೆ ಮುಂಚೆ ಮಂಡಿಸುವ ಅಗತ್ಯ ಈ ಮುಖ್ಯಮಂತ್ರಿಗೆ ಮಾತ್ರ ಇತ್ತು. ಮಠಮಾನ್ಯಗಳಿಗೆ ಅಪಾರ ಮೊತ್ತದ ಸಾರ್ವಜನಿಕ ದೇಣಿಗೆ ನೀಡುವುದು ಯಾವುದೋ ಕಾಲದ ಮಧ್ಯಯುಗೀನ ಮನಃಸ್ಥಿತಿ. ಅವರು ಚುನಾವಣೆಯನ್ನು ಗಮನದಲ್ಲಿಟ್ಟುಕೊಂಡು ಹೀಗೆ ಮಾಡಿದ್ದರೆ, ಈ ಬಜೆಟ್ಟು ಅವರಿಗೆ ಮತ ತಂದುಕೊಡುತ್ತದೆಯೇ ಎಂದರೆ, ಬಹುಶಃ ಅವರು ಮಠಮಾನ್ಯಗಳಿಗೆ ಮೊಗೆದು ಮೊಗೆದು ಧಾರೆಯೆರೆದಿರುವ ಕೋಟಿ ಕೋಟಿ ಹಣ, ಅವರ ಪರವಾಗಿ ವೀರಶೈವ ಮಠಾಧೀಶರನ್ನು ಕಾರ್ಯತತ್ಪರವಾಗಿ ಮಾಡಬಹುದು ಅನ್ನುವುದು ನಿಜ. ಈ ರೀತಿ ಸಾರ್ವಜನಿಕ ಹಣವನ್ನು ಮತಧಾರ್ಮಿಕಗಳಿಗೆ ನೀಡುವುದು ಸಂವಿಧಾನಬದ್ಧವೇ ಅಂತ ಪರೀಕ್ಷಿಸಬೇಕು. ಭಾಜಪ ಆಳ್ವಿಕೆ


ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೫೦/- |
| ಮೂರು ವರ್ಷಕ್ಕೆ | ರೂ. ೩೫೦/- |

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು - ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೮೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

ಕಳೆದ ಐದು ವರ್ಷಗಳಲ್ಲಿ ಮಠಾಧೀಶರಿಗೆ ನೀಡಿರುವ ಹಣ ಅಷ್ಟೊಂದು! ಬಜೆಟ್ ಮೇಲಿನ ಚರ್ಚೆಗೆ ಉತ್ತರ ನೀಡುತ್ತ ಶ್ರೀ ಶೆಟ್ಟರು ತಾವೇ ಗೆದ್ದು ಬಂದು, ಇದೇ ಬಜೆಟ್ಟಿಗೆ ಸದನದ ಒಪ್ಪಿಗೆ ಪಡೆಯುವುದಾಗಿ ವಿಶ್ವಾಸ ವ್ಯಕ್ತಪಡಿಸಿದ್ದಾರೆ. ಸದ್ಯ ನಗರಸಭೆಗಳ ಚುನಾವಣೆ ಪ್ರಕಟವಾಗಿ, ಆಚಾರ ಸಂಹಿತೆ ಜಾರಿಗೆ ಬಂದಿದ್ದು, ಇನ್ನು ಯಾರಿಗೂ ಇವರು ದೇಣಿಗೆ ಘೋಷಿಸಲು ಆಗುವುದಿಲ್ಲ. ಮಠಾಧೀಶರ ಕೃಪೆಯಿಂದಲೇ ಅಧಿಕಾರಕ್ಕೆ ಬಂದ ಶ್ರೀ ಯಡಿಯೂರಪ್ಪ ಕೆಜೆಪಿ ಪಕ್ಷಕ್ಕೆ, ಗುರುಗಳ ಕಾರುಣ್ಯವಿಲ್ಲದೆ ಮತ ಪಡೆಯಲು ಸಾಧ್ಯವಿಲ್ಲ. ಗುರುಕರುಣೆ ಇಬ್ಬರಿಗೂ ದೊರಕುವ ಸಾಧ್ಯತೆ ಇದೆ. ಒಂದು ಸಂದೇಹವೆಂದರೆ, ಭಾಜಪ ಹೀಗೆ ಎರಡು ಪಕ್ಷವಾಗಿ ಒಡೆದು, ಚುನಾವಣೆ ಯಾದಮೇಲೆ, ಮಠಾಧೀಶರ ಅಪ್ಪಣೆಯ ಮೇರೆಗೆ ಮತ್ತೆ ಒಂದಾಗಬಹುದೋ? ಇದೊಂದು ನಕಲಿ ಬೇರ್ಪಡೆಯೇ? ಪ್ರತಿಪಕ್ಷವಾಗಿ ಕೆಜೆಪಿ ಬಜೆಟ್ ಬಗ್ಗೆ ಅಂಥದೇನೂ ಟೀಕೆ ಮಾಡಿಲ್ಲ.

ಸರ್ಕಾರ ಕನಿಷ್ಠ ಜವಾಬ್ದಾರಿ ನಿರ್ವಹಿಸಬೇಕು ಅನ್ನುವ ಚಿದಂಬರಂ ಸಿದ್ಧಾಂತ ಈಗ ಅಭಿವೃದ್ಧಿ ಸರಕಾರದ ಕೆಲಸವಲ್ಲ ಎಂದಾಗಿದೆ. ಅದರಿಂದ ಅವಕ್ಕೆ ಆದಾಯ ಕೂಡಿಸಿ, ಯೋಜನೆಗಳನ್ನು ರಚಿಸಿ, ಸಾಮಾಜಿಕ ನ್ಯಾಯವನ್ನು ಸಾಧಿಸುವಂಥ ಆರ್ಥಿಕ ಪ್ರಗತಿ ಪಡೆಯಬೇಕು ಅನ್ನುವ ಒತ್ತಡ ಇಲ್ಲವಾಗಿದೆ. ಎಲ್ಲವನ್ನೂ ಮಾರುಕಟ್ಟೆ ನಿರ್ಧರಿಸುತ್ತೆ ಅನ್ನುವ ತತ್ವವನ್ನು ಸ್ವೀಕರಿಸಿದ ಮೇಲೆ, ಸರ್ಕಾರದ ಬಜೆಟ್ ಕೇವಲ ಲೆಕ್ಕಪತ್ರವೇ ವಿನಾ, ಅದು ಯಾವುದೇ ಸಾಮಾಜಿಕ ಬದಲಾವಣೆಯ ದಿಶಾ ಸೂಚಕವಲ್ಲ. ಹಾಗೂ ಚುನಾವಣೆಯಲ್ಲಿ ಆರಿಸಿಬರುವ ಅನಿವಾರ್ಯತೆಯನ್ನು ಗಮನದಲ್ಲಿಟ್ಟು ಕೊಂಡು, ಕೆಲವು ಸಾಮಾಜಿಕ ಕಾರ್ಯಕ್ರಮಗಳು... ದಲಿತರ ಅಭಿವೃದ್ಧಿ, ರೈತರಿಗೆ ಬೆಂಬಲ ಮುಂತಾದುವನ್ನು ಮನಸ್ಸಿಲ್ಲದ ಮನಸ್ಸಿನಿಂದ ಕಾಟಾಚಾರಕ್ಕೆ ಒಂದಿಷ್ಟು ಮಾಡುವಂತೆ ತೋರ್ಪಡಿಸಿಕೊಳ್ಳುತ್ತವೆ. ಈಗಂತೂ ಶಿಕ್ಷಣ ಮತ್ತು ಆರೋಗ್ಯ ಕ್ಷೇತ್ರಗಳನ್ನು ಖಾಸಗೀಕರಣಗೊಳಿಸುವ ಭರದಲ್ಲಿ, ಈ ಖಾತೆಗಳಿಗೆ ಬೇಕಾದಷ್ಟು ಹಣವನ್ನು, ಅಂದರೆ ಈಗ ನೀಡಿರುವುದು ಸಾಲದು, ಅದಕ್ಕೆ ಬೇಕಾದ ಆದಾಯ ಸಂಗ್ರಹಿಸಿ, ನೀಡುವ ಅಗತ್ಯವೇ ಇಲ್ಲವಾಗಿದೆ. ಈ ಸರ್ಕಾರ ತನ್ನ ಲೆಕ್ಕದಲ್ಲಿ ಈ ಕ್ಷೇತ್ರಗಳಿಗೆ ತೋರಿಸುವ ಹಣದ ರಾಶಿ ಕೇವಲ ಯಥಾಸ್ಥಿತಿ ಉಳಿಸಿಕೊಳ್ಳಲೇ ಸಾಲದು. ಶಾಲೆಗಳನ್ನು ಮುಚ್ಚಿ, ಖಾಸಗಿಗೆ ನೀಡುವುದು, ಆಸ್ಪತ್ರೆಗಳನ್ನು ಖಾಸಗಿಗೆ ವಹಿಸುವುದು ಇವೆಲ್ಲ ತೆರೆಮರೆಯಲ್ಲಿ ಪ್ರಾರಂಭವಾಗಿವೆ.

ಇರುವ ವೆಚ್ಚಗಳಿಗೂ ಭಾಜಪ ಸರ್ಕಾರ ತನ್ನದೇ ಆದಾಯದ ಮೇಲೆ ಅವಲಂಬಿಸದೆ, ಅಂದರೆ ಅಗತ್ಯಬಿದ್ದಷ್ಟು ತೆರಿಗೆ ವಿಧಿಸಿ, ವಸೂಲಿ ಮಾಡಿ ಸಂಗ್ರಹಿಸದೆ, ಸಾಲ ತೆಗೆದು ಸರ್ಕಾರ ನಡೆಸುತ್ತಿದೆ. ಕಳೆದ ಇಪ್ಪತ್ತು ವರ್ಷಗಳಲ್ಲಿ ಆಗಿರುವ ಸಾಲಕ್ಕಿಂತ, ಈ ಸರ್ಕಾರದ ಐದು ವರ್ಷಗಳಲ್ಲಿ ಸಾರ್ವಜನಿಕ ಸಾಲ ದ್ವಿಗುಣಗೊಂಡಿದೆ. ಗಣಿಗಾರಿಕೆಯಿಂದ ಬರುತ್ತಿದ್ದ ಆದಾಯವನ್ನು ಆ ಕರ್ಮಕಾಂಡದಲ್ಲಿ ಕಳೆದುಕೊಂಡದ್ದರ ಪರಿಣಾಮ ಇನ್ನೂ ಹಲವು ವರ್ಷ ಸರ್ಕಾರವನ್ನು ಆದಾಯ ಕೊರತೆ ಬಾಧಿಸುತ್ತದೆ. ರಾಜ್ಯದ ಅಭಿವೃದ್ಧಿ ದರ ರಾಷ್ಟ್ರದಕ್ಕಿಂತ ಕಡಿಮೆ. ರಾಷ್ಟ್ರದ್ದು ಕಳೆದ ಇಪ್ಪತ್ತು ವರ್ಷಗಳಲ್ಲಿ ಅತ್ಯಂತ ಕಡಿಮೆ. ಈ ವರ್ಷ ಅದು ಶೇ. ೫ನ್ನೂ ಏರುವಂತೆ ಕಾಣುತ್ತಿಲ್ಲ. ಅಂದರೆ ಸಾಲದಮೇಲೆ ಬದುಕುವ ರಾಜ್ಯ ಸರ್ಕಾರವೂ, ಬಜೆಟ್ಟನ್ನು ಸಮತೂಕದಲ್ಲಿ ನಿರ್ಭರಿಸ ಲಾಗದೆ, ಬೆಲೆಯೇರಿಕೆ ಮತ್ತು ಹಣದುಬ್ಬರದ ಪರಿಸ್ಥಿತಿಗೆ ತನ್ನದೇ ಕೊಡುಗೆಯನ್ನು ಮಾಡಿದೆ. ಒಟ್ಟಿನಲ್ಲಿ ಭಾಜಪದ ಐದು ವರ್ಷದ ಆಧಿಪತ್ಯದಲ್ಲಿ, ನಮ್ಮ ರಾಜ್ಯ, ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ರೋಗಗ್ರಸ್ತ ರಾಜ್ಯ ಎನಿಸಿಕೊಳ್ಳುತ್ತಿದೆ.

ಬಿಲ್ಡರ್ ಲಾಬಿಗೆ ಸಂತೋಷವನ್ನುಂಟುಮಾಡುವ ಬೆಂಗಳೂರು ನಗರದ ರಸ್ತೆ, ರಿಂಗ್ ರೋಡ್ ಮುಂತಾದವಕ್ಕೆ ರೂ. ೪೭೧೩ ಕೋಟಿ ತೋರಿಸಿರುವ ಬೆಂಗಳೂರು ನಗರ ಅಭಿವೃದ್ಧಿ ಲೆಕ್ಕದಲ್ಲಿ, ಸಾರ್ವಜನಿಕ ಸಾರಿಗೆಯ ಅಭಿವೃದ್ಧಿಯ ಮಾತೇ ಇಲ್ಲ. ನಗರ ಸುತ್ತಿಬರುವ ರೈಲು ಕಲ್ಪಿಸುವುದು, ಈಗಾಗಲೇ ಇರುವ ಹಳಿಯ ಮೇಲೆ ಸಾಧ್ಯ ಮತ್ತು ಅದನ್ನು ಕೂಡಲೇ ಮಾಡಬಹುದು. ಆದರೆ ಕಂಟ್ರಾಕ್ಟರುಗಳಿಗೆ ಲಾಭ ತರದ ಈ ಯೋಜನೆ ಸರ್ಕಾರಕ್ಕೆ ಬೇಕಿಲ್ಲ. ಜಗತ್ತಿನ ಮುಂದುವರಿದ ನಗರಗಳಲ್ಲೆಲ್ಲ ನಗರದ ತ್ಯಾಜ್ಯವಸ್ತುಗಳನ್ನು ಲಾಭದಾಯಕವಾಗಿ ನಿರ್ವಹಿಸುವ ಅನೇಕ ಆಧುನಿಕ ತಂತ್ರಜ್ಞಾನದ ಮಾದರಿಗಳಿವೆ. ಆ ಆಧುನಿಕ, ಪರಿಸರಸ್ನೇಹಿ, ಮಾನವ ಸಂವೇದಿ ಮಾದರಿಗಳು ನಮ್ಮ ಜರೂರು. ಸರ್ಕಾರದ ಹಣದಲ್ಲಿ ಜಗತ್ತನ್ನೆಲ್ಲ ಸುತ್ತಿಬರುವ ಸದಸ್ಯರಿಗೆ ಇವು ಕಾಣಲೇ ಇಲ್ಲವೇ? ಬಜೆಟ್ ಮಾಡುವಾಗ ಇದು ನೆನಪಿಗೆ ಬರಲಿಲ್ಲವೇ? ಬೆಂಗಳೂರಿನ ಬಹುಭಾಗ ವಿಧಾನ ಸಭಾ ಸದಸ್ಯರನ್ನು ಪಡೆದಿರುವ ಭಾಜಪವನ್ನು ನಗರದವರು ಪುನಃ ಆರಿಸಬೇಕೆ? ನಗರ ತ್ಯಾಜ್ಯಗಳ ವಿಲೇವಾರಿಯ ಬವಣೆಯನ್ನು ಎಷ್ಟು ದಿನ ಸಹಿಸುತ್ತಾರೆ? ನಗರ ತ್ಯಾಜ್ಯದಲ್ಲಿ ಲಾಭದಾಯಕ ಉದ್ಯಮದ ಅವಕಾಶವನ್ನು ಕಾಣಲಾರದ ಈ ಜನ ಅದ್ಯಾವ ಸೀಮೆ ಉದ್ಯಮಿಗಳು?

ಈಜಿಪುರದ ಬಡವರನ್ನು ಡೆವಲಪ್ಪರ್ ಲಾಬಿಗಾಗಿ ಒಕ್ಕಲೆಬ್ಬಿಸಿದ ಈ ಸರ್ಕಾರ, ಬಡವರಿಗೆ ಮನೆ ಅನ್ನುವ ಲೆಕ್ಕದಲ್ಲಿ ರೂ. ೩,೮೫೧/- ಕೋಟಿ ತೋರಿಸಿರುವುದನ್ನು ಯಾರೂ ನಂಬುವುದಿಲ್ಲ. ಆ ಹಣದ ಬಹುಭಾಗ ಬೆಂಗಳೂರಿನಲ್ಲಿ ಹೊಸ ಬಡಾವಣೆಗೆ ವಿನಿಯೋಗವಾಗುತ್ತದೆ. ಈಗಾಗಲೇ ಆಸ್ಫೋಟಕವಾಗಿ ಬೆಳೆದಿರುವ ಈ ನಗರವನ್ನು ಇನ್ನೂ ವಿಸ್ತರಿಸಬೇಕೆ? ಅಡೆತಡೆಯಿಲ್ಲದೆ ಬಹುಮಹಡಿಗಳಿಗೆ, ಗಗನಚುಂಬಿ ಕಟ್ಟಡಗಳಿಗೆ ದಾರಿಮಾಡಿಕೊಡುತ್ತಿರುವ ಈ ನಗರ ಮೂಲಭೂತ ಅಗತ್ಯಗಳಾದ ನೀರನ್ನು ಎಲ್ಲಿಂದ ತರುತ್ತದೆ? ಹಾಗಿಲ್ಲದಿದ್ದರೆ, ಇನ್ನು ನಗರದ ಬೆಳವಣಿಗೆ ಸಾಕು ಅನ್ನುವುದು ಯಾವಾಗ? ಈ ಬಜೆಟ್ ನಗರವನ್ನು ಇನ್ನೂ ವಿಸ್ತರಿಸುವ ಮನಃಸ್ಥಿತಿ ಹೊಂದಿದೆ.

ಸಾಮಾಜಿಕ ಬದಲಾವಣೆಗೆ ಅಗತ್ಯವಾದ ಶಿಕ್ಷಣ ಮತ್ತು ಆರೋಗ್ಯ ಕ್ಷೇತ್ರಗಳ ಅಭಿವೃದ್ಧಿಗೆ ಸಾಕಷ್ಟು ವ್ಯಯ ಮಾಡಲು ಆಗದಿರುವುದಕ್ಕೆ ಮುಖ್ಯ ಕಾರಣ ವಿತ್ತೀಯ ಹೊಣೆಗಾರಿಕೆ, ಕಾನೂನು ಅನ್ನುವ ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆಯ ನೀತಿಗೆ ಬದ್ಧವಾಗಿರುವುದು; ಅದೇ ಕಾರಣ ಖಾಸಗಿ ಮತ್ತು ಮಾರುಕಟ್ಟೆ ಮಾದರಿಯನ್ನೇ ಆರ್ಥಿಕ ಅಭಿವೃದ್ಧಿಗೆ ಅವಲಂಬಿಸಿದ ನೀತಿಯಿಂದಾಗಿ, ಅವರಿಂದ ಸಾಕಷ್ಟು ತೆರಿಗೆ ವಸೂಲಿ ಮಾಡದೆ ಇರುವುದು. ಕರ್ನಾಟಕ ಸರ್ಕಾರ ಈ ಕುರಿತು ಕೇಂದ್ರದಿಂದ ಶಭಾಸ್‌ಗಿರಿ ಪಡೆದುಕೊಂಡಿದೆ. ಆದರೆ ರಾಷ್ಟ್ರಮಟ್ಟದಲ್ಲಿ ಈ ರಾಜ್ಯದ ಪ್ರಗತಿಯ ದರ ಕುಸಿದಿದೆ. ಹೀಗಾಗಿ ಈ ಸಲದ ವಿತ್ತೀಯ ಕೊರತೆ ಶೇ. ೨.೮ ಮತ್ತು ಸಾಲ ಮುಂತಾದ ಹೊಣೆಗಾರಿಕೆಯೂ ಶೇ. ೨೨.೩೫ ಇದ್ದು ಅದೂ ಅಪೇಕ್ಷಿತ ಮಿತಿಯೊಳಗೆ ಇದೆ. ಆದರೆ ಈ ಅಂಕಿ-ಸಂಖ್ಯೆಗಳಿಂದ ಕುಸಿಯುತ್ತಿರುವ ಕೃಷಿ ಕ್ಷೇತ್ರ, ಪ್ರಗತಿಯೇ ಇಲ್ಲದ ನೀರಾವರಿ, ಬರಲಿರುವ ವ್ಯಾಪಕ ನೀರಿನ ಕ್ಷಾಮ ಇವಾವುವುಗಳ ಸತ್ಯಾಂಶವೂ ಹೊರಗೆಡಹುವುದಿಲ್ಲ. ಈ ಬಜೆಟ್ಟಿನೊಳಗೆ ಬೆಂಗಳೂರು ನಗರದ ಮೂಲಭೂತ ಸೌಕರ್ಯಗಳನ್ನು ಬಹುವಾಗಿ ಬಳಸುವ ಐ.ಟಿ. ಕ್ಷೇತ್ರಕ್ಕೆ ಇನ್ನೂ ತೆರಿಗೆಯ ವಿನಾಯ್ತಿ ಮುಂದುವರಿಸಿರುವುದು ಯಾವ ನ್ಯಾಯ? ಬಂಡವಾಳದ ಗುರು ಅಮೆರಿಕಾ ದೇಶ ಒಬಾಮಾ ಆಡಳಿತದಲ್ಲಿ, ಅಭಿವೃದ್ಧಿಗೆ ಆದ್ಯತೆ ನೀಡಿ; ಅದೇ ವಿತ್ತೀಯ ಕೊರತೆಯನ್ನು ನೀಗಿಸುವ ದಾರಿ ಅಂತ ಹೇಳಿದೆ. ಆದರೆ ಅವರ ಅಡಿಯಾಳುಗಳಾದ ನಮ್ಮ ನಾಯಕರು, ಹಳೆಯ ಮಂತ್ರವನ್ನೇ ಇನ್ನೂ ಜಪಿಸುತ್ತಿದ್ದಾರೆ, ಈ ಬಜೆಟ್ಟೂ, ಬರಲಿರುವ ಕೇಂದ್ರ ಬಜೆಟ್ಟೂ ಇದೇ ಧೋರಣೆಯನ್ನು ಹೊಂದಿದ, ಅಭಿವೃದ್ಧಿ ವಿರೋಧಕಗಳು ಎಂದು ಭಾವಿಸಬಹುದಾಗಿದೆ.

ಬಿಪಿಎಲ್ ರೇಶನ್ ಕಾರ್ಡುಗಳಿಗೆ ಒಂದು ಕೆಜಿ ಅಕ್ಕಿಗೆ ರೂ. ೨ರಂತೆ ಬೆಲೆ ನಿಗದಿ ಮಾಡಿರುವುದು ಸ್ವಾಗತಾರ್ಹ. ಆದರೆ ಈಗಿನ ಬಿಪಿಎಲ್ ಲೆಕ್ಕ ಸರಿಯಿಲ್ಲ. ತುಂಬ ಜನ ಬಿಪಿಎಲ್ ಎನ್ನುವ ಅಳತೆಯ ಮೇಲಿನ ರೇಖೆಯಲ್ಲಿ ಇದ್ದರೂ, ಅವರೂ ಕಡು ಬಡವರಾಗಿದ್ದಾರೆ. ಇದು ಮಾಹಿತಿ ಸಂಗ್ರಹಿಸುವ ರೀತಿಯಲ್ಲಿನ ನ್ಯೂನತೆಯ ಪರಿಣಾಮ. ಈ ಗುಂಪಿಗೆ ಇನ್ನೂ ಮೇಲಿನವರನ್ನೂ ಸೇರಿಸಿ, ರೇಶನ್ ಪ್ರಮಾಣವನ್ನು ಹೆಚ್ಚಿಸದೇ, ಈಗ ಮಾಡಿರುವುದು ಕೇವಲ ತೋರಿಕೆಯದಾಗುತ್ತದೆ. ಜೀವನದ ಎಲ್ಲ ಅವಶ್ಯಕತೆಗಳೂ ಬೆಲೆ ಹೆಚ್ಚಿ, ಹಣದುಬ್ಬರ ದೇಶದ ಶೇ. ೫೦ಕ್ಕೂ ಹೆಚ್ಚಿನ ಜನರನ್ನು ಮಧ್ಯಮವರ್ಗದವರನ್ನು ಬಾಧಿಸುತ್ತಿದೆ. ಕೇಂದ್ರ ಸರ್ಕಾರ ಮಂಡಿಸಲಿರುವ ಆಹಾರ ಭದ್ರತಾ ಕಾಯಿದೆ ಈ ವಿಷಯವನ್ನು ಗಮನಿಸಿದಂತೆ ಕಾಣುತ್ತಿಲ್ಲ. ಅದಕ್ಕೆ ಅದಕ್ಕೂ ಅಷ್ಟು ವಿರೋಧ ಪ್ರಕಟವಾಗಿರುವುದು. ಒಟ್ಟಾರೆ ಈ ಬಜೆಟ್ಟು ರಾಜ್ಯದ ಸರ್ವತೋಮುಖ ಅಭಿವೃದ್ಧಿಗೆ ಅಷ್ಟೇನೂ ಸಹಾಯಕಾರಿಯಾಗಿಲ್ಲ. ಅಲ್ಲದೇ, ಹೊಸದಾಗಿ ಆರಿಸಿಬರುವ ಶಾಸನಸಭೆ ಇದನ್ನು ಪುನಃ ಪರಿಷ್ಕರಿಸುತ್ತದೆ. ಚುನಾವಣೆಯಲ್ಲಿ ಪ್ರಕಟವಾಗುವ ಜನಮತದ ಸ್ವರೂಪ ಅದನ್ನು ಪ್ರಭಾವಿಸುತ್ತದೆ. ಈ ಬಜೆಟ್ ಭಾಜಪಕ್ಕೆ ಚುನಾವಣೆಯಲ್ಲಿ ವಿರೋಧವನ್ನು ಹೆಚ್ಚಿಸುತ್ತದೆ ಈ ಪಕ್ಷ ಕೇವಲ ವೀರಶೈವರ ಮತದಿಂದ ಅಧಿಕಾರಕ್ಕೆ ಬರಲಾಗುವುದಿಲ್ಲ ಹೀಗಾಗಿ ನಾವು ಮತ್ತೊಮ್ಮೆ ರಾಜ್ಯದ ಬಜೆಟ್ಟನ್ನು ಚರ್ಚಿಸಬೇಕಾಗುತ್ತದೆ.

# ನೈತಿಕ ಗೂಂಡಾಗಿರಿ ಮಟ್ಟ ಹಾಕಿರಿ

ದಕ್ಷಿಣ ಕನ್ನಡ ಜಿಲ್ಲೆ ಕರ್ನಾಟಕದಲ್ಲಿ ಸಂಘಪರಿವಾರದ ಉಪಟಳದಲ್ಲಿ ಸಿಕ್ಕಿಕೊಂಡಿದೆ. ಒಂದು ರೀತಿಯಲ್ಲಿ ಅದು ನೈತಿಕ ಪೊಲೀಸುಗಿರಿಗೆ ಪ್ರಯೋಗಾಲಯ ವಾಗುತ್ತಿದೆ. ಭಾಜಪ ಸರಕಾರ ಇರುವುದರಿಂದ ಪರಿವಾರದ ಜೊತೆ ಶಾಮೀಲಾಗುತ್ತಿರುವುದು ಆತಂಕಕಾರಿ. ಶ್ರೀರಾಮ ಸೇನೆ, ಭಜರಂಗದಳ, ದುರ್ಗಾಸೇನೆ ಮುಂತಾದ ತಂಡಗಳು ನಡೆಸುತ್ತಿರುವ ಚಟುವಟಿಕೆಗಳು ಇಡೀ ದೇಶದಲ್ಲೇ ಸುದ್ದಿಮಾಡಿ, ಕನ್ನಡಿಗರು ತಲೆತಗ್ಗಿಸುವಂತೆ ಮಾಡಿವೆ. ಯುವಕ, ಯುವತಿಯರ ಮೇಲೆ ಆಗಾಗ್ಗೆ ನಡೆಯುತ್ತಿರುವ ದಾಳಿ ಭಯದ ವಾತಾವರಣವನ್ನು ಸೃಷ್ಟಿಸಿವೆ. ಹುಡುಗ-ಹುಡುಗಿಯರು ಒಟ್ಟಾಗಿ ಶಾಲಾ-ಕಾಲೇಜಿಗೆ ಹೋಗುವುದು ಹರಟುವುದು ಈ ನೈತಿಕ ಪೊಲೀಸರ ಕಣ್ಣು ಕೆಂಪಗಾಗಿಸುತ್ತದೆ. ಅದರಲ್ಲೂ ಸಂಬಂಧಪಟ್ಟವರು ಅನ್ಯಜಾತಿಯವರಾಗಿದ್ದರಂತೂ ತೀರಿತು. ಹೊಡೆತ ತಪ್ಪಿದ್ದಲ್ಲ. ಸಾಕಷ್ಟು ಸಂಖ್ಯೆಯಲ್ಲಿ ಕ್ರಿಶ್ಚಿಯನ್ನರು, ಮುಸಲ್ಮಾನರು ಇರುವ ಈ ಜಿಲ್ಲೆಯಲ್ಲಿ ಪರಸ್ಪರ ಬೆರೆಯುವುದೇ ಅಪರಾಧವಾಗುತ್ತಿದೆ. ಹಿಂದೂ ಸಂಸ್ಕೃತಿಯ ರಕ್ಷಣೆಯ ಹೆಸರಿನಲ್ಲಿ ನಡೆಯುತ್ತಿರುವ ಇಂಥ ದೌರ್ಜನ್ಯಗಳು ಅವಮಾನಕರ. ಸರಕಾರ ಈ ಸಂಘಟನೆಗಳ ಮೇಲೆ ಕ್ರಮಕೈಗೊಳ್ಳದಿರುವುದು ಖಂಡನೀಯ. ಹೀಗೆಯೇ ಮುಂದುವರಿದರೆ ಮಂಗಳೂರಿನಲ್ಲಿ ಹುಡುಗ ಹುಡುಗಿಯರು ಸುರಕ್ಷಿತವಾಗಿ ಓಡಾಡುವುದು ಕಷ್ಟವಾದೀತು. ಇಸ್ಲಾಮಿಕ್ ಮೂಲಭೂತವಾದಿ ತಾಲಿಬಾನ್‌ಗಳು ಧಾರ್ಮಿಕ ಕಟ್ಟಳೆ ವಿಧಿಸಲು ನಡೆಸುತ್ತಿರುವ ದಾಂಧಲೆಯನ್ನೇ ಜಿಲ್ಲೆಯಲ್ಲಿ ನಡೆಯುತ್ತಿರುವ ಘಟನೆಗಳು ನೆನಪಿಗೆ ತರುತ್ತವೆ.

ಮಂಗಳೂರು, ಬಂಟ್ವಾಳ, ಪುತ್ತೂರು ಮುಂತಾದ ಕಡೆಗಳಲ್ಲಿ ಸಂಘಪರಿವಾರದ ಈ ತುಕಡಿಗಳೂ ಸ್ವೇಚ್ಛಾಚಾರದಿಂದ ವರ್ತಿಸತೊಡಗಿವೆ. ಐಸ್‌ಕ್ರೀಮ್ ಪಾರ್ಲರ್ ಒಂದರಲ್ಲಿ ಸೇರಿದ್ದ ಹುಡುಗ-ಹುಡುಗಿಯರನ್ನು ಅನೈತಿಕ ಚಟುವಟಿಕೆಯಲ್ಲಿ ತೊಡಗಿದ್ದಾರೆಂದು ಶಂಕಿಸಿ ಭಜರಂಗದಳ ಮತ್ತು ದುರ್ಗಾಸೇನೆ ಕಾರ್ಯಕರ್ತರು ಪೊಲೀಸು ಠಾಣೆಗೆ ಎಳೆದು ತಂದುದು ಮಂಗಳೂರಿನಲ್ಲಿ ನಡೆದ ಇತ್ತೀಚಿನ ಪ್ರಕರಣ. ಪೊಲೀಸರು ಕೂಡ ಈ ನೈತಿಕಸೇನೆಯ ಕ್ರಮವನ್ನು ಸಮರ್ಥಿಸಿಕೊಂಡಿರುವುದೀಗ ಗಾಬರಿಗೊಳಿಸುತ್ತದೆ. ಯುವಕರ ಜೊತೆ ಯುವತಿಯರು ಧೂಮಪಾನ ಮಾಡುತ್ತಿದ್ದರೆಂಬುದೇ ವಿದ್ಯಾರ್ಥಿಗಳ ಮೇಲಿನ ಆಪಾದನೆ. ಇದರಲ್ಲಿ ತಪ್ಪೇನಿದೆ? ಅರ್ಥವಾಗದು. ಈ ಘಟನೆಗೆ ಮುನ್ನ ಕೆಲ ತಿಂಗಳ ಹಿಂದೆ ರಸ್ತೆಯಲ್ಲಿ ಮಾತನಾಡುತ್ತ ನಿಂತಿದ್ದ ವಿದ್ಯಾರ್ಥಿ-ವಿದ್ಯಾರ್ಥಿನಿಯರನ್ನು ಭಜರಂಗದವರು ಹಿಡಿದು ಥಳಿಸಿದ ಪ್ರಕರಣ ವರದಿಯಾಗಿತ್ತು. ಪೊಲೀಸರು ಈ ಬಗ್ಗೆ ಯಾವುದೇ ಕ್ರಮಕೈಗೊಳ್ಳಲಿಲ್ಲ. ಇವರು ಅನ್ಯ ಜಾತಿಯವರಾಗಿದ್ದುದೇ ದಾಳಿಗೆ ಕಾರಣ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಂಘಪರಿವಾರ ಸಾಕಷ್ಟು ಪ್ರಬಲವಾಗಿದೆ. ಹಿಂದೂ ಜಾಗರಣ ಸಮಿತಿ, ಶ್ರೀರಾಮಸೇನೆ, ದುರ್ಗಾಸೇನೆ, ಭಜರಂಗದಳ ಮೊದಲಾದ ಸಂಘಟನೆಗಳು ಸಂಸ್ಕೃತಿಯ ರಕ್ಷಣೆಯ ಹೆಸರಿನಲ್ಲಿ ನಡೆದುಕೊಳ್ಳುತ್ತಿರುವ ರೀತಿ ಸಂವಿಧಾನ ವಿರೋಧಿಯಾಗಿದೆ. ಇವುಗಳ ಪುಂಡಾಟಿಕೆಯನ್ನು ಈಗಲೇ ಹತ್ತಿಕ್ಕದಿದ್ದರೆ ಮುಂದೆ ವಿಪರೀತಕ್ಕಿಟ್ಟುಕೊಳ್ಳುವುದು ಖಚಿತ. ನಾಗರಿಕ ಸಮಾಜ ಎಚ್ಚೆತ್ತು ಇಂಥ ಚಟುವಟಿಕೆಗಳನ್ನು ಪ್ರತಿಭಟಿಸಬೇಕಾಗಿದೆ.

ಸಂಘಪರಿವಾರದ ನೈತಿಕ ಪೊಲೀಸುಗಿರಿಗೆ ಹೆಚ್ಚಾಗಿ ಬಲಿಯಾಗುತ್ತಿರುವುದು ಮಹಿಳೆಯರು. ಸದ್ಯ ಐಸ್‌ಕ್ರೀಮ್ ಪಾರ್ಲರ್ ಪ್ರಕರಣದಲ್ಲಿ ಸೇನೆಯವರು ಹಲ್ಲೆ ನಡೆಸದೇ ಇದ್ದದ್ದು ಪುಣ್ಯ. ಮೂರು ವರ್ಷಗಳ ಹಿಂದೆ ಮಂಗಳೂರಿನ ಪಬ್ ಒಂದರ ಮೇಲೆ ದಾಳಿ ನಡೆಸಿ ಅಲ್ಲಿದ್ದ ಯುವಕ ಯುವತಿಯರನ್ನು ಹಿಗ್ಗಾಮುಗ್ಗ ಬಡಿದದ್ದು, ಯುವತಿಯರ ಉಡುಪು ಹರಿದು ಎಳೆದಾಡಿದ್ದು ಇಡೀ ದೇಶದ ಗಮನವನ್ನು ಸೆಳೆಯಿತು. 'ಪಬ್ ಸಂಸ್ಕೃತಿ'ಯ ವಿರೋಧಿಗಳಾದ ಹಿಂದುತ್ವವಾದಿ ಸಂಘಟನೆಗಳು ಈ ದುಷ್ಕೃತ್ಯದಲ್ಲಿ ಭಾಗಿಯಾಗಿದ್ದುವು. ಇದುವರೆಗೆ ಅಪರಾಧಿಗಳಿಗೆ ಶಿಕ್ಷೆಯಾಗಿಲ್ಲ. ಇದರ ಹಿಂದೆಯೇ ಸಂಭವಿಸಿದ್ದು ಕಳೆದ ವರ್ಷದ ಹೋಮ್‌ಸ್ಟೇ ಪ್ರಕರಣ. ಹಿಂದೂ ಜಾಗರಣ ಸಮಿತಿಯ ಕಾರ್ಯಕರ್ತರು ನಡೆಸಿದ ದಾಳಿ ಅಮಾನುಷವಾಗಿತ್ತು. ದೇಶದ ಎಲ್ಲ ಮಹಿಳಾ ಸಂಘಟನೆಗಳೂ ಸೈನಿಕ ಪೊಲೀಸರ ಈ ಅನೈತಿಕ ಚರ್ಯೆಯನ್ನು ಖಂಡಿಸಿವೆ. ಆದರೂ ರಾಜ್ಯ ಸರಕಾರ ಸಂಘಪರಿವಾರದ ಈ ಚಟುವಟಿಕೆಗಳನ್ನು ಹಿಂದಿಟ್ಟುಕೊಳ್ಳುತ್ತಿದೆ. ಈ ಸಂಘಟನೆಗಳು ನಡೆಸುತ್ತಿರುವ ದುಷ್ಕೃತ್ಯಗಳು ಸಂವಿಧಾನ ವಿರೋಧಿಯಾಗಿವೆ, ಸ್ವಾತಂತ್ರ್ಯದ ಹರಣವಾಗಿದೆ. ಇಂಥ ದೌರ್ಜನ್ಯಗಳು ನಾಗರಿಕ ಸಮಾಜಕ್ಕೆ ತಕ್ಕುದಲ್ಲ. ಇತರರ ಮೇಲೆ 'ಸಂಸ್ಕೃತಿಯ ರಕ್ಷಣೆ'ಯ ನೆಪದಲ್ಲಿ ತಮ್ಮ ವಿಚಾರಧಾರೆಯನ್ನು ಹೊರಿಸಲು ನೋಡುತ್ತಿರುವ ಈ ಸಂಘಟನೆಗಳ ಕೃತ್ಯ ಅಕ್ಷಮ್ಯ. ಮಂಗಳೂರಿನಲ್ಲಿ ಪೊಲೀಸು ವ್ಯವಸ್ಥೆಯೇ ಕುಸಿದುಬಿದ್ದು ಸಂಘಪರಿವಾರದ ಪುಂಡರದೇ ಮೇಲುಗೈ ಆಗಿದೆಯೆಂದು ತೋರುತ್ತದೆ. ಸರಕಾರ ಇಂಥ ವಿಚಾರದಲ್ಲಿ ಕೈಕಟ್ಟಿ ಕುಳಿತಿರುವುದು. ಈ ಸಂಘಟನೆಗಳಿಗೆ ಇನ್ನಷ್ಟು ಪ್ರೋತ್ಸಾಹ ದೊರೆತಂತಾಗಿದೆ. ರಾಜ್ಯದ ವಿದ್ಯಾರ್ಥಿ ಸಂಘಟನೆಗಳು, ಯುವಜನ ಸಂಘಟನೆಗಳು, ಮಹಿಳಾ ಸಂಘಟನೆಗಳು ಮೊದಲಾದವು ಒಂದುಗೂಡಿ ಸಂಘಪರಿವಾರದ ನೈತಿಕ ಗೂಂಡಾಗಿರಿಯನ್ನು ವಿರೋಧಿಸಬೇಕು. ಪ್ರಕರಣಗಳಲ್ಲಿ ಭಾಗಿಯಾಗಿರುವ ಸಂಘಟನೆಗಳನ್ನು ನಿಷೇಧಿಸುವಂತೆ ಸರಕಾರದ ಮೇಲೆ ಒತ್ತಾಯ ತರಬೇಕು.

**Statement about ownership and other particulars about newspaper**

FORM IV

| | | |
|---|---|---|
| 1. Place of publication | : | Bangalore |
| 2. Periodicity of its publication | : | Monthly |
| 3. Printer's Name | : | R. S. Rajaram |
| Nationality | : | Indian |
| Address | : | Navakarnataka Publications (P) Ltd. Embassy Centre, Crescent Road P. B. No. 5159, Bangalore - 560 001 |
| 4. Publisher's Name | : | R. S. Rajaram |
| Nationality | : | Indian |
| Address | : | Navakarnataka Publications (P) Ltd. Embassy Centre, Crescent Road P. B. No. 5159, Bangalore - 560 001 |
| 5. Editor's Name | : | Dr. Siddanagouda Patil |
| Nationality | : | Indian |
| Address | : | Navakarnataka Publications (P) Ltd. Embassy Centre, Crescent Road P. B. No. 5159, Bangalore - 560 001 |
| 6. Name and address of individuals who own the newspaper and partners and shareholders holding more than one percent of the total capital | : | Navakarnataka Publications (P) Ltd., Embassy Centre, Crescent Road P. B. No. 5159 Bangalore - 560 001 (Sole Proprietors) |

I, R. S. Rajaram, hereby declare that the particulars given above are true to the best of my knowledge and belief.

**Sd/-**
**R. S. Rajaram**
**Publisher**

**Date : 28-2-2013**

*ಈ ತಿಂಗಳು (೩ನೇ ಪುಟದಿಂದ)*

ನಾವು ಹೇಳ ಹೊರಟಿರುವುದು ಈ ಗಣ್ಯಾತೀತರನ್ನು ಕೊಂಡೊಯ್ಯುವ ಹೆಲಿಕಾಪ್ಟರುಗಳ ಖರೀದಿಯಲ್ಲಿ ಆಗಿರುವ ಲಂಚದ ಪ್ರಕರಣ. ನೂರಾರು ಕೋಟಿ ರೂಪಾಯಿಗಳ ಲಂಚವನ್ನು ಮಧ್ಯವರ್ತಿಗಳಿಗೆ ನೀಡಲಾಗಿದೆ ಎಂಬ ಸುದ್ದಿ ಸ್ಫೋಟಗೊಂಡಿದ್ದು ಇಟಲಿಯಲ್ಲಿ. ಇದು ಇನ್ನೊಂದು ಬೊಫೋರ್ಸ್ ಹಗರಣವಾದೀತೆ? ನೋಡಬೇಕು. ಅಂತೂ ಈ ಭ್ರಷ್ಟಾಚಾರದ ಪ್ರಕರಣ ರಕ್ಷಣಾ ಇಲಾಖೆಯಲ್ಲಿ ಸಂಚಲನ ಮೂಡಿಸಿದೆ. ರಕ್ಷಣಾ ಸಚಿವರು ಪ್ರಕರಣವನ್ನು ಸಿಬಿಐ ತನಿಖೆಗೆ ಒಪ್ಪಿಸಿ ಕೈತೊಳೆದುಕೊಂಡಿದ್ದಾರೆ. ಸಾಮಾನ್ಯವಾಗಿ ರಕ್ಷಣಾ ಇಲಾಖೆ ಖರೀದಿ ಮಾಡುವ ಸರಂಜಾಮುಗಳ ವಿಚಾರದಲ್ಲಿ ನಡೆಯುವ ಅವ್ಯವಹಾರಗಳು ಬೆಳಕಿಗೆ ಬರುವುದೇ ಇಲ್ಲ, ಏಕೆಂದರೆ ಎಲ್ಲವೂ ರಹಸ್ಯ. ದೇಶದ ಭದ್ರತೆಗೆ ಸಂಬಂಧಿಸಿದ್ದು. ಈ ಹಗರಣವೂ ಹೆಲಿಕಾಪ್ಟರಿನಂತೆ ಗಾಳಿಯಲ್ಲಿ ಹಾರಿ ಹೋಗುವುದೇ? ನೋಡಬೇಕು.

✶ ✶ ✶

ನಮ್ಮ ರಾಜ್ಯದ ಸೌಭಾಗ್ಯಗಳಲ್ಲಿ ನಾವು ಪಡೆದಿರುವ ಮಂತ್ರಿಗಳೂ ಸೇರಿದ್ದಾರೆ. ಎಂತೆಂತಹ ಪ್ರವೀಣರಿದ್ದಾರೆ, ವೈದ್ಯರಿದ್ದಾರೆ, ಸಂಸ್ಕೃತಿ ಪ್ರತಿಪಾದಕರಿದ್ದಾರೆ, ಆರ್ಥಿಕ ತಜ್ಞರಿದ್ದಾರೆ! ಉನ್ನತ ಶಿಕ್ಷಣ ಪಡೆಯಲೆಂದು ಉನ್ನತ ಶಿಕ್ಷಣ ಸಚಿವರು, ಪುಸ್ತಕಗಳೆಂದರೇನು ಮತ್ತು ಅವು ಏಕಿವೆ ಎಂಬುದನ್ನು ತಿಳಿಯಲು ಗ್ರಂಥಭಂಡಾರಗಳ ಸಚಿವರು, ವೈದ್ಯಕೀಯವೆಂದರೆ ಮಂತ್ರಜಪ ಮಾಡುವುದೆಂದು ಭ್ರಮಿಸುವ ಆರೋಗ್ಯ ಸಚಿವರು, ಹೀಗೆ ಬೆಳೆಯುತ್ತದೆ ನಮ್ಮ ಸಚಿವರ ಪಟ್ಟಿ. ಜನವರಿಯಲ್ಲಿ ಮೈಸೂರು ಮಹಾರಾಣಿ ವಿಜ್ಞಾನ ಕಾಲೇಜಿನ ಸಂಸ್ಕೃತ ವಿಭಾಗವು ಎರಡು ದಿನಗಳ ವಿಚಾರಗೋಷ್ಠಿ ಏರ್ಪಡಿಸಿತ್ತು. ವಿಷಯ: ಆಯುರ್ವೇದ. ಸರ್ಕಾರದ 'ಆಯುಷ್' ಇಲಾಖೆ ಮತ್ತು ಸರ್ಕಾರಿ ಆಯುರ್ವೇದ ಕಾಲೇಜು, ಇವುಗಳ ಜೊತೆ ಸೇರಿ ಮಹಾರಾಣಿ ಕಾಲೇಜು ಗೋಷ್ಠಿಯನ್ನು ನಡೆಸಿತು. ಆರೋಗ್ಯ ಸಚಿವ ಡಾ|| ರಾಮದಾಸ್ ಉದ್ಘಾಟನೆ ನೆರವೇರಿಸುವುದಿತ್ತು. ಮಹಾನುಭಾವರ ಆಗಮನಕ್ಕಾಗಿ ಕಾದು ಸುಸ್ತಾದ ಸಂಘಟಕರು ಮೊದಲ ಗೋಷ್ಠಿಯನ್ನು ಆರಂಭಿಸಿದರು. ತಜ್ಞರೊಬ್ಬರು ವೈದ್ಯಕೀಯ ಗಿಡ-ಮೂಲಿಕೆಗಳನ್ನು ಕುರಿತಂತೆ ಪ್ರಾತ್ಯಕ್ಷಿಕೆಗಳೊಂದಿಗೆ ಉಪನ್ಯಾಸ ಆರಂಭಿಸಿದರು. ಇನ್ನೂರಕ್ಕೂ ಹೆಚ್ಚು ಮಂದಿ ಉಪಸ್ಥಿತರಿದ್ದು ಕುತೂಹಲದಿಂದ ಮಾತು ಕೇಳುತ್ತಿದ್ದರು. ಅವರಲ್ಲಿ ಶೇ. ೭೫ರಷ್ಟು ವಿದ್ಯಾರ್ಥಿ-ವಿದ್ಯಾರ್ಥಿನಿಯರು. ಸುಮಾರು ಮೂವತ್ತು ನಿಮಿಷ ಕಳೆದಿದೆ; ಬಂತು ಸಚಿವರ ಸವಾರಿ. ಸಂಘಟಕರ ಆನಂದಾತಿರೇಕದ ಪ್ರದರ್ಶನ, ಏಕಾಏಕಿ ಸಚಿವರು ಉಪನ್ಯಾಸ ನಡೆಯುತ್ತಿದ್ದುದನ್ನು ಲೆಕ್ಕಿಸದೆ ನೇರವಾಗಿ ವೇದಿಕೆ ಏರಿದ್ದು, ಉಪನ್ಯಾಸಕರು ಕಕ್ಕಾಬಿಕ್ಕಿಯಾಗಿ ನಿಂತದ್ದು, ಕಾಲೇಜಿನ ಪ್ರಾಚಾರ್ಯರು ಅತಿವಿನಯದಿಂದ ಸಚಿವರ ಹಿಂದೆಯೇ ಹೆಜ್ಜೆ ಹಾಕಿದ್ದು, ಎಲ್ಲಾ ಪ್ರೇಕ್ಷಣೀಯವಾಗಿದ್ದಿತು. ಈ ಸಚಿವ ಮಹಾಶಯನಿಗೆ ಅದೆಂತಹ ಸಂಸ್ಕೃತಿ ಪ್ರಜ್ಞೆ! ಉಪನ್ಯಾಸವನ್ನು ಮುಂದುವರಿಸಿರೆಂದು ಹೇಳಿ ಗಂಭೀರವಾಗಿ ಕೂತು ತಿಳಿವಳಿಕೆ ಪಡೆಯಬಹುದಿತ್ತು. ಆದರೆ ಆತನಿಗೆ ''ಅಮೋಘ ವಿದ್ವತ್ತನ್ನು'' ಹಂಚಿ ಓಡಿಹೋಗುವ ತರಾತುರಿ. ಸಂಘಟಕರಾದರೂ ಆತನಿಗೆ ಹೇಳಬಹುದಿತ್ತು: ''ಅಯ್ಯಾ ಮಹೋದಯ, ತಡವಾಗಿ ಬಂದಿದ್ದೀಯೆ, ಆದರೂ ನಿನ್ನನ್ನು ಸಹಿಸಲು ನಾವು ಸಿದ್ಧ. ಕುಳಿತು ಉಪನ್ಯಾಸ ಕೇಳು. ಆಮೇಲೆ ನಿನ್ನ ಅದ್ಭುತ ಭಾಷಣ, ಉದ್ಘಾಟನೆ, ಎಲ್ಲಾ ಮಾಡೋಣ,'' ಎಂದು. ಹಾಗೆ ಮಾಡದೆ ಉಪನ್ಯಾಸಕರನ್ನು ''ಸದ್ಯಕ್ಕೆ ನಿಲ್ಲಿಸಿ, ಆಮೇಲೆ ಮುಂದುವರಿಸುವಿರಂತೆ'' ಎಂದು ಹೇಳಿ ವೇದಿಕೆಯಿಂದ ಕೆಳಗಿಳಿಸಿದರು. ಅವರಾದರೂ ಸಂಕೋಚವಿಲ್ಲದೆ ಹೇಳಬಹುದಿತ್ತು: ''ಆಯಿತು, ನಿಮ್ಮ ಉದ್ಧಟತನದಿಂದ ಬೇಸರಿಸಿದ್ದೇನೆ. ಮತ್ತೆ ಉಪನ್ಯಾಸ ಮುಂದುವರಿಸುವುದೇನೂ ಬೇಡ. ಮಂತ್ರಿಯ ಅಮೋಘ ನುಡಿಗಳನ್ನು ವಿದ್ಯಾರ್ಥಿಗಳಿಗೆ ಕೇಳಿಸಿ. ನಾನು ಹೊರ ನಡೆಯುತ್ತೇನೆ, ನಮಸ್ಕಾರ'' ಎಂದು. ಹೇಳಲಿಲ್ಲ, ಬದಲಾಗಿ ಊಟದ ವಿರಾಮದ ನಂತರ ಅವರು ತಮ್ಮ ಉಳಿದ ಉಪನ್ಯಾಸವನ್ನು ನೀಡಬೇಕಾಯಿತು. ಆಮೇಲೆ ಎಲ್ಲ ಗೋಷ್ಠಿಗಳನ್ನು ಒಂದೊಂದು ಗಂಟೆ ಮುಂದೂಡಲಾಯಿತು. ಹೀಗೆ ತಡವಾಗಿ ಬಂದು ಸಭೆಯನ್ನು ಅಧ್ವಾನಗೊಳಿಸಿದ ಸಚಿವರು ಒಂದಕ್ಷರದ ಕ್ಷಮೆಯನ್ನು ಸಹ ಕೇಳಲಿಲ್ಲ, ಹೊಗಳಿಸಿಕೊಂಡರು, ದೀಪ ಬೆಳಗಿದರು, ತಮ್ಮ ಬಾಲಿಶ ಭಾಷಣ ಮಾಡಿದರು, ಆಹಾ ಎಂದು ನಲಿದರು, ಆಮೇಲೆ ಕೂಡಲೆ ತೊಲಗಿಹೋದರು. ದೀರ್ಘ ಪ್ರಸ್ತಾಪ ಅನಗತ್ಯ. ಬಾಲಿಶತನದ ಒಂದು ತುಣುಕು ಸಾಕು: ''ಪ್ರತಿಯೊಂದು ಮನೆಗೂ ಆಯುರ್ವೇದ ತಲುಪಿಸಿ, ಆರೋಗ್ಯ ಕೊಡಿ. ಮೈಸೂರು ಅದಕ್ಕೆ ಮಾದರಿಯಾಗಬೇಕು. ಒಂದು ಕೋಟಿ ರೂಪಾಯಿ ಕೊಡುತ್ತೇನೆ, ಮನೆಮನೆಗೂ ಔಷಧಿಗೆ ಉಪಯುಕ್ತವಾಗುವ ಒಂದೊಂದು ಸಸಿ ಹಂಚಿರಿ, ಜನ ಅವನ್ನು ಬೆಳೆಸಲಿ. ನಮ್ಮ ಆಯುರ್ವೇದ ಜಗತ್ತಿನಲ್ಲಿ ಅಸಾಧಾರಣ ಸ್ಥಾನ ಹೊಂದಿದೆ. ಇನ್ನೊಂದು ತಿಂಗಳ ನಂತರ ಇದೇ ವೇದಿಕೆಯಲ್ಲಿ ಇನ್ನೊಂದು ಗೋಷ್ಠಿ ಕರೆಯುತ್ತೇನೆ. ಒಂದು ಕಡೆ ನಮ್ಮ ಆಯುರ್ವೇದ ಪರಿಣತರು, ಮತ್ತೊಂದು ಕಡೆ ಪಶ್ಚಿಮದ ವೈದ್ಯಕೀಯ ಕಲಿತ ಡಾಕ್ಟರುಗಳು. ಅವರ ನಡುವೆ ಅಂತಿಮ ಚರ್ಚೆ ನಡೆದುಹೋಗಲಿ. ನಾವೆಲ್ಲಾ ಚರ್ಚೆಯನ್ನು ಆಲಿಸೋಣ. ಆಯುರ್ವೇದವೇ ಅತಿಶ್ರೇಷ್ಠವೆಂದು ಆಗ ತೀರ್ಮಾನವಾಗಿ ಹೋಗುವುದು ಖಂಡಿತ.'' ಚಪ್ಪಾಳೆಯ ಸುರಿಮಳೆ. ಇದೇನು ಕುಸ್ತಿ ಪಂದ್ಯವೆ? ಆಯುರ್ವೇದ ಶಾಸ್ತ್ರದ ವೈಜ್ಞಾನಿಕ ತಿರುಳನ್ನು ಸಾಬೀತುಪಡಿಸಲು ಇದು ಮಾರ್ಗವೆ? ಮಾನ್ಯ ಸಚಿವ ರಾಮದಾಸರು ಆಯುರ್ವೇದಕ್ಕೆ ಅರ್ಹತಾ ಪತ್ರ ಕೊಡಿಸಲು ಮತ್ತು 'ಅಲೋಪತಿ'ಯಿಂದ ಅದನ್ನು ಕಿತ್ತುಕೊಳ್ಳಲು ಯಾವ ದಾಸಯ್ಯ? ವಿದ್ಯಾರ್ಥಿಗಳಿಗೆ ಇದೇ ಮಾರ್ಗದರ್ಶನವಾದರೆ ನಾಳೆ ಆಸ್ಪತ್ರೆಗಳಲ್ಲಿ ಅವರು ಜಟಾಪಟಿಯಲ್ಲಿ ತೊಡಗಬೇಕೆಂದು ನಿರೀಕ್ಷಿಸುತ್ತೀರಾ? ಯಾವುದೇ ಸಂಗತಿಯು ವಿಜ್ಞಾನದ ಸ್ಥಾನ ಪಡೆಯುವುದು ಮತ ಚಲಾಯಿಸುವುದರಿಂದ ಅಲ್ಲ, ಅದು ಅನುಸರಿಸುವ ಪದ್ಧತಿಯಿಂದ. ಆಯುರ್ವೇದದ ಪ್ರಶಸ್ತ ಗ್ರಂಥವಾದ ಚರಕಸಂಹಿತೆ ಹೇಳುತ್ತದೆ, ವೈದ್ಯಕೀಯ ವಿಜ್ಞಾನಕ್ಕೆ ಕೊನೆ ಎಂಬುದಿಲ್ಲ, ಸರ್ವಜ್ಞತ್ವ ಎಂಬುದಿಲ್ಲ, ಅದು ನಿರಂತರ ಪ್ರಕ್ರಿಯೆ, ಎಂದು. ತಾನು ಪರಿಪೂರ್ಣವಲ್ಲವೆಂಬ ಅರಿವಿಲ್ಲದಿದ್ದರೆ ಜ್ಞಾನವು ಜ್ಞಾನವಲ್ಲ. ಅದು ವಿಜ್ಞಾನದ ವಿನಯ ಸಹ ಆಗಿದೆ. ಆದರೆ ಸಚಿವ ರಾಮದಾಸರು ಮೈಸೂರಿನ ಅಖಾಡದಲ್ಲಿ ಕುಸ್ತಿ ಏರ್ಪಡಿಸಿ ಆಯುರ್ವೇದದ ಶ್ರೇಷ್ಠತೆಯನ್ನು ಪ್ರತಿಷ್ಠಾಪಿಸುತ್ತಾರಂತೆ. ಇಂತಹ ತಿಳಿಗೇಡಿ ಆರೋಗ್ಯ ಸಚಿವರನ್ನು ಪಡೆದ ನಮ್ಮ ರಾಜ್ಯದ ಭಾಗ್ಯಕ್ಕೆ ಮಿತಿಯುಂಟೆ? ರಾಮದಾಸರ ಯಾವ ಸಹಾಯವೂ ಇಲ್ಲದೆ ಆಯುರ್ವೇದವು ತನ್ನ ಖ್ಯಾತಿಯನ್ನು ಕಾಪಾಡಿಕೊಳ್ಳಬಲ್ಲದು, ಏಕೆಂದರೆ ಅದು ಕಾರ್ಯ-ಕಾರಣ ಭಾವ ಎಂಬುದರ ಗಟ್ಟಿ ಆಧಾರ ಹೊಂದಿದೆ. ಪದಾರ್ಥಗಳ ಲಕ್ಷಣವನ್ನು ತಿಳಿದು ಅವನ್ನು ಕ್ರಿಯೆಯಲ್ಲಿ ಬಳಸುವುದು ಆಯುರ್ವೇದ ವಿಜ್ಞಾನದ ಪದ್ಧತಿ. ಇಂದಿಗಿಂತಲೂ ನಾಳೆ ಜ್ಞಾನದ ವ್ಯಾಪ್ತಿ ಹೆಚ್ಚಾಗುತ್ತದೆ; ಅದನ್ನು ಬಿಟ್ಟು, ಪರ್ವತದಷ್ಟಿದ್ದ ಜ್ಞಾನ ತೃಣವಾಗಿಹೋಗಿದೆ ಎಂಬಂತೆ ವರ್ತಿಸುವುದು ತರ್ಕದ ವಿಧಾನವಲ್ಲ, ವಿಜ್ಞಾನದ ಪದ್ಧತಿಯಲ್ಲ. ರಾಮದಾಸರಿಗೆ ಅದು ತಿಳಿಯದಿದ್ದರೆ ಅಭ್ಯಂತರವಿಲ್ಲ, ಆದರೆ ಆಯುರ್ವೇದ ಪರಿಣತರಿಗೆ ಮತ್ತು ವಿದ್ಯಾರ್ಥಿಗಳಿಗೆ ಅದು ತಿಳಿದಿರಬೇಕು. ಅದನ್ನು ತಿಳಿಸದೆ, ಕುಸ್ತಿ ಏರ್ಪಡಿಸಲು ಹಾತೊರೆಯುವ ಸಚಿವರಿಗೆ ಆರೋಗ್ಯ ಖಾತೆಯಿಂದ ಎತ್ತಂಗಡಿಯಾಗಬೇಕು. ಅವರಿಗಾಗಿ ಒಂದು ಕುಸ್ತಿ ಖಾತೆ ತೆಗೆಯಲಿ. ಮಠಗಳಿಗೆ ಮುನ್ನೂರು ಕೋಟಿ ಕೊಡುವ ಧಾರಾಳತನವಿರುವ ಜಗದೀಶ ಶೆಟ್ಟರ ಅವರು ಇದಕ್ಕಾಗಿ ಮೂರು ಕೋಟಿ ಕೊಡಲು ಅಂಜಲಾರರು. ಅದನ್ನು ನುಂಗಿ ರಾಮದಾಸರು ಕುಸ್ತಿಪಟುವಾಗಿ ಶೋಭಿಸಲಡ್ಡಿಯಿಲ್ಲ.

✶ ✶ ✶

ಮಾನವ ಹಕ್ಕುಗಳನ್ನು ಯಾವ ಸಂಕೋಚವೂ ಇಲ್ಲದೆ ಉಲ್ಲಂಘಿಸುವ ಅಮೆರಿಕಾ ಮಾನ-ಮರ್ಯಾದೆ ಇಲ್ಲದೆ ಸದಾ ಮಾನವ ಹಕ್ಕುಗಳ ಬಗ್ಗೆ ಮಾತನಾಡುತ್ತದೆ, ಮಾಧ್ಯಮಗಳು ಅದನ್ನು ಪ್ರಚಾರ ಮಾಡುತ್ತವೆ. ಇತ್ತೀಚೆಗೆ ಒಬಾಮ ಪ್ರತಿನಿಧಿಯೊಬ್ಬ ಹೇಳಿದ, ''ಸ್ವರಕ್ಷಣೆಗಾಗಿ ಯಾರನ್ನು ಕೊಂದರೂ ತಪ್ಪಿಲ್ಲ; ನಾಳೆ ನಮ್ಮನ್ನು ಕೊಲ್ಲಲು ಸಿದ್ಧವಾಗುತ್ತಿದ್ದಾರೆಂದು ಯಾರನ್ನು ನಾವು ಗುರುತಿಸುತ್ತೇವೋ ಅವರನ್ನು ಸದೆಬಡಿಯುವುದು ಅಗತ್ಯ, ಅದು ನಮ್ಮ ಹಕ್ಕು,'' ಎಂದು. ಇದು ದುಂಡಾವರ್ತಿಯ ಸೂಚನೆ. ಅದರ ಪರಿಣಾಮವು ಬೇರೊಂದು ಪ್ರಮೇಯದಿಂದ ಮೂಡುತ್ತದೆ. ಅದೇನು ಅಂತಹ ಪ್ರಮೇಯ?'' ನಾವು ಯಾರನ್ನು ಕೊಲ್ಲುತ್ತೇವೋ ಅವರು ನಾಳೆ ನಮಗೆ ಉಪದ್ರವ ನೀಡುತ್ತಿದ್ದರೆಂಬುದು ನಮ್ಮ ತೀರ್ಮಾನ.'' ಇಂಥದೇ ತೀರ್ಮಾನವನ್ನು ಅಮೆರಿಕಾ ಬಗೆಗೂ ತಾಳಬಹುದಲ್ಲ ಎಂಬ ಪ್ರಶ್ನೆ ಬಂದರೆ ಒಬಾಮ ತಮ್ಮ ಕತ್ತಿಯನ್ನು ಝಳಪಿಸುತ್ತಾರೆ, ನಿಮ್ಮ ಕತ್ತಿಯನ್ನು ಕಿತ್ತುಕೊಂಡು ಬಿಡುತ್ತಾರೆ. ಇಂದಿನ ಅಂತರರಾಷ್ಟ್ರೀಯ ವಿದ್ಯಮಾನಗಳಿಗೆ ಇದಿಷ್ಟೇ ಕನಿಷ್ಠ ವ್ಯಾಖ್ಯಾನ ಸಾಕು. ಈಚೆಗೆ ಜೂಲಿಯೆಟ್ ಎಂಬೊಬ್ಬ ಅಮೆರಿಕಾದ ಮಹಿಳೆ ತನ್ನ ದೇಶದ ಸರ್ಕಾರವು ಅನುಸರಿಸುತ್ತಿರುವ ಹೀನ ಪದ್ಧತಿಗಳನ್ನು ಬಹಿರಂಗಗೊಳಿಸಿ, ಅವಕ್ಕೆ ವಿಪುಲವಾದ ಪುರಾವೆಗಳನ್ನು ನೀಡಿದ್ದಾರೆ. ತಾನು ಆಕ್ರಮಣ ಮಾಡಿದ ದೇಶಗಳಲ್ಲಿ ಮತ್ತು ಬೇರೆಯವರ ಆಕ್ರಮಣಕ್ಕೆ ಬೆಂಬಲ ನೀಡುವ ಸಂದರ್ಭಗಳಲ್ಲಿ, ಅಮೆರಿಕಾ ಆಯಾ ದೇಶಗಳ ಜನರನ್ನು ಹೇಗೆ ಪ್ರತಿಬಂಧಿಸುತ್ತದೆ, ಹಿಂಸೆಗೆ ಗುರಿಮಾಡುತ್ತದೆ, ಎಂಬುದನ್ನು ಜೂಲಿಯೆಟ್ ವಿಶದವಾಗಿ ಬಣ್ಣಿಸಿದ್ದಾರೆ. ಆಕೆ ಒದಗಿಸಿರುವ ಮಾಹಿತಿಗಳಲ್ಲಿ ಎರಡನ್ನು ಮಾತ್ರ ಪ್ರಸ್ತಾಪಿಸಿದರೆ ಸಾಕು:

ಇರಾಕ್ ಮತ್ತು ಆಫ್ಘಾನಿಸ್ತಾನಗಳಲ್ಲಿ ಅಮೆರಿಕಾ ತನ್ನ ಸೈನ್ಯ ನುಗ್ಗಿಸಿದಾಗ ಸಹಜವಾಗಿಯೇ ಅಲ್ಲಿನ ಜನರ ವಿರೋಧ ಸಾಕಷ್ಟಿತ್ತು. ಅವರನ್ನು ತಣ್ಣಗಾಗಿಸಲು ಅಮೆರಿಕಾ ಪ್ರಯೋಗಿಸಿದ್ದು ನೂತನ ಆವಿಷ್ಕಾರಗಳನ್ನು. (ಅ) ಜನಸಂದಣಿ ಇರುವೆಡೆ, ಮನೆಗಳಲ್ಲಿ ವಾಸಿಸುವ ಜನರಿರುವೆಡೆ, ಪ್ರತಿರೋಧ ಒಡ್ಡುವ ಗುಂಪುಗಳಿರುವೆಡೆ, ಕಿವಿಗಳು ಕಿತ್ತುಹೋಗುವಷ್ಟು ಪ್ರಮಾಣದ ಶಬ್ದವನ್ನು ಗಂಟೆಗಟ್ಟಲೆ ಸತತವಾಗಿ ಉಂಟುಮಾಡುವುದು. ಅದಕ್ಕಾಗಿ ಹೊಸ ತಂತ್ರಜ್ಞಾನದಿಂದ ತಯಾರಿಸಲಾದ ಸಾಧನಗಳಿವೆಯಂತೆ. ಮೈಲುಗಟ್ಟಲೆ ವಿಸ್ತೀರ್ಣವಿರುವ ಪ್ರದೇಶಗಳಲ್ಲಿ ಇದರ ಪ್ರಭಾವವಿರುತ್ತದೆ. ಕಿವಿಗಡಚಿಕ್ಕುವ ಅಸೂಹ್ಯ ಪ್ರಮಾಣದ ಶಬ್ದದಿಂದ ಜನ ರೋಸಿಹೋಗುತ್ತಾರೆ, ತಣ್ಣಗಾಗುತ್ತಾರೆ, ಮನಸ್ಸುಗಳನ್ನು ಕಳೆದುಕೊಳ್ಳುತ್ತಾರೆ. ತನ್ನ ಸೈನ್ಯದ ಆಕ್ರಮಣವನ್ನು ''ಮಾನವ ಹಕ್ಕುಗಳ ಸಂರಕ್ಷಣೆ'' ಎಂದು ಜನರು ಒಪ್ಪುವವರೆಗೆ ಶಬ್ದದ ಭೋರ್ಗರೆತ ನಿಲ್ಲುವುದಿಲ್ಲ. ಕಾಬೂಲು ಮತ್ತು ಬಾಗ್ದಾದಿನ ಸಂದಿಗೊಂದಿಗಳಲ್ಲಿ ಇಂತಹ ಸಾಧನಗಳನ್ನು ನಿರಂತರವಾಗಿ ಬಳಸಲಾಯಿತು ಮತ್ತು ಬಳಸಲಾಗುತ್ತಿದೆ ಎಂದು ಜೂಲಿಯೆಟ್ ದಾಖಲಿಸಿದ್ದಾರೆ. ಇದಕ್ಕೆ ಮಣಿಯದೆ ಜನ ಸಭೆಗಳನ್ನೋ ಮೆರವಣಿಗೆಗಳನ್ನೋ ಆಯೋಜಿಸಿ ಪ್ರತಿಭಟನೆ ಮುಂದುವರಿಸುತ್ತಾರೆನ್ನಿ. ಆಗ ಎರಡನೆಯ ಪ್ರಯೋಗ ಸಿದ್ಧ ಇರುತ್ತದೆ. ಆ ಪ್ರಯೋಗದ ಸಾಧನಕ್ಕೆ ''ಶಾಕ್ ಗನ್'' ಎಂಬ ಹೆಸರಿದೆ. ವಿದ್ಯುತ್‌ನಿಂದ ನೀಡಬಹುದಾದ 'ಶಾಕ್'ಅನ್ನು ಈ ''ಗನ್'' ನೀಡುತ್ತದೆ. ಅದು ಜನರನ್ನು ಸಂಹರಿಸುವುದಿಲ್ಲ, ಬದಲಾಗಿ ನಿರಂತರವಾಗಿ 'ಶಾಕ್'ಗೆ ಗುರಿಮಾಡುತ್ತದೆ. ನೀವು ಓಡಿಹೋಗುತ್ತಿದ್ದರೆ ಹಿಂಬದಿಯಿಂದ ಶಾಕ್, ನಿಂತಿದ್ದರೆ ಮುಂಬದಿಯಿಂದ ಶಾಕ್. ''ಸಾಕಪ್ಪ ನಿನ್ನ ಸಹವಾಸ, ಹಾಳಾಗಿಹೋಗು, ಅದೇನು ಕೊಳ್ಳೆ ಹೊಡೆಯಬೇಕೆಂದು ಆಕ್ರಮಣ ನಡೆಸಿದ್ದೀಯೋ ಕೊಳ್ಳೆಹೊಡೆದು ಸಾಯಿ'' ಎಂದು ಹೇಳುತ್ತಾ ಜನ ತಣ್ಣಗಾಗ ಬೇಕು. ಅಲ್ಲಿಗೆ ಮಾನವ ಹಕ್ಕುಗಳ ರಕ್ಷಣೆ ಸಂಪೂರ್ಣ ವಾದಂತಾಯಿತಲ್ಲವೆ? ಈ ಎರಡು ಪ್ರಯೋಗಗಳನ್ನು ಪ್ಯಾಲಿಸ್ಟೈನಿನ ಜನರನ್ನು ತಣ್ಣಗಾಗಿಸಲು ಇಸ್ರೇಲ್ ಬಳಸುತ್ತಿದೆ ಎಂದು ಜೂಲಿಯೆಟ್ ದಾಖಲಿಸಿದ್ದಾರೆ; ವಿಶೇಷತಃ ಪ್ಯಾಲಿಸ್ಟೈನಿನ ವೆಸ್ಟ್ ಬ್ಯಾಂಕ್ ಪ್ರದೇಶದಲ್ಲಿ. ಈ ಸಾಧನಗಳನ್ನು ಮನಮೋಹನ ಸಿಂಗ್ ಸರ್ಕಾರ ಎಂದು ಆಮದು ಮಾಡಿಕೊಳ್ಳುತ್ತದೆಂಬುದನ್ನು ಕಾದು ನೋಡೋಣ. ಮಣಿಪುರ, ಛತ್ತೀಸಗಢ, ಒಡಿಶಾ, ಕಾಶ್ಮೀರ, ಇಲ್ಲೆಲ್ಲಾ ಅವು ಬಹಳ ಉಪಯುಕ್ತವಾದಾವು!

✶ ✶ ✶

ಈಚಿನ ಕೆಲವು ತಿಂಗಳುಗಳಲ್ಲಿ ಅಮೆರಿಕಾದಲ್ಲಿ ನಿರುದ್ಯೋಗಿಗಳ ಸಂಖ್ಯೆಯು ಹೆಚ್ಚಿದೆ. ಕ್ರಮೇಣ ಅದು ನಮ್ಮ ದೇಶದ ಮೇಲೆ ಪರಿಣಾಮ ಬೀರಲಿದೆ. ಇದೆಂತಹ ತರ್ಕ, ಅವೆರಡಕ್ಕೂ ಏನು ಸಂಬಂಧ ಎನಿಸುವುದು ಸಹಜ. ಎರಡನ್ನೂ ಪ್ರತ್ಯೇಕವಾಗಿ ವಿಶ್ಲೇಷಿಸಿಕೊಳ್ಳಬೇಕು. ಅಮೆರಿಕಾದ ದೊಡ್ಡ ದೊಡ್ಡ ಅಂಗಡಿ(ಮಾಲ್)ಗಳಲ್ಲಿ ವ್ಯಾಪಾರಕ್ಕೆ ಹೋಗುವ ಜನ ಕಡಿಮೆಯಾಗಿದ್ದಾರೆ, ಏಕೆಂದರೆ ಮನೆಗಳಲ್ಲೇ ಕೂತು ಕಂಪ್ಯೂಟರ್ ಮೂಲಕ ತಮಗೆ ಬೇಕಾದ್ದನ್ನು ತರಿಸಿಕೊಳ್ಳುವ ಮಂದಿ ಹೆಚ್ಚಾಗಿದ್ದಾರೆ. ಎರಡನೆಯದಾಗಿ, ಸರಕುಗಳನ್ನು ಸರಬರಾಜು ಮಾಡುವ ಬೃಹತ್ ಅಂಗಡಿಗಳು ರೋಬಟ್‌ಗಳ ಮೂಲಕ ಕೆಲಸ ಮಾಡಿಸಿಕೊಳ್ಳುತ್ತಿದ್ದಾರೆ. ಈ ಬೃಹತ್ ಅಂಗಡಿಗಳು ಒಂದೊಂದೂ ಎರಡು ಫುಟ್‌ಬಾಲ್ ಕ್ರೀಡಾಂಗಣಗಳಷ್ಟು ದೊಡ್ಡವು. ಅಲ್ಲಿ ಇಡೀ ನೆಲಕ್ಕೆ ಸೆನ್ಸಾರ್‌ಗಳನ್ನು ಅಳವಡಿಸಿದ್ದಾರಾದ್ದರಿಂದ ರೋಬಟ್‌ಗಳು ಪರಸ್ಪರ ಡಿಕ್ಕಿ ಹೊಡೆಯದೆ ಓಡಾಡಿಕೊಂಡು ಅವಕ್ಕೆ ಹೇಳಿದ ಸರಕುಗಳನ್ನು ಅವೇ ಬಂದು ಅಥವಾ ಅಲಮಾರುಗಳಿಂದ ಹೊರತೆಗೆದು ತರುತ್ತವೆ. ಆ ಕೆಲಸವನ್ನು ಮಾಡುತ್ತಿದ್ದವರೆಲ್ಲಾ ಈಗ ನಿರುದ್ಯೋಗಿಗಳು. ಅಂಗಡಿಗೆ ಗ್ರಾಹಕರು ಕಡಿಮೆಯಾಗಿಲ್ಲ, ಲಾಭ ಕಡಿಮೆಯಾಗಿಲ್ಲ, ಎಲ್ಲಾ ನೂತನ ತಂತ್ರಜ್ಞಾನದ ಅಳವಡಿಕೆಯ ಪರಿಣಾಮ. ಒಂದೊಂದು ಬೃಹತ್ ಅಂಗಡಿಯಿಂದ ಸುಮಾರು ಮುನ್ನೂರು ಮಂದಿ ಕೆಲಸ ಕಳೆದುಕೊಳ್ಳುತ್ತಿದ್ದಾರೆ. ಲೋಕಪ್ರಸಿದ್ಧವಾದ ಮ್ಯಾಸೆಚ್ಯುಸೆಟ್ಸ್ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿಯ ಒಬ್ಬ ಪ್ರಾಧ್ಯಾಪಕರು ಹೇಳಿದ್ದಾರೆ, ''ಈ ತಂತ್ರಜ್ಞಾನ ಇಷ್ಟಕ್ಕೇ ನಿಲ್ಲುವುದಿಲ್ಲ,'' ಎಂದು. ಇನ್ನೂ ಬೇರೆ ರೋಬಟ್‌ಗಳು ಬಂದಾಗ ಅಂಗಡಿಗಳ ಕೆಲಸವಲ್ಲದೆ ನೂರಾರು ಬೇರೆ ಕೆಲಸಗಳನ್ನು ಮಾಡುವ ಸಾಮರ್ಥ್ಯವನ್ನು ಅವು ಹೊಂದಿರುತ್ತವೆ. ಅವು ಬರುವ ದಿನಗಳು ದೂರವಿಲ್ಲ, ತಾವೇ ಸಂಶೋಧನೆ ಮುಂದುವರಿಸುತ್ತಿರುವುದಾಗಿ ಹೇಳಿದ್ದಾರೆ. ಆಗ ಅವರಿಗೊಂದು ಪ್ರಶ್ನೆ ಹಾಕಲಾಯಿತು: ''ಸರಿ, ನೀವು ಹೀಗೇ ಹೊಸ ಹೊಸ ರೋಬಟ್‌ಗಳನ್ನು ಸಿದ್ಧಪಡಿಸುತ್ತಾ ಹೋದರೆ ನಿರುದ್ಯೋಗ ಹೆಚ್ಚುವುದಿಲ್ಲವೆ?'' ಎಂದು. ಅದಕ್ಕವರ ಉತ್ತರ ಗಮನಾರ್ಹ: ''ನಮ್ಮ ದೇಶದಲ್ಲಿ ಹೆಚ್ಚಾಗಿ ಜನ ಉದ್ಯೋಗ ಕಳೆದುಕೊಳ್ಳುವುದಿಲ್ಲ, ಆದ್ದರಿಂದ ತಲೆನೋವು ನಮಗಲ್ಲ, ಚೀನಾ ಮತ್ತು ಭಾರತ ಇವೆಯಲ್ಲ, ಅವು ನಮ್ಮ ನೂರಾರು ಕೆಲಸಗಳನ್ನು ಮಾಡಿಕೊಡುತ್ತಿವೆ; ಅದರಿಂದ ಆ ದೇಶಗಳಲ್ಲಿ ಹಲವರಿಗೆ ಉದ್ಯೋಗ ದೊರೆತಿದೆ. ಕ್ರಮೇಣ ನಮ್ಮ ರೋಬಟ್‌ಗಳು ಅವರು ಮಾಡುತ್ತಿರುವ ಕೆಲಸಗಳನ್ನು ಇಲ್ಲೇ, ನಮ್ಮ ದೇಶದಲ್ಲೇ, ಮಾಡಿಕೊಡುತ್ತವೆ. ಆದ್ದರಿಂದ ನಿರುದ್ಯೋಗದ ಭೀತಿ ಇರಬೇಕಾದ್ದು ಚೀನಾ ಮತ್ತು ಭಾರತಗಳಲ್ಲಿ.'' ಕಪಿಲ್ ಸಿಬಲ್ ಮತ್ತು ಆನಂದ ಶರ್ಮ ಎಮ್ಮೆ ಚರ್ಮದ ಮಿದುಳು ಹೊಂದಿದ್ದಾರೆ, ಆದ್ದರಿಂದ ಇದು ಅವರಿಗೆ ತಿಳಿಯವುದಿಲ್ಲ. ಮೆಡಿಕಲ್ ಟ್ರಾನ್ಸ್‌ಕ್ರಿಪ್ಶನ್, ಕಾಲ್ ಸೆಂಟರ್, ಇತ್ಯಾದಿಗಳೆಲ್ಲಾ ಶಾಶ್ವತವೆಂದು ಭ್ರಮಿಸುವವರಿಗೆ ಇನ್ನೇಳು ವರ್ಷಗಳ ಗಡುವಿದೆ. ಪರ್ಯಾಯದ ಯೋಚನೆ ಮಾಡಬೇಕಾದ್ದು ಇಂದೇ ಎಂಬ ಪರಿಜ್ಞಾನವಿರಲಿ.

## ಅಡ್ಡೂರು ಶಿವಶಂಕರರಾಯರು



ಸ್ವಾತಂತ್ರ್ಯ ಹೋರಾಟಗಾರ, ಕಾರ್ಮಿಕ ನಾಯಕ, ಕೃಷಿ ತಜ್ಞ ಅಡ್ಡೂರು ಶಿವಶಂಕರರಾಯರು ೧೯.೦೨.೨೦೧೩ರಂದು ನಿಧನರಾಗಿದ್ದಾರೆ. ೯೨ ವರ್ಷವಾಗಿದ್ದ ಅವರು ಕೊನೆಯುಸಿರಿನವರೆಗೂ ಸಮಾಜ, ದೇಶ, ಕಾರ್ಮಿಕ ವರ್ಗ, ಕೃಷಿ ವ್ಯವಸ್ಥೆ ಹೀಗೆ ವಿವಿಧ ಕ್ಷೇತ್ರಗಳ ಕುರಿತು ಚಿಂತನೆ ನಡೆಸುತ್ತಲೇ ಬದುಕಿದವರು. ೧೯೪೧ರಲ್ಲಿಯೇ ಅಖಿಲ ಭಾರತ ವಿದ್ಯಾರ್ಥಿ ಫೆಡರೇಶನ್‌ನ ಚಳುವಳಿಯಲ್ಲಿ ಭಾಗವಹಿಸಿ ಸ್ವಾತಂತ್ರ್ಯ ಹೋರಾಟಗಾರರಾದರು. ನಂತರದ ದಿನಗಳಲ್ಲಿ ಕಮ್ಯುನಿಸ್ಟ್ ಪಕ್ಷದ ನಾಯಕರಾಗಿ, ಭೂಗತ ಹೋರಾಟಗಾರರಾಗಿ ಮಂಗಳೂರು, ಹುಬ್ಬಳ್ಳಿ, ದಾವಣಗೆರೆ, ಭದ್ರಾವತಿ ಹೀಗೆ ರಾಜ್ಯದಲ್ಲೆಲ್ಲ ಸಂಚರಿಸಿ ಚಳುವಳಿ ಕಟ್ಟಿದವರು. ಕಳೆದ ವರ್ಷ ನಿಧನರಾದ ಬಿ. ವಿ. ಕಕ್ಕಿಲ್ಲಾಯ, ಹರಿದಾಸ ಆಚಾರ್ ಮುಂತಾದವರೊಡನೆ ವಿದ್ಯಾರ್ಥಿ ಚಳುವಳಿಯಿಂದಲೇ ಹೋರಾಟದ ಬದುಕನ್ನು ಅಪ್ಪಿಕೊಂಡ ಶಿವಶಂಕರರಾಯರು, ಬದುಕಿನುದ್ದಕ್ಕೂ ಹೋರಾಟದ ಬದುಕನ್ನು ನಡೆಸಿದರು. ಕೊನೆಯವರೆಗೂ ಹೋರಾಟಗಾರರಾಗಿಯೇ ಬದುಕಿದರು. ಕೃಷಿ ವ್ಯವಸ್ಥೆಯ ಕುರಿತು ವಿಶೇಷ ಆಸಕ್ತಿ ವಹಿಸಿ, ಅಧ್ಯಯನ ನಡೆಸಿದ ಇವರು ಕೃಷಿ ಕುರಿತು ಹಲವಾರು ಲೇಖನ ಬರೆದು ಕೃಷಿಕರಾಗಿಯೇ ಬದುಕಿದ್ದರು.

ಅಡ್ಡೂರು ಶಿವಶಂಕರರಾಯರು ತುಂಬು ಜೀವನ ನಡೆಸಿ, ಮುಂದಿನ ಜನಾಂಗಕ್ಕೆ, ಹೋರಾಟಗಾರರಿಗೆ ಮಾದರಿ ವ್ಯಕ್ತಿಯಾಗಿ ನಿರ್ಗಮಿಸಿದ್ದಾರೆ. ಆರಂಭದಿಂದಲೂ 'ಹೊಸತು' ಓದುಗರಾಗಿ ನಮಗೆ ಹಲವಾರು ಸಲಹೆ ಸೂಚನೆ ಕೊಟ್ಟಿದ್ದಾರೆ. 'ಹೊಸತು' ಬಳಗದಿಂದ ಅವರಿಗೆ ಅಂತಿಮ ನಮನಗಳನ್ನು ಸಲ್ಲಿಸುತ್ತೇವೆ.

– ಸಂಪಾದಕರು




### ಫೆಬ್ರವರಿ ತಿಂಗಳ ಸಂಚಿಕೆ

**'ಅಖಂಡ ಕರ್ನಾಟಕ'ದ ವ್ಯಕ್ತಿ**

ಕೋ.ಚೆ.ಯವರ ಬಗೆಗೆ: ಅವರು ಮೊದಲಿನಿಂದಲೂ ಕುವೆಂಪು ಪ್ರೋಕ್ತ 'ಅಖಂಡ ಕರ್ನಾಟಕ'ದ ನೈಷ್ಠಿಕ ವ್ಯಕ್ತಿ. ಸುಮಾರು ೬೦ ವರ್ಷಗಳ ಹಿಂದೆಯೆ ಅವರು ಬರೆದರು: ''ಕರ್ನಾಟಕದ ಏಕೀಕರಣದ ಹೆಗ್ಗನಸಿನಲ್ಲಿ ಬದುಕುತ್ತಿರುವ ನನಗೆ ಮೈಸೂರು, ಮಂಗಳೂರು, ಬಳ್ಳಾರಿ, ಬಿಜಾಪುರಗಳಲ್ಲಿ ವ್ಯತ್ಯಾಸವೇ ಇಲ್ಲ!'' (ಬಿಜಾಪುರ ಕಡೆಯಲ್ಲಿ ಉಕ್ತವಾಗಿರುವುದು ಆಕಸ್ಮಿಕವೆ?)

ಮೈಸೂರು **ಸಿ.ಪಿ.ಕೆ.**

ಫೆಬ್ರವರಿ ಸಂಚಿಕೆಯಲ್ಲಿ ಪರಂಜ್ಯೋತಿಯವರ ಹಿಂದೂಸ್ತಾನ್ ಫೋಟೋ ಫಿಲ್ಮ್ಸ್ - ಮುಂದುವರಿದ ಹೋರಾಟ ಲೇಖನವನ್ನು ಸೂಕ್ಷ್ಮವಾಗಿ ಗಮನಿಸಿದೆ. ಎಚ್‌ಪಿಎಫ್ ಅವನತಿಗೆ ಬರಲು ಕಾರಣಗಳನ್ನು ಹುಡುಕುತ್ತಿದ್ದಂತೆ; ಏಷ್ಯಾ ಖಂಡದಲ್ಲೇ ಹೆಸರಾಗಿದ್ದ ಈ ಸಂಸ್ಥೆ ಅವನತಿಯತ್ತ ಹೋದದ್ದು ದುರಂತವೆನಿಸುತ್ತದೆ.

ಡಾ॥ ಮಲ್ಲಿಕಾರ್ಜುನ ಛಬ್ಬಿ ಅವರ 'ಕೋಚೆ' ಯವರ ಪರಿಚಯ ಸಕಾಲಿಕವಾಗಿದೆ. ನ್ಯಾಯಾಧೀಶರಾಗಿದ್ದಾಗ ಕೋ. ಚೆನ್ನಬಸಪ್ಪ ದೂರ್ವಾಸಮುನಿಗಳೆಂದೇ ಖ್ಯಾತರಾಗಿದ್ದವರು. ತಮ್ಮ ನಿಷ್ಠುರ ನಡವಳಿಕೆಗಳಿಂದ ಸಿಬ್ಬಂದಿಯ ಕೆಂಗಣ್ಣಿಗೂ ಗುರಿಯಾಗಿದ್ದರು. ಅವರು ಅದೇ ನಿಷ್ಠುರವಾಗಿ ಸರ್ಕಾರವನ್ನು ಕನ್ನಡದ ವಿಷಯದಲ್ಲಿ ಬಡಿದೆಬ್ಬಿಸಲು ಕಾರಣರಾದರೆ ಅದೊಂದು ಪವಾಡ.

ಮೈಸೂರು **ಕೊ. ಸು. ನರಸಿಂಹಮೂರ್ತಿ**

### ಜನವರಿ ಸಂಚಿಕೆ

ಜನವರಿ ಸಂಚಿಕೆಯಲ್ಲಿ ಗಮನ ಸೆಳೆಯುವ ಲೇಖನ ಕಾಯಿಲೆಯಲ್ಲದನ್ನು ಕಾಯಿಲೆಯೆಂದು ನಂಬಿಸಿ ಅದಕ್ಕೆ ಇದೋ ಪರಿಹಾರವೆಂದು ಹೇಳಿ ಹಣ ಕೊಳ್ಳೆ ಹೊಡೆಯುವ ಸುಳ್ಳು ಜಾಹೀರಾತಿನ ವಿರುದ್ಧ ಹಾಗೂ ನಾವು ನಂಬರ್-೧ ಪತ್ರಿಕೆಯವರು ಎಂದು ಸಾರುತ್ತಾ ಇಂತಹ ಅರ್ಥಹೀನ ಜಾಹಿರಾತುಗಳನ್ನು ಪ್ರಸಾರ ಮಾಡುವ ಪತ್ರಿಕೆಗಳ ವಿರುದ್ಧ ಬರೆದ ಲೇಖನ ಚೆನ್ನಾಗಿದೆ.

ನರೇಂದ್ರ ನಾಯಕರ ಸಂದರ್ಶನ ವಿಚಾರಕ್ಕೆ ಹಚ್ಚುವಂತಿತ್ತು. ಅದು ಮೂಢನಂಬಿಕೆಗಳ ವಿರುದ್ಧ ಜಾಗೃತಿಯನ್ನು ಮೂಡಿಸುವುದರಲ್ಲಿ ಸಂದೇಹವಿಲ್ಲ.

ರಾಯಚೂರ **ವಿಜಯಕುಮಾರ ಪಿ.**

'ಹೊಸತು' ವಿಶೇಷ ಸಂಚಿಕೆ ನಿಜಕ್ಕೂ ಅದ್ಭುತವಾಗಿದೆ. 'ವೈವಿಧ್ಯಮಯ' ಎನ್ನುವ ನಿಜಾರ್ಥ ಇಲ್ಲಿದೆ. ಪ್ರತಿಯೊಂದು ಲೇಖನವೂ ವಿಚಾರಪೂರ್ಣ. ಇಲ್ಲಿ ಕವನಗಳಿವೆ, ಕಥೆಗಳಿವೆ, ವೈಚಾರಿಕ ಲೇಖನಗಳಿವೆ. ಒಮ್ಮೆ ಓದಿ ಪಕ್ಕಕ್ಕಿಡುವಂಥದ್ದಲ್ಲ ಈ ಸಂಚಿಕೆ. ಪದೇ ಪದೇ ಓದಿ ಯೋಚನೆ ಮಾಡುವಂಥ ಸೊಗಸಾದ ಲೇಖನಗಳಿವೆ.

ಬೆಂಗಳೂರು **ಎಚ್. ಜಿ. ಸೋಮಶೇಖರರಾವ್**




'ಹೊಸತು' ವಿಶೇಷ ಸಂಚಿಕೆಯಲ್ಲಿ ಪ್ರೊ॥ ಬರಗೂರು ರಾಮಚಂದ್ರಪ್ಪನವರ 'ಜಾಗತೀಕರಣ: ಬಡವರ ಭಯೋತ್ಪಾದಕ' ಲೇಖನ ಮಾರ್ಮಿಕವಾಗಿ ಮೂಡಿಬಂದಿದೆ. ಜಾಗತೀಕರಣಕ್ಕೆ ಮಾರುಹೋದ ನಾವು ಇಂದು ಅಸ್ತಿತ್ವವನ್ನೇ ಕಳೆದುಕೊಂಡು ಬದುಕುತ್ತಿದ್ದೇವೆ. ಬಡವರ ಪರಿಸ್ಥಿತಿ ಹೇಳತೀರದು. ಬಂಡವಾಳಗಾರರು ಎಲ್ಲ ಕ್ಷೇತ್ರಗಳನ್ನು ತಮ್ಮ ಮುಷ್ಟಿಯಲ್ಲಿ ಹಿಡಿದಿಟ್ಟುಕೊಳ್ಳಲು ಯಾವುದೇ ಅಟ್ಟಹಾಸಕ್ಕೆ ಹಿಂಜರಿಯುತ್ತಿಲ್ಲ. ನಮ್ಮಲ್ಲಿರುವ ರಾಜಕೀಯ ನಾಯಕತ್ವ ಅವಿವೇಕತನ ಪ್ರದರ್ಶಿಸುತ್ತಿದ್ದು ಇದನ್ನು, ಬಂಡವಾಳಗಾರರು ಉಪಯೋಗಿಸಿಕೊಂಡು ಜಾಗತೀಕರಣದ ಹೆಸರಿನಲ್ಲಿ ರಾಷ್ಟ್ರದ ಸ್ವಾಸ್ಥ್ಯವನ್ನು ಹದಗೆಡಿಸುವ ಕೆಲಸ ಮಾಡುತ್ತಿದ್ದಾರೆ.

ಬೆಳಗಾವಿ **ಡಾ॥ ಎಚ್. ಎ. ಭೋಗಲೆ**

### ನಾಯಕರೊಂದಿಗೆ ಸಂದರ್ಶನ ಪ್ರತಿಫಲಿಸಿದ ವಿದಾರಣ

ಜನವರಿ ೨೦೧೩ರ ವಿಶೇಷಾಂಕವು ತನ್ನ ವಿಶಿಷ್ಟ ವೈಯಕ್ತಿಕತೆಯ ವೈಖರಿಯನ್ನು ಮತ್ತಷ್ಟು ಹೊಳಪಿನಿಂದ ಬೆಳಗಿದ್ದು ಮುದ ನೀಡಿದೆ. ಪ್ರತಿವಾದಕ್ಕೆ ಪೈಪೋಟಿಯ ಕೋಟಿಕ್ರಮಕ್ಕಿಂತ ಪ್ರಾಂಜಲ ಮನಸ್ಸಿನ ಪ್ರಾಮಾಣಿಕ ಅರಳುವಿಕೆಯೇ ಅರಿವಿನ ಅರವಟ್ಟಿಗೆಯನ್ನು ಮುಟ್ಟುವ ನೇರ ವಿಧಾನ ಎಂಬುದನ್ನು ಆಪ್ತವಾಗಿ ಪರಿಪಾಲಿಸಿದ ವಿಚಾರ ಪರಿಪ್ಲುತ ಬರವಣಿಗೆ ಬುದ್ಧಿ ಮತ್ತು ಶುದ್ಧಾಂತಃಕರಣದ ಸಮತೋಲನ ಸಾಧಿಸುವಲ್ಲಿ ಯಶಸ್ವಿಯಾಗಿವೆ.

ಈ ಸಂಚಿಕೆಯಲ್ಲಿ ಮೂವರು 'ನರೇಂದ್ರ'ರು ಒಡಮೂಡಿದ್ದಾರೆ. ವಿವೇಕಾನಂದರ (ನರೇಂದ್ರ) ಕುರಿತು ಬಂದ ಅಭ್ಯಸನಪೂರ್ಣ ಲೇಖನ ಮಾರ್ಮಿಕವಾಗಿದೆ. ನರೇಂದ್ರ ನಾಯಕರೊಂದಿಗಿನ ಸಂದರ್ಶನ ಓದುವಾಗ ಮಹಾರಾಷ್ಟ್ರದಲ್ಲಿ ಇನ್ನೂ ಓರ್ವ ನರೇಂದ್ರ ದಾಭೋಳ್ಕರ್ ಎಂಬುವವರು ಅಂಧಶ್ರದ್ಧಾ ನಿರ್ಮೂಲನದ ಮಣಿಹ ಹೊತ್ತು ದಣಿವಿಲ್ಲದಂತೆ. ಢೋಂಗಿತನವನ್ನು ಹಣಿಯುತ್ತಿರುವ ಸಂಗತಿ. ಸಹಜವಾಗಿಯೇ ಲಕ್ಷ್ಯಕ್ಕೆ ಬಂದಿತು. ಆದರೆ ಈ ನರೇಂದ್ರರುಗಳ ಡಿಂಡಿಮವನ್ನು ಮೀರಿ ಬೂಟಾಟಿಕೆ, ಢೋಂಗಿತನ, ಡಾಂಭಿಕತೆಗಳ ಡಂಗುರವೇ ಅಂಗುಲ ಅಂಗುಲ ವ್ಯಾಪಿಸಿದೆ.

ಬಹುತೇಕ ಪತ್ರಿಕೆಗಳಿಗೆ, ಮಾಧ್ಯಮವಲಯಗಳಿಗೆ 'ಭವಿಷ್ಯ'ದ ಹವಿಸ್ಸು ಇಲ್ಲದಿದ್ದಲ್ಲಿ ಅವುಗಳ ಭವಿಷ್ಯ, ಭವಿತವ್ಯಗಳೇ ಭೂತಕಾಲಕ್ಕೆ ಐದಾವು. ಪರ ಮತ್ತು ವಿರೋಧದ ಚರ್ಚೆ ಬರೀ ಕಂಠಶೋಷಣೆಯಾಗುತ್ತದೆ.

ಬೆಳಗಾವಿ **ಅನಂತ ಕಲ್ಲೋಳ**

### ''ಸಿಂಚನ ಕಾವ್ಯ ಸ್ಪರ್ಧೆ ಕವನ ಸಂಕಲನ ಆಹ್ವಾನ''

ವಿಶ್ವ ಪುಸ್ತಕ ದಿನಚಾರಣೆ (ಏಪ್ರಿಲ್ ೨೩) ಅಂಗವಾಗಿ ಸಿಂಚನ ಸಾಹಿತ್ಯಿಕ ಪತ್ರಿಕೆ ಹಾಗೂ ತಾಲೂಕು ಕನ್ನಡ ಸಾಹಿತ್ಯ ಪರಿಷತ್ತು ಸಿಂಚನ ಕಾವ್ಯ ಸ್ಪರ್ಧೆ ಆಯೋಜಿಸಿದೆ. ೨೦೧೧/೧೨ರಲ್ಲಿ ಪ್ರಕಟಗೊಂಡಿರುವ ಕವನ ಸಂಕಲನಗಳನ್ನು ಕವಿಗಳು ಸ್ಪರ್ಧೆಗೆ ಕಳುಹಿಸಬಹುದಾಗಿದೆ. ಪ್ರಥಮ ಸ್ಥಾನ ಪಡೆದವರಿಗೆ ರೂ. ೫೦೦೦/- ನಗದು ನೀಡಿ ಪ್ರಶಸ್ತಿ ಪತ್ರದೊಂದಿಗೆ ಗೌರವಿಸಲಾಗುವುದು. ಕವನ ಸಂಕಲನಗಳನ್ನು ಸ್ಪರ್ಧೆಗೆ ಸ್ವೀಕರಿಸಲು ಕೊನೆಯ ದಿನಾಂಕ ೨೩ ಮಾರ್ಚ್ ೨೦೧೩. ವಿವರಗಳಿಗೆ:

**ಸುರೇಶ ಅಂಗಡಿ**
ಅಧ್ಯಕ್ಷರು, ಕ.ಸಾ.ಪ., ತುಂಗಭದ್ರಾ ಪ್ರೌಢಶಾಲೆ
ಹೂವಿನಹಡಗಲಿ - ೫೮೩ ೨೧೯
ಬಳ್ಳಾರಿ ಜಿಲ್ಲೆ
ಮೊಬೈಲ್: ೯೪೪೫೬ ೦೬೨೩೬

# ಇಂದಿನ ಬಂಡವಾಳಶಾಹಿ ಮತ್ತು ಗಾಂಧೀಜಿ ಚಿಂತನೆ



ಗಾಂಧೀಜಿ ಬಯಸಿದ್ದು ಬಂಡವಳಿಗರು ಧರ್ಮದರ್ಶಿಗಳಾಗಿರಬೇಕೆಂದು; ಆದರೆ ಅವರು ವ್ಯಾಘ್ರಗಳಾಗಿ ಎಲ್ಲವನ್ನೂ ಕಬಳಿಸುತ್ತಿದ್ದಾರೆ. ಅವರ ಆದಾಯವನ್ನು ಪಟ್ಟಿ ಮಾಡಿ ದೇಶದಲ್ಲಿ ಬಡತನ ಇಲ್ಲವಾಗಿಹೋಗಿದೆ ಎಂದು ಹೇಳುವ ತಜ್ಞರು ನಮ್ಮಲ್ಲಿದ್ದಾರೆ. ಸ್ವಾವಲಂಬನೆ ಗಾಂಧೀಜಿ ಆಶಯವಾಗಿತ್ತು . ಹಾಗೆಂದರೆ ವಿದೇಶಗಳ ಸಂಪರ್ಕ ಬೇಡವೆಂದು ಅವರ ಇಂಗಿತವಲ್ಲ. ಅವರೇ ಹೇಳಿದ್ದಂತೆ ನಮ್ಮ ಮನೆಯ ಕಿಟಕಿಗಳನ್ನು ತೆರೆದಿಟ್ಟು ಗಾಳಿಯನ್ನು ಒಳಗೆ ಬರಮಾಡಿಕೊಳ್ಳಬೇಕು, ಆದರೆ ಬಾಗಿಲು, ಗೋಡೆಗಳನ್ನೆಲ್ಲಾ ಕಿತ್ತೆಸೆದು ಮನೆಯನ್ನು ಬಯಲು ಮಾಡಿಬಿಡಬಾರದು. ಭಾರತದಲ್ಲಿ ಬಂಡವಾಳಶಾಹಿಯು ದೇಶವನ್ನು ಕರುಕಲಾಗಿಸುತ್ತಿದೆ. ಗಾಂಧೀಜಿ ಚಿಂತನೆ ಮತ್ತು ಕ್ರಿಯೆ ಮಾಯವಾಗುವ ಮುನ್ನ ನಾವು ಎಚ್ಚೆತ್ತುಕೊಳ್ಳಬೇಕು.
ಅದೇ ಗಾಂಧೀಜಿಗೆ ನಾವು ಸಲ್ಲಿಸಬೇಕಾದ ನಮನ.

**ಡಾ|| ಜಿ. ರಾಮಕೃಷ್ಣ**

ಅಮೆರಿಕಾದ ಅಧ್ಯಕ್ಷ ಬರಾಕ್ ಒಬಾಮ ತಮ್ಮ ಕಚೇರಿಯಲ್ಲಿ ಗಾಂಧೀಜಿ ಛಾಯಾಚಿತ್ರವೊಂದನ್ನು ತೂಗಿಹಾಕಿಕೊಂಡಿದ್ದಾರೆಂಬ ವರದಿ ಬಂದಿತ್ತು. ಅದರಿಂದ ನಾವೆಲ್ಲಾ ಎಷ್ಟು ಪ್ರಸನ್ನರಾಗಬೇಕೆಂಬ ನಿರೀಕ್ಷೆ ಇದೆಯೋ ತಿಳಿಯದು. ಭಾರತದ ಯೋಜನಾ ಆಯೋಗದ ಉಪಾಧ್ಯಕ್ಷ ಅಹ್ಲುವಾಲಿಯ ಸಹ ಗಾಂಧೀಜಿಯನ್ನು ನೇತುಹಾಕಿಕೊಂಡಿರುತ್ತಾರೆ. ಅದರಿಂದ ಜನಪರವಾದ ಯೋಜನೆಗಳೇನೂ ಅವರಿಂದ ರೂಪುಗೊಂಡಿಲ್ಲ. ಸ್ವಾತಂತ್ರ್ಯೋತ್ತರ ಭಾರತವು ವ್ಯವಹಾರದಲ್ಲಿ ಗಾಂಧೀಜಿಯ ಯಾವ ಚಿಂತನೆಯನ್ನಾದರೂ ತಾತ್ವಿಕವಾಗಿ ಅಳವಡಿಸಿಕೊಂಡಿದೆಯೇ ಎಂಬುದರ ಆಮೂಲಾಗ್ರ ಸಂಶೋಧನೆ ಕೈಗೊಂಡರೆ ಅಗಾಧ ನಿರಾಶೆ ನಮ್ಮನ್ನಾವರಿಸುವುದು ಖಚಿತ. ೧೯೩೦ರಷ್ಟು ಹಿಂದೆ ಡಾ|| ಎಂ. ವಿಶ್ವೇಶ್ವರಯ್ಯನವರು ''ಭಾರತಕ್ಕೊಂದು ಯೋಜನೆಯ ಹಾದಿ'' ಎಂಬ ಮಹತ್ವದ ಪುಸ್ತಕವನ್ನು ಪ್ರಕಟಿಸಿದ್ದರು. ಔದ್ಯಮಿಕ ಬೆಳವಣಿಗೆಗೆ ಆದ್ಯತೆ ನೀಡದಿದ್ದರೆ ಭಾರತವು ಅಭಿವೃದ್ಧಿ ಹೊಂದಲಾರದೆಂಬುದು ಅವರ ವಿವೇಚನೆಯಾಗಿತ್ತು. ಕೃಷಿಯನ್ನು ಸಹ ಒಂದು ಉದ್ಯಮದ ಮಾದರಿಯಲ್ಲಿ ನೆಲೆಗೊಳಿಸಬೇಕೆಂಬ ಆಶಯವು ಕಳೆದ ಎರಡು-ಮೂರು ದಶಕಗಳಲ್ಲಿ ನಮ್ಮ ದೇಶದಲ್ಲಿ ಹೆಚ್ಚು ಹೆಚ್ಚು ಪ್ರತಿಪಾದನೆಗೆ ವಿಷಯವಾಗಿದೆ. ಈಗಂತೂ ಅತಿಸಾಮಾನ್ಯ ವ್ಯಾಪಾರಿಗಳ ಸಣ್ಣ ಅಂಗಡಿಗಳನ್ನು ಮುಚ್ಚಿಸಿಬಿಡುವ ಪರಿಣಾಮ ಬೀರುವಂಥ ಕ್ರಮಗಳನ್ನು ಕೇಂದ್ರ ಸರ್ಕಾರ ಬೆಂಬಲಿಸುತ್ತಿದೆ. ಇದೆಲ್ಲದರ ನಡುವೆ ಗಾಂಧೀಜಿ ಎಷ್ಟು ಜೀವಂತವಿದ್ದಾರು ಅಥವಾ ಪ್ರಸ್ತುತವಾಗಿ ಯಾರು, ಎಂಬ ಪ್ರಶ್ನೆ ನಮ್ಮನ್ನು ಕಾಡಬೇಕಾದ್ದು ಸಹಜ. ನಮ್ಮ ಮಧ್ಯೆ ಮತಾಂತರವನ್ನು ಹಿಂಸಾತ್ಮಕವಾಗಿ ವಿರೋಧಿಸುವ ಹೊಸದೊಂದು ಪದ್ಧತಿ ಜಾರಿಯಲ್ಲಿದೆ, ಅದರಿಂದ ಅಮಾಯಕರ ಮೇಲೆ ಹಲ್ಲೆ ನಡೆದಿದೆ, ಕೆಲವು ಕ್ರೈಸ್ತ ಪೂಜಾಮಂದಿರಗಳನ್ನು ಧ್ವಂಸ ಮಾಡಲಾಗಿದೆ. ಆದರೆ ರಾಷ್ಟ್ರದ ಮೂಲಭೂತ ಆರ್ಥಿಕ ನಿರೂಪಣೆಗಳನ್ನು ತೊಡೆದುಹಾಕುವ ''ಸೈದ್ಧಾಂತಿಕ ಮತಾಂತರ'' ಉಗ್ರವಾಗಿ ನಡೆಯುತ್ತಿದೆ, ಅದನ್ನು ವಿರೋಧಿಸುವುದು ಏನೋ ಪಾಪಕೃತ್ಯ ಎಂಬ ಭಾವನೆಯನ್ನು ಬೆಳೆಸಲಾಗುತ್ತಿದೆ. ಹೀಗಿರುವಾಗ ಗಾಂಧೀಜಿ ಸ್ಥಾನವೇನು ಎಂಬ ಶಂಕೆ ನಮ್ಮನ್ನು ಹತಾಶರನ್ನಾಗಿಸಬೇಕಿತ್ತು, ಆದರೆ ಹಾಗೇನೂ ಆಗುತ್ತಿಲ್ಲದಿರುವುದು ವಿಷಾದನೀಯ. ಆದ್ದರಿಂದಲೇ ಪ್ರಸಕ್ತ ವಿದ್ಯಮಾನಗಳನ್ನು ಗಾಂಧೀಜಿ ಕಣ್ಣುಗಳಿಂದ ಗ್ರಹಿಸುವುದು ಉಚಿತವೆನಿಸುತ್ತದೆ. ನಮ್ಮ ಆಳುವ ವರ್ಗವು ಅದನ್ನೆಷ್ಟು ಸಮಾಧಾನದಿಂದ ಪರಿಗಣಿಸುತ್ತದೋ ಎಂಬ ಅನುಮಾನದ ನಡುವೆಯೂ ಗಾಂಧೀಜಿ ಮಂಡಿಸಿದ ಆಕಾಂಕ್ಷೆಗಳ ಹಿನ್ನೆಲೆಯಲ್ಲಿ ಇಂದಿನ ಸನ್ನಿವೇಶವನ್ನು ಗಂಭೀರವಾಗಿ ವಿಶ್ಲೇಷಿಸಿಕೊಳ್ಳುವುದು ಆರೋಗ್ಯಕರ.

ಗಾಂಧೀಜಿ ಕಾಲದ ಬಂಡವಾಳಶಾಹಿಗೆ ಹೋಲಿಸಿದರೆ ಇಂದಿನ ಅದರ ಸ್ವರೂಪ ಬಹಳ ಬದಲಾಗಿದೆ. ಅಂದಿನ ಅತಿದೊಡ್ಡ ಬಂಡವಳಿಗರ ಸಂಖ್ಯೆ ಬೆರಳೆಣಿಕೆಯಷ್ಟು: ಟಾಟಾ, ಬಿರ್ಲಾ, ಲಾಲ್‌ಚಂದ್, ಬಜಾಜ್, ಕಿರ್ಲೋಸ್ಕರ್, ಇತ್ಯಾದಿ. ಇಂದು ಬಂಡವಳಿಗರ ಸಮೂಹದಲ್ಲಿ ನೂರಾರು ಮಂದಿ ಇದ್ದಾರೆ ಮತ್ತು ಅವರ ಸಂಪತ್ತಿನ ಮೊತ್ತ ಗಾಂಧೀಜಿ ಕಾಲದಲ್ಲಿ ಊಹಿಸಲು ಸಾಧ್ಯವಿಲ್ಲದಿದ್ದ ಪ್ರಮಾಣದ್ದು. ಅನೇಕ ರಾಜ್ಯಗಳ ಶಾಸಕರು ಹಾಗೂ ಲೋಕಸಭಾ ಸದಸ್ಯರ ಘೋಷಿತ ಸಂಪತ್ತೇ ತಲಾ ಸಾವಿರ ಕೋಟಿ ರೂಪಾಯಿಗಳಿಗಿಂತ ಹೆಚ್ಚಿನದು. ವಿಶ್ವದ ಅತಿದೊಡ್ಡ ಬಂಡವಳಿಗರ ಪಟ್ಟಿಯಲ್ಲಿ ನಾಲ್ಕೈದು ಭಾರತದ ಬಂಡವಳಿಗರು ಮೊದಲ ಇಪ್ಪತ್ತರಲ್ಲೇ ಬಂದುಬಿಡುತ್ತಾರೆ. ಅಂತರರಾಷ್ಟ್ರೀಯ ಮಟ್ಟದಲ್ಲಿ ಲೇಮನ್ ಬ್ರದರ್ಸ್, ಮೆರಿಲ್ ಲಿಂಚ್, ಮುಂತಾದ ಕಾರ್ಪೊರೇಟ್ ಸಂಸ್ಥೆಗಳು ಮುಳುಗಿಹೋಗುವ ಸ್ಥಿತಿಗೆ ಬಂದಿದ್ದು, ಸರ್ಕಾರದ ಆಸರೆ ಪಡೆದು ಜೀವವನ್ನು ಹೇಗೋ ಉಳಿಸಿಕೊಂಡವು. ಅದರ ಪರಿಣಾಮವಾಗಿ ಭಾರತದ ಹಲವು ಕಾರ್ಪೊರೇಟ್ ಸಂಸ್ಥೆಗಳು ನಡುಗಿದವು, ಆದರೆ ಉರುಳದೆ ಹೇಗೋ ಭದ್ರವಾಗಿ ನಿಂತವು. ಉದಾರೀಕರಣದ ತರುವಾಯದಲ್ಲಿ ಉದರಂಭರಣವನ್ನು ಪುಷ್ಕಳವಾಗಿ ಮಾಡಿಕೊಂಡ ಕೆಲವು ಸಂಸ್ಥೆಗಳ ಗತಿ ಮೂರಾಬಟ್ಟೆ ಆಗಿದ್ದಿತು. ಜಾಗತೀಕರಣ ಮತ್ತು ಖಾಸಗೀಕರಣದ ಭರಾಟೆ ೧೯೯೦ರ ದಶಕದಲ್ಲಿ ಆರಂಭವಾದಾಗಿನಿಂದ ದೇಶದ ಅರ್ಥವ್ಯವಸ್ಥೆಯು ತನ್ನ ಹಿಂದಿನ ಲಕ್ಷಣಗಳನ್ನು ಕಳಚಿಕೊಂಡು ಉತ್ಪಾದನಾ ತಂತ್ರದಲ್ಲಿ ಹೊಸ ಆಯಾಮಗಳನ್ನು ಕಂಡುಕೊಳ್ಳುವುದರಲ್ಲಿ ನಿರತವಾಗಿದೆ. ಸರಕು ಉತ್ಪಾದನೆಯು ದೇಶದ ಆಂತರಿಕ ಮಾರುಕಟ್ಟೆಗೆ ಮತ್ತು ಜನರ ಉಪಭೋಗಕ್ಕೆ ಎಂಬ ನೀತಿಯನ್ನು ಕೈಬಿಟ್ಟು ಎಲ್ಲಾ ಅಂತರರಾಷ್ಟ್ರೀಯ ಮಾರುಕಟ್ಟೆಯ ವ್ಯವಹಾರಕ್ಕೆ ಜೋತುಬೀಳುವಂತೆ ಮಾಡಲಾಗಿದೆ. ಗಾಂಧೀಜಿ ಕಾಲದಲ್ಲಿ ''ರಾಷ್ಟ್ರೀಯ ಬಂಡವಳಿಗ ವರ್ಗ''



ಅಹ್ಲುವಾಲಿಯ
ಎಂಬ ಕೇಡಿಗ

ಎಂಬುದೊಂದಿತ್ತು. ಅದೀಗ ಅಂತರರಾಷ್ಟ್ರೀಯ ಬಂಡವಾಳದ ಬಾಲಂಗೋಚಿಯಂತಾಗಿದೆ. ಎಷ್ಟೋ ಸಾರ್ವಜನಿಕ ವಲಯದ ಕಾರ್ಖಾನೆಗಳು ಮುಚ್ಚಿಹೋಗಿವೆ. ಸ್ವಯಂ ಉತ್ಪಾದನೆ, ಸ್ವಾವಲಂಬನೆ, ಎಂಬ ಕಲ್ಪನೆಗಳನ್ನು ಮೀರಿ ಈಗ ಆಮದುಗಳ ಪರ್ವದಲ್ಲಿ ನಾವಿದ್ದೇವೆ. ಮಾಹಿತಿ ತಂತ್ರಜ್ಞಾನವು ಆರ್ಥಿಕತೆಯ ಕಲಶ; ಅದರಿಂದ ದೊರೆಯುವ ವಿದೇಶಿ ವಿನಿಮಯ ನಮ್ಮ ಬೆನ್ನೆಲುಬು ಎಂಬ ಭ್ರಮೆಗೆ ನಮ್ಮನ್ನು ನಾವು ದೂಡಿಕೊಂಡಿದ್ದೇವೆ. ಬೃಹತ್ ಬಂಡವಾಳ ತೊಡಗಿಸಿ ಬೃಹತ್ ವಿಮಾನ ನಿಲ್ದಾಣಗಳನ್ನು ನಿರ್ಮಿಸುವುದು ಮತ್ತು ವಿಸ್ತಾರವಾದ ಹೆದ್ದಾರಿಗಳನ್ನು ರಚಿಸುವುದು, ಇವೇ ಅಭಿವೃದ್ಧಿಯ ಮಾದರಿಗಳಂತಾಗಿವೆ. ಇವಕ್ಕೆ ಮೊದಲ ಬಲಿ ರೈತರ ಜಮೀನು. ಅದರಿಂದಾಗಿ ಆಹಾರ ಉತ್ಪನ್ನಗಳ ಪ್ರಮಾಣದಲ್ಲಿ ಕುಸಿತ. ಭೂಮಿಯನ್ನು ಎಲ್ಲೆಂದರಲ್ಲಿ ಹಿಗ್ಗಾಮುಗ್ಗ ಖರೀದಿಸುವುದು ಮತ್ತು ರೈತರನ್ನು ಕೃಷಿಯಿಂದ ಹೊರಕ್ಕಟ್ಟುವುದು ಕಳೆದ ಇಪ್ಪತ್ತು ವರ್ಷಗಳಲ್ಲಿ ನೂರಾರು ಕಡೆ ನಡೆದಿದೆ. ಕಳೆದ ಎರಡು ದಶಕಗಳಲ್ಲಿ ಕೃಷಿಗೆ ತೊಡಗಿಸಿರುವ ಭೂಮಿಯಲ್ಲಿ ಶೇಕಡ ಏಳರಷ್ಟು ಕಡಿತ ಉಂಟಾಗಿದೆಯೆಂದು ಒಂದು ವರದಿ ತಿಳಿಸಿದೆ. ಟ್ರಾಕ್ಟರ್, ಸಿಮೆಂಟ್, ಉಕ್ಕು, ರಾಸಾಯನಿಕ ಗೊಬ್ಬರ, ಔಷಧಿ, ಮುಂತಾದುವನ್ನು ನಮ್ಮ ದೇಶದಲ್ಲೇ ಉತ್ಪಾದಿಸಲಾಗುತ್ತಿತ್ತು. ಹಿಂದಿಗಿಂತಲೂ ಕಡಿಮೆ ಪ್ರಮಾಣದಲ್ಲಿ ಅವನ್ನೀಗ ಉತ್ಪಾದಿಸಲಾಗುತ್ತಿದೆ ಮತ್ತು ಕೊರತೆಯನ್ನು ತುಂಬಿಸಲು ಆಮದುಗಳ ಗಾತ್ರ ಹಿಗ್ಗಿದೆ. ಅದರ ಜೊತೆ ಬೆಲೆಗಳೂ ಹೇರಳವಾಗಿ ಹಿಗ್ಗಿವೆ, ಜನರ ಕೊಳ್ಳುವ ಶಕ್ತಿ ಕಡಿಮೆಯಾಗಿದೆ. ಬಡತನದ ರೇಖೆಗಿಂತ ಕೆಳಗಿರುವವರ ಸಂಖ್ಯೆಯನ್ನು ಯೋಜನಾ ಆಯೋಗವು ತನ್ನ ಹೊಸ ಲೆಕ್ಕಾಚಾರದಿಂದ ಕಡಿಮೆಗೊಳಿಸಿದೆ. ಹಳ್ಳಿಗಳಲ್ಲಿ ದಿನಂಪ್ರತಿ ಇಪ್ಪತ್ತಮೂರು ರೂಪಾಯಿಗಳಲ್ಲಿ ಒಬ್ಬ ವ್ಯಕ್ತಿ ಜೀವಿಸಲು ಸಾಧ್ಯವೆಂದು ಆಯೋಗ ತಿಳಿಸಿದೆ. ಯೋಜನಾ ಆಯೋಗದ ಉಪಾಧ್ಯಕ್ಷ ಅಹ್ಲುವಾಲಿಯ ಅದರ ನೂರರಷ್ಟಕ್ಕಿಂತಲೂ ಹೆಚ್ಚು ಹಣವನ್ನು ಅರ್ಧ ದಿನದಲ್ಲಿ ವೆಚ್ಚಮಾಡುತ್ತಾರೆ.

ಸಾಂಪ್ರದಾಯಿಕವಾಗಿ ಯಾವುದನ್ನು ಬಂಡವಾಳಶಾಹಿ ಎಂದು ಕರೆಯಲಾಗುತ್ತಿತ್ತೋ ಅದರ ಸ್ವರೂಪ ಹಿಂದಿಗಿಂತ ಭಿನ್ನವಾಗಿದೆ, ಉಗ್ರವಾಗಿದೆ. ಭಾರತದಂತಹ ದೇಶಗಳ ಸಂದರ್ಭದಲ್ಲಿ ಅದರ ಮೂಲ ಲಕ್ಷಣ ತಿಳಿಯಲು ಸಹಾಯಕವಾಗುವಂತಹ ಒಂದು ಪ್ರಸಂಗವನ್ನು ಉಲ್ಲೇಖಿಸಬಹುದು. ಅದು ಪಿ. ವಿ. ನರಸಿಂಹರಾವ್ ಸರ್ಕಾರವು ನಮ್ಮ ದೇಶದಲ್ಲಿ ಅಬ್ಬರದಿಂದ ಜಾಗತೀಕರಣವನ್ನು ಸ್ವಾಗತಿಸುತ್ತಿದ್ದ ಕಾಲದ್ದು. ೧೯೯೭ರಲ್ಲಿ ಜೋಶುವಾ ಕಾರ್ಲಿನರ್ ಎಂಬೊಬ್ಬಾಕೆ ಅಮೆರಿಕಾದಲ್ಲಿ ಒಂದು ಗ್ರಂಥವನ್ನು ಪ್ರಕಟಿಸಿದಳು. ಅಭಿವೃದ್ಧಿ ಎಂಬ ಮುಸುಕಿನಲ್ಲಿ ದೊಡ್ಡ ಬಂಡವಾಳಶಾಹಿ ದೇಶಗಳು ಅನಭಿವೃದ್ಧ ದೇಶಗಳ ರಕ್ತ ಹೀರುವುದು ಹೇಗೆಂದು ವಿವರಿಸುವ ಗ್ರಂಥ ಅದು. ಅದಕ್ಕೆ ಪೀಠಿಕೆಯಾಗಿ ಆಕೆ ೧೯೯೧ರಲ್ಲಿ ವಿಶ್ವ ಬ್ಯಾಂಕ್‌ನಲ್ಲಿ ನಡೆದಿದ್ದ ಒಂದು ಚರ್ಚೆಯನ್ನು ಪ್ರಸ್ತಾಪಿಸಿದ್ದಾಳೆ. ಆಗ್ಗೆ ಲಾರೆನ್ಸ್ ಸಮರ್ಸ್ ಎಂಬ ಆರ್ಥಿಕ ತಜ್ಞ ವಿಶ್ವ ಬ್ಯಾಂಕಿನ ಉನ್ನತ ಅಧಿಕಾರಿಯಾಗಿದ್ದ. ತನ್ನ ಸಹೋದ್ಯೋಗಿ ಪರಿಣತನಿಗೆ ಅವನೊಂದು ಟಿಪ್ಪಣಿ ಕಳಿಸಿದ್ದ. ಅಭಿವೃದ್ಧಿ ಹೊಂದುತ್ತಿರುವ ದೇಶಗಳಲ್ಲಿ ಬ್ಯಾಂಕ್ ಯಾವ ನೀತಿ ಅನುಸರಿಸಬೇಕೆಂದು ಅವನು ಸಲಹೆಯನ್ನಿತ್ತಿದ್ದ. ಅವನೇ ಬರೆದಿದ್ದ ಟಿಪ್ಪಣಿಯ ಒಂದು ಭಾಗ ಹೀಗಿದೆ : ''ನಾನು-ನೀನು ಸ್ವಲ್ಪ ಬಿಚ್ಚು ಮಾತಿನಲ್ಲಿ ಒಂದಂಶವನ್ನು ಪರಿಶೀಲಿಸೋಣ. ವಿಶ್ವ ಬ್ಯಾಂಕ್ ಇಂದಿನ ಸಂದರ್ಭದಲ್ಲಿ ಯಾವ ಅಳುಕೂ ಇಲ್ಲದೆ ಒಂದು ವಿಧಾನವನ್ನು ಹೆಚ್ಚುಹೆಚ್ಚಾಗಿ ಕಾರ್ಯಗತಗೊಳಿಸಬೇಕು. ಈ ಕೊಳಕು ಉದ್ಯಮಗಳಿವೆಯಲ್ಲಾ, ಅಂಥವನ್ನು ಕಡಿಮೆ ಅಭಿವೃದ್ಧಿ ಹೊಂದಿದ ದೇಶಗಳಿಗೆ ರವಾನಿಸಬೇಕು, ಅಲ್ಲವೆ ?''

ಈ ಪೀಠಿಕೆಯ ಅರ್ಥವೇನು ? (ಅ) ಭಾರತದಂತಹ ದೇಶಗಳು ಕಡಿಮೆ ಅಭಿವೃದ್ಧಿ ಹೊಂದಿರುವ ದೇಶಗಳು; (ಆ) ವಿಷಾನಿಲವನ್ನು ಅಪಾರವಾಗಿ ಉಗುಳುವ ಉದ್ಯಮಗಳನ್ನು ಅಮೆರಿಕಾದಂತಹ ದೇಶಗಳಲ್ಲಿ ಇರಿಸಿಕೊಳ್ಳದೆ ಭಾರತದಂತಹ ದೇಶಗಳಲ್ಲಿ ಸ್ಥಾಪಿಸಬೇಕು ಉದಾಹರಣೆಗೆ, ಸಾವಿರಾರು ಜನರ ಆಹುತಿ ತೆಗೆದುಕೊಂಡ ಭೋಪಾಲಿನ ಯೂನಿಯನ್ ಕಾರ್ಬೈಡ್. (ಈ ನಿದರ್ಶನವನ್ನು ಸಮರ್ಸ್ ನೀಡಿರಲಿಲ್ಲ, ಆದರೆ ಅದೇ ಅವನ ಇಂಗಿತವೆಂಬುದು ಸ್ಪಷ್ಟವಾಗಿದೆ); (ಇ) ಕಡಿಮೆ ಅಭಿವೃದ್ಧಿ ಹೊಂದಿದ ದೇಶಗಳ ಜನರ ಜೀವಕ್ಕೆ ಹಾನಿಯಾದರೆ ಪರವಾಗಿಲ್ಲ, ಅಮೆರಿಕಾದ ಜನರಿಗೆ ಹಾಗಾಗಬಾರದು; (ಈ) ಅನಭಿವೃದ್ಧ ದೇಶಗಳಲ್ಲಿ ದುಡಿಯುವವರಿಗೆ ಕಡಿಮೆ ಕೂಲಿ ಕೊಡುವುದರಿಂದ ಲಾಭದ ಪ್ರಮಾಣ ಹೆಚ್ಚಾಗಿರುತ್ತದೆ. ಆದ್ದರಿಂದ ಅಪಾರ ಲಾಭ ಗಳಿಸಲು ಈ ಕ್ರಮ ಅನುಕೂಲ ಕಲ್ಪಿಸಿಕೊಡುತ್ತದೆ. ಆದ್ದರಿಂದಲೇ ಸಮರ್ಸ್ ಹೇಳಿದ : ''ಇದರಲ್ಲಿ ಆರ್ಥಿಕವಾಗಿ ಬುದ್ಧಿವಂತಿಕೆಯ ತರ್ಕವಿದೆ. ವಿಷಪೂರಿತ ಪದಾರ್ಥಗಳನ್ನು ಅನಭಿವೃದ್ಧ ದೇಶಗಳ ತಲೆಯ ಮೇಲೆ ಸುರಿಯೋಣ, ಏಕೆಂದರೆ ಅಲ್ಲಿ ಕೂಲಿಯ ಪ್ರಮಾಣ ಕಡಿಮೆ. ಈ ಸತ್ಯವನ್ನು ಮನಗಂಡು ನಾವು ವಿಶ್ವ ಬ್ಯಾಂಕಿನ ನೀತಿಯ ನಿರೂಪಣೆ ಮಾಡೋಣ.'' ಈ ಟಿಪ್ಪಣಿಯನ್ನು ಬಹಿರಂಗಗೊಳಿಸಿದ್ದು ಇನ್ನೊಬ್ಬ ಮಹಿಳೆ, ರುತ್ ಬೆಟಿನಾ ಬ್ರಿನ್ ಎಂಬಾಕೆ. ಆಕೆ ಹೇಳಿದಳು, ''ನೋಡಿ, ಈ ಟಿಪ್ಪಣಿ ಬರೆದ ಲಾರೆನ್ಸ್ ಬಹಳ ಜಾಣ. ಮುಂದೊಮ್ಮೆ ಅವನು ಅತ್ಯುನ್ನತ ಸ್ಥಾನ ಗಳಿಸುವುದರಲ್ಲಿ ಸಂದೇಹವಿಲ್ಲ'' ಎಂದು. ಅದು ಹಾಗೇ ಆಯಿತು. ಅವನು ಹಾರ್ವರ್ಡ್ ವಿಶ್ವವಿದ್ಯಾನಿಲಯದಲ್ಲಿ ಅರ್ಥಶಾಸ್ತ್ರ ಪ್ರಾಧ್ಯಾಪಕನಾದ, ಕ್ಲಿಂಟನ್ ಅಮೆರಿಕಾದ ಅಧ್ಯಕ್ಷನಾದಾಗ ದೇಶದ ಅರ್ಥ ಸಚಿವನಾದ, ನಂತರ ಅಂತರರಾಷ್ಟ್ರೀಯ ವಿದ್ಯಮಾನಗಳ ಉಪಕಾರ್ಯದರ್ಶಿಯಾದ. ಅದರ ನಂತರ ಮತ್ತೆ ಹಾರ್ವರ್ಡ್‌ಗೆ ಹಿಂದಿರುಗಿ ವಿಶ್ವವಿದ್ಯಾನಿಲಯದ ಅಧ್ಯಕ್ಷನಾದ. ಅಲ್ಲಿ ಅವನೊಂದು ಹೇಳಿಕೆ ನೀಡಿದ್ದ, ''ಮಹಿಳೆಯರ ಮಿದುಳು ಪುರುಷರ ಮಿದುಳಿನಷ್ಟು ಬೆಳೆದಿಲ್ಲವಾದ್ದರಿಂದ ಅವರು ಪುರುಷರಷ್ಟು ಜ್ಞಾನಿಗಳಾಗಲಾರರು,'' ಎಂದು. ಹಾರ್ವರ್ಡಿನ ಮಹಿಳೆಯರೆಲ್ಲಾ ಒಟ್ಟಾಗಿ ಹೋರಾಡಿ ಅವನನ್ನು ಅಧ್ಯಕ್ಷ ಪದವಿಯಿಂದ ಹೊಡೆದೋಡಿಸಿದರು !

ಬಂಡವಾಳಶಾಹಿಯ ಮಾನವ-ವಿರೋಧಿ ನೀತಿ, ಅದರ ಕ್ರೌರ್ಯ, ಅದರ ಪಿತೂರಿ, ಇಂತಹ ಪ್ರಸಂಗಗಳಲ್ಲಿ ಎದ್ದುಕಾಣುತ್ತದೆ. ಹಿಂದೆ ಮಲಯೇಷ್ಯದ ಪ್ರಧಾನಿಯಾಗಿದ್ದ ಮೊಹಮ್ಮದ್ ಮಹಾತೀರ್ ಜಾಗತೀಕರಣವನ್ನು ಕುರಿತು ಹೇಳಿದ್ದ ಒಂದು ಮಾತು ಹೀಗಿದೆ : ''ನಾವು ಜಾಗತೀಕರಣವನ್ನು ಮೊದಲಿಗೆ ವಿರೋಧಿಸಿದಾಗ ಅದನ್ನು ಸಮರ್ಥಿಸುವವರೇ ಎಲ್ಲೆಲ್ಲೂ ತುಂಬಿಹೋಗಿದ್ದರು. ಈಗ ಜನಕ್ಕೆ ತಿಳಿಯುತ್ತಿದೆ, ಅದರ ಹುಳುಕುಗಳು - ಕುತಂತ್ರಗಳು ಏನೆಂದು. ವಿಶೇಷವಾಗಿ, ಅಭಿವೃದ್ಧಿ ಹೊಂದುತ್ತಿರುವ ದೇಶಗಳಿಗೆ ಜಾಗತೀಕರಣವು ಒಂದು ಪಿಡುಗು. ಅದನ್ನು ರೂಪಿಸಿದ್ದು ಶ್ರೀಮಂತ ದೇಶಗಳು. ಸಹಜವಾಗಿಯೇ ಅವರಿಗೆ ಲಾಭ ಜಾಸ್ತಿಯಾಗುವಂತೆ ಅವರದನ್ನು ಪ್ರತಿಪಾದಿಸಿದ್ದಾರೆ, ಆದರಿಂದ ಲಾಭವಾಗುತ್ತಿರುವುದು ಅವರಿಗೆ, ನಮಗಲ್ಲ.''

ಇದೇ ಅಭಿಪ್ರಾಯವನ್ನು ವಿಲಿಯಂ ಟ್ಯಾಬ್ ಎಂಬ ಅರ್ಥಶಾಸ್ತ್ರಜ್ಞ ಬೇರೆ ರೀತಿಯಲ್ಲಿ ಮಂಡಿಸಿದ್ದಾನೆ: ''ಜಾಗತೀಕರಣ ಮತ್ತು ಬಂಡವಾಳಶಾಹಿ ಬೇರೆಬೇರೆಯಲ್ಲ. ನಿಜವಾದ ದೊಡ್ಡ ಸಮಸ್ಯೆಯೆಂದರೆ ಬಂಡವಾಳಶಾಹಿಯೇ. ಜಾಗತೀಕರಣ ಅದರ ಒಂದು ಭಾಗ,



ಮೊಹಮ್ಮದ್ ಮಹಾತೀರ್

ಅಷ್ಟೆ.'' ವಸಾಹತುಶಾಹಿ ಕಾಲದಲ್ಲಿ ಹಿಂದುಳಿದ ದೇಶಗಳ ಕಚ್ಚಾ ಸಾಮಾಗ್ರಿಗಳನ್ನು ಲೂಟಿ ಮಾಡಲಾಯಿತು; ಈಗ ಮಾರುಕಟ್ಟೆಯನ್ನು ಆಕ್ರಮಿಸಿ ಲೂಟಿಯನ್ನು ಮುಂದುವರಿಸಲಾಗುತ್ತಿದೆ. ''ಆಧುನಿಕ ತಂತ್ರಜ್ಞಾನವು ಎಲ್ಲರಲ್ಲೂ ಸಮಾನತೆಯನ್ನು ಉಂಟುಮಾಡುತ್ತದೆ'' ಎಂಬ ಮಾತನ್ನು ನವ-ವಸಾಹತುಶಾಹಿ ಪ್ರಕ್ರಿಯೆಯು ಸುಳ್ಳಾಗಿಸಿದೆ. ಗಾಂಧೀಜಿ ಭಾರತದ ಸ್ವಾತಂತ್ರ್ಯ ಸಂಗ್ರಾಮಕ್ಕೆ ಹೊಸ ಚೈತನ್ಯವನ್ನು ತುಂಬುವ ಕಾಲಕ್ಕೆ ಲಾಲಾ ಲಜಪತ್ ರಾಯ್ ಮಹತ್ವದ ಒಂದು ಸೈದ್ಧಾಂತಿಕ ಗ್ರಂಥವನ್ನು ಪ್ರಕಟಿಸಿದ್ದರು. ''ಭಾರತಕ್ಕೆ ಇಂಗ್ಲೆಂಡಿನ ಋಣ'' ಎಂಬ ಆ ಗ್ರಂಥದಲ್ಲಿ ಅವರು ವಿಪುಲವಾಗಿ ಅಂಕಿ-ಅಂಶಗಳನ್ನು ನೀಡಿ ಇಂಗ್ಲೆಂಡ್ ನಮ್ಮ ದೇಶದಿಂದ ಸೂರೆಗೊಂಡಿದ್ದ ಸಂಪತ್ತಿನ ಪ್ರಮಾಣವನ್ನು ಸ್ಥೂಲವಾಗಿ ನಿರ್ಧರಿಸಿ ಹೇಳಿದ್ದರು. ಗಾಂಧೀಜಿಯವರ ಮಾನವ ಕೇಂದ್ರಿತ ಚಿಂತನೆ ಮತ್ತು ಹೋರಾಟಕ್ಕೆ ಅದು ಹಿನ್ನೆಲೆಯನ್ನೊದಗಿಸಿತು. ಸ್ಥಳೀಯ ಬಂಡವಳಿಗರನ್ನು ಗಾಂಧೀಜಿ ಧರ್ಮದರ್ಶಿಗಳೆಂದು ವ್ಯಾಖ್ಯಾನಿಸುವಾಗ ಅವರ ಮನಸ್ಸಿನಲ್ಲಿದ್ದುದು ಅನನ್ಯವಾದ ಒಂದು ವಿತರಣಾ ವ್ಯವಸ್ಥೆ. ಸಮಾಜದ ಪರವಾಗಿ ಆಸ್ತಿಯನ್ನು ತಮ್ಮಲ್ಲಿ ಹೊಂದಿರುವವರು ಅವರು ಎಂಬುದು ಗಾಂಧೀಜಿ ಕಲ್ಪನೆ. ಸಾಮಾಜಿಕ ನ್ಯಾಯವನ್ನು ಮೂಲಭೂತ ಆಶಯವನ್ನಾಗಿ ಉಳ್ಳ ಗಾಂಧೀಜಿಗೆ ಆಸ್ತಿಯ ವಿಕೇಂದ್ರೀಕರಣವನ್ನು ಮಾಡುವುದು ಹೇಗೆಂಬುದು ಒಂದು ಸವಾಲಾಗಿತ್ತು. ಆ ಕ್ರಿಯೆಯು ಅವರು ನಂಬಿದ್ದ ಅಹಿಂಸಾ ತತ್ವಕ್ಕೆ ಅನುಗುಣವಾಗಿಯೇ ನಡೆಯಬೇಕೆಂಬ ಇರಾದೆ ಬಲವಾಗಿದ್ದುದರಿಂದ ಬಂಡವಳಿಗರ ಬಗೆಗಿನ ಗಾಂಧೀಜಿ ಅವರ ನಿಲುವು ಕೆಲವೊಮ್ಮೆ ವಿರೋಧಗಳಿಂದ ಕೂಡಿದ್ದಿತೆಂದು ಟೀಕೆಗೆ ಗುರಿಯಾಗಿದೆ. ಮೂಲತಃ ಸಂಪತ್ತು ಎರಡು ರೂಪಗಳದ್ದು: ಒಂದು ಪ್ರಕೃತಿದತ್ತವಾದದ್ದು; ಭೂಮಿ, ನೀರು, ಮರ, ಖನಿಜ, ಕಲ್ಲು, ಇತ್ಯಾದಿ. ಇನ್ನೊಂದು ಅವನ್ನು ಬಳಸಿಕೊಂಡು ದುಡಿಮೆ ಮತ್ತು ಕೌಶಲ್ಯಗಳಿಂದ ಉಪಭೋಗಕ್ಕೆ ಯೋಗ್ಯವಾಗುವಂತಹ ಪದಾರ್ಥಗಳನ್ನು ಉತ್ಪಾದಿಸುವುದು; ಮಡಿಕೆ, ನೇಗಿಲು, ಕಾಳು, ಕತ್ತಿ, ಇತ್ಯಾದಿ. ಸ್ವಯಂ ಪರಿಪೂರ್ಣವಾದ ಗ್ರಾಮ ಸ್ವರಾಜ್ಯ ಅಥವಾ ಗ್ರಾಮ ಸ್ವಾವಲಂಬನೆ ಎಂಬುದು ಗಾಂಧೀಜಿ ಆದರ್ಶ. ಎಲ್ಲವನ್ನೂ ಕೇಂದ್ರೀಕರಿಸುವ ಬಂಡವಾಳಶಾಹಿಯು ಅದಕ್ಕೆ ವಿರೋಧವಾದ ಧ್ರುವ. ಆಧುನಿಕ ಯಾಂತ್ರಿಕ ಉತ್ಪಾದನೆಯ ಕ್ರಮವು ಯಂತ್ರ ಮತ್ತು ದುಡಿಮೆಗಾರನನ್ನು ದೂರೀಕರಿಸುತ್ತದೆ, ಏಕೆಂದರೆ ಯಂತ್ರವು ದುಡಿಮೆಗಾರನದಲ್ಲ, ಅಲ್ಲಿ ಅವಿನಾಭಾವ ಸಂಬಂಧವಿಲ್ಲ.

ಗ್ರಾಮ ಸ್ವಾವಲಂಬನೆಯ ವಿಸ್ತೃತ ರೂಪವೇ ರಾಷ್ಟ್ರೀಯ ಸ್ವಾವಲಂಬನೆ. ಇಲ್ಲಿಯ ನಮ್ಮ ದುಡಿಯುವ ಕೈಗಳಿಗೆ ಕೆಲಸವಿಲ್ಲದಂತಾದರೆ ಪಾರತಂತ್ರ್ಯ ಮತ್ತು ಬಡತನ ಅನಿವಾರ್ಯವೆಂಬುದು ಗಾಂಧೀಜಿ ಗ್ರಹಿಕೆ. ಆ ನೆಲೆಯಲ್ಲಿ ನಿಂತು ಅವರು ವಿದೇಶಿ ಬಟ್ಟೆಗಳನ್ನು ಸುಡುವ ಒಂದು ಕಾರ್ಯಕ್ರಮವನ್ನು ಜಾರಿಗೊಳಿಸಿದ್ದರು. ಅದು ದ್ವೇಷದಿಂದ ಪ್ರೇರಿತವಾಗಿದ್ದಿತೆಂದು ರವೀಂದ್ರನಾಥ ಠಾಕೂರರು ಅಕ್ಟೋಬರ್ ೧೯೨೧ರಲ್ಲಿ ತಮ್ಮ ಒಂದು ಲೇಖನದಲ್ಲಿ ಗಾಂಧೀಜಿಯನ್ನು ಟೀಕಿಸಿದ್ದರು. ಅವರ ಲೇಖನದ ಒಂದು ಭಾಗ ಹೀಗಿದೆ : ''ನಮ್ಮ ನಾಡಿನಲ್ಲಿ ಬಟ್ಟೆಯಿಲ್ಲದೆ ಚಳಿಯಲ್ಲಿ ನಡುಗುವ ಮಂದಿ ಲಕ್ಷಗಟ್ಟಲೆ ಇರುವಾಗ ಅವರ ಸಮ್ಮುಖದಲ್ಲಿ ವಿದೇಶಿ ಬಟ್ಟೆಯನ್ನು ಗುಡ್ಡೆಮಾಡಿ ಬೆಂಕಿ ಹಚ್ಚುವುದು ಗಾಂಧೀಜಿಯ ಮಾಂತ್ರಿಕ ನಿರೂಪಣೆಗಳಲ್ಲೊಂದು. ಆರ್ಥಿಕ ತತ್ವವನ್ನು ಗಾಳಿಗೆ ತೂರಿ ಸುಳ್ಳು ನೈತಿಕತೆಯನ್ನು ಅದು ಎತ್ತಿಹಿಡಿಯುತ್ತದೆ.''

ವಿದೇಶಿ ಬಂಡವಾಳವು ಭಾರತದ ಗ್ರಾಮಗಳಲ್ಲಿ ಬೇಗೆಯನ್ನು ಹರಡುತ್ತದೆಂಬ ಗಾಂಧೀಜಿ ಸಿದ್ಧಾಂತವು ಅವರ ಬಟ್ಟೆ ಸುಡುವ ಕಾರ್ಯಕ್ರಮಕ್ಕೆ ಆಧಾರವಾಗಿತ್ತು. ಅಂದರೆ, ಯಾಂತ್ರಿಕ ಉತ್ಪಾದನೆಯೆದುರು ಕರಕುಶಲ ಕೈಗಾರಿಕೆಯು ಸೊರಗುತ್ತದೆ, ಉತ್ಪಾದನೆ ಅಪ್ರಸ್ತುತವಾಗುತ್ತದೆ, ನಿರುದ್ಯೋಗ ತಾಂಡವವಾಡುತ್ತದೆ, ಬಡತನ ಬಲಿಯುತ್ತದೆ, ಎಂದರ್ಥ. ರವೀಂದ್ರನಾಥರು ಮೂಲ ಪ್ರಶ್ನೆಯನ್ನು ಅವಗಣಿಸಿ ತಕ್ಷಣದ ಸನ್ನಿವೇಶಕ್ಕೆ ಪ್ರತಿಕ್ರಿಯಿಸಿದ್ದರು. ಗಾಂಧೀಜಿಗೆ ಸೈದ್ಧಾಂತಿಕ ನಿರೂಪಣೆ ಮತ್ತು ಕಾರ್ಯಾಚರಣೆ ಜೊತೆಜೊತೆಯಲ್ಲಿ ಹೋಗುವಂಥವು, ಬೆಸೆದಿರುವಂಥವು. ಆದ್ದರಿಂದ ರವೀಂದ್ರನಾಥರಿಗೆ ಅಕ್ಟೋಬರ್ ೧೩, ೧೯೨೧ರ 'ಯಂಗ್ ಇಂಡಿಯ'ದ ಲೇಖನದಲ್ಲಿ ಗಾಂಧೀಜಿ ದಟ್ಟವಾದ ಭಾವನೆಗಳಿಂದ ಶೋಭಿಸುವ ಉತ್ತರವನ್ನು ಬರೆದರು : ''ಸಂಗ್ರಾಮವು ಆರಂಭವಾದಾಗ ಕವಿಯು ತನ್ನ ವೀಣೆಯನ್ನು, ಲಾಯರು ತನ್ನ ಕಾನೂನು ವರದಿಗಳನ್ನು, ವಿದ್ಯಾರ್ಥಿ ತನ್ನ ಪಠ್ಯಪುಸ್ತಕಗಳನ್ನು ಬದಿಗೊತ್ತಿದುತ್ತಾರೆ. ಸಂಗ್ರಾಮ ಮುಗಿದ ನಂತರವೇ ಕವಿಯು ಸತ್ಯದ ರಾಗವನ್ನು ಹಾಡುವುದು. ಮನೆಗೆ ಬೆಂಕಿ ಬಿದ್ದಾಗ ಅದರಲ್ಲಿ ವಾಸಮಾಡುವ ಪ್ರತಿಯೊಬ್ಬನೂ ಒಂದೊಂದು ಕೊಡ ಹಿಡಿದು ಬೆಂಕಿಯನ್ನು ಆರಿಸಲು ಯತ್ನಿಸುತ್ತಾನೆ. ನನ್ನ ಸುತ್ತಲೂ ಅನ್ನವಿಲ್ಲದೆ ಜನ ಸಾಯುತ್ತಿರುವಾಗ ಅವರಿಗೆ ಉಣಬಡಿಸುವುದಷ್ಟೇ ನನ್ನ ಕರ್ತವ್ಯ. ಭಾರತದಲ್ಲಿ ಜ್ವಾಲೆ ಹೊತ್ತಿ ಉರಿಯುತ್ತಿದೆ. ರಾಷ್ಟ್ರದ ಶಕ್ತಿ ನಶಿಸಿಹೋಗುತ್ತಿದೆ. ಹಸಿವಿನಿಂದ ನರಳುತ್ತಿರುವವರು ಆಹಾರ ಕೊಳ್ಳಲು ಸಹ ಅಶಕ್ತರಾಗಿದ್ದಾರೆ; ಕಾರಣ ಅವರಿಗೆ ಉದ್ಯೋಗವಿಲ್ಲ... ವಿದೇಶಿ ಬಟ್ಟೆಗಳನ್ನು ಸುಡುವಾಗ ನನ್ನ ನಾಚಿಕೆಗೇಡುತನವನ್ನು ನಾನು ಸುಡುತ್ತಿದ್ದೇನೆ... ಹಿಂದಿನ ದಿನ ಸಾಕಷ್ಟು ಉಂಡಿದ್ದ ಹಕ್ಕಿ ಮಾರನೆಯ ಬೆಳಿಗ್ಗೆ ರಕ್ತ-ಮಾಂಸಗಳಿಂದ ತುಂಬಿದ ತನ್ನ ದೇಹವನ್ನು ಸರಾಗವಾಗಿ ಎತ್ತಿಕೊಂಡು ಲವಲವಿಕೆಯಿಂದ ಎತ್ತರಕ್ಕೆ ಹಾರುತ್ತದೆ. ಆದರೆ ಉಸಿರಾಡಲಿಕ್ಕೂ ತ್ರಾಣವಿಲ್ಲದಂತಹ ಹಕ್ಕಿಗಳನ್ನು ನನ್ನ ಜೀವನದಲ್ಲಿ ನಾನು ಕಂಡಿದ್ದೇನೆ. ಅವಕ್ಕೆಂತಹ ಹುರುಪನ್ನು ತುಂಬಿ ಮೇಲೇರುವಂತೆ ಮಾಡುವುದೋ ಕಾಣೆ. ಭಾರತದ ಆಗಸದಡಿಯಲ್ಲಿ ಸೊರಗುತ್ತಿರುವ ಮಾನವ ಹಕ್ಕಿಯು ಹಿಂದಿನ ದಿನ ಮಲಗಿದ್ದಾಗ್ಗಿಂತಲೂ ಹೆಚ್ಚು ನಿಶ್ಶಕ್ತವಾಗಿ ಮಾರನೆಯ ದಿನ ಕಣ್ಣು ಬಿಡುತ್ತದೆ. ಲಕ್ಷಾಂತರ ಜನಕ್ಕೆ ಇದು ಅನುದಿನದ ಚರ್ಯೆಯಾಗಿಬಿಟ್ಟಿದೆ. ಆ ನೋವಿನ ಪರಿಸ್ಥಿತಿಯನ್ನು ಬಣ್ಣಿಸಲಸದಳ; ಅದನ್ನರಿಯ ಬೇಕಾದರೆ ಅದನ್ನನುಭವಿಸಬೇಕು... ಹಸಿದ ಕೋಟಿಗಟ್ಟಲೆ ಜನ ಒಕ್ಕೊರಲಿನಿಂದ ಚೀತ್ಕರಿಸುವುದು ಸ್ಫೂರ್ತಿಯ ನ್ನೀಯುವ ಅನ್ನಕ್ಕಾಗಿ. ಅದನ್ನವರಿಗೆ ಕೊಡಲು ನಾವು ಅಶಕ್ತರಾಗಿದ್ದೇವೆ. ಅದನ್ನವರೇ ಸಂಪಾದಿಸುವಂತಾಗಬೇಕು. ತಮ್ಮ ಕಾಯಕಲ್ಪದಿಂದಲ್ಲದೆ ಬೇರಾವ ರೀತಿಯಲ್ಲೂ ಅದನ್ನವರು ಸಂಪಾದಿಸಿಕೊಳ್ಳಲಾರರು.''

ಗಾಂಧೀಜಿ ಅಂದಿಗೆ ಹೇಳಿದ್ದು ಇಂದಿಗೂ ನಿಜವಾಗಿಯೇ ಇರುವುದು ನಮ್ಮ ದೇಶವು ಅನುಸರಿಸುತ್ತಾ ಬಂದಿರುವ ''ಅಭಿವೃದ್ಧಿ'' ಮಾದರಿ ಅದೆಷ್ಟು ಅಪಕ್ವ ಮತ್ತು ಅಸಂಗತ ಎಂಬುದನ್ನು ಬಿಚ್ಚಿ ತೋರಿಸುತ್ತದೆ. ಇಂದಿನ ಬಂಡವಾಳಶಾಹಿಯು ಪ್ರವರ್ಧಮಾನಕ್ಕೆ ಬಂದಿರುವ ವ್ಯವಸ್ಥೆ. ನಮ್ಮ ನಿವ್ವಳ ವಾರ್ಷಿಕ ಉತ್ಪಾದನೆ, ಅದರ ಬೆಳವಣಿಗೆಯ ಸರಾಸರಿ ದರ, ವಿದೇಶಿ ಬಂಡವಾಳದ ಹೂಡಿಕೆ, ವಿದೇಶಿ ವಿನಿಮಯದ ಸಂಗ್ರಹ, ಹೀಗೆ ಪ್ರತಿನಿತ್ಯ ನಮ್ಮ ಮುಂದೆ ತಲೆ ಚಿಟ್ಟಿಡಿಯುವಷ್ಟು ಅಂಕಿ-ಅಂಶಗಳ ಯಾದಿ ಬರುತ್ತದೆ. ಇದಾವುದರಲ್ಲೂ ಗಾಂಧೀಜಿ ತತ್ವದ ಸೋಂಕಿಲ್ಲ, ಏಕೆಂದರೆ ನೀತಿರಹಿತ ಬಂಡವಾಳಶಾಹಿಗೆ ನೀತಿಯನ್ನು ಹೇರಲಾಗುವುದಿಲ್ಲ! ಜಾಗತೀಕರಣವೆಂಬುದು ಯಶಸ್ವೀ ನಿಯಂತ್ರಣವು ಸಾಧ್ಯವಿಲ್ಲದ ಸನ್ನಿವೇಶದ ಬಂಡವಾಳಶಾಹಿ. ಅದರಲ್ಲಿ ವಿಶ್ವ ವ್ಯಾಪಾರ ಸಂಸ್ಥೆಯ ಕಟ್ಟುನಿಟ್ಟು ನಿರ್ದೇಶನಗಳಿವೆ. ವಿದೇಶಗಳಿಂದ ಎಲ್ಲ ಸರಕು ಮತ್ತು ಸೇವೆಗಳಿಗೆ ಮುಕ್ತ ಪ್ರವೇಶ ಇರಬೇಕೆಂಬ ನಿರ್ಬಂಧಕ್ಕೆ ನಮ್ಮ ದೇಶ ಶರಣಾಗಿರುವಾಗ ಸ್ವದೇಶಿ, ಸ್ವಾವಲಂಬನೆ, ಉತ್ಪಾದನೆಯ ನ್ಯಾಯಯುತ ವಿತರಣೆಯ ಮೌಲ್ಯ, ಎಲ್ಲವೂ ಕೊಚ್ಚಿಹೋಗಿವೆ. ಬಾಯುಪಚಾರಕ್ಕೆ ಮಾತ್ರ ಗಾಂಧೀಜಿಯ ಸ್ಮರಣೆ ಸಾಧ್ಯ. ಏಕೆಂದರೆ ಸಕಲ ಉತ್ಪಾದನಾ ಮತ್ತು ವಾಣಿಜ್ಯ ವ್ಯವಹಾರಗಳೂ ಬಂಡವಾಳಶಾಹಿ ಬಕಾಸುರನ ಆಣತಿಯಂತೆ ನಡೆಯಬೇಕು. ಮಾರುಕಟ್ಟೆಯಲ್ಲಿ ಸ್ಪರ್ಧಿಸಲು ಅಶಕ್ತರಾದ ರೈತರಿಗೆ ಸಹಾಯಧನ ನೀಡಲು ಸಹ ಭಾರತದ ಸರ್ಕಾರಕ್ಕೆ ಸ್ವಾತಂತ್ರ್ಯವಿಲ್ಲದಂತಹ ಸಾರ್ವಭೌಮತ್ವ ನಮ್ಮದು. ಅದು ಜಾಗತೀಕರಣದ ಹಿನ್ನೆಲೆಯ ಬಂಡವಾಳಶಾಹಿ ಲಕ್ಷಣ. ಗಾಂಧೀಜಿ ಚಿಂತನೆ ಮತ್ತು ಆಕಾಂಕ್ಷೆಗಳಿಗೆ ಇದು ಸಂಪೂರ್ಣವಾಗಿ ವ್ಯತಿರಿಕ್ತವಾದ್ದು. ಇನ್ನು ಸ್ವದೇಶಿ ಚಳುವಳಿಗೆ ಅವಕಾಶ ಎಲ್ಲಿಯದು! ಗಾಂಧೀಜಿಯನ್ನು ೧೯೪೮ರಲ್ಲಿ ದೈಹಿಕವಾಗಿ ಕೊಂದ ದೇಶವು ೧೯೯೩ರಲ್ಲಿ ಅವರನ್ನು ಸೈದ್ಧಾಂತಿಕವಾಗಿ ಕೊಂದುಹಾಕಿತು, ಅವರ ಮೌಲ್ಯಗಳನ್ನು ಸಮುದ್ರಕ್ಕೆಸೆದು ಕೈಕಟ್ಟಿ ಕುಳಿತಿತು. ಈ ಮಾತು ಅಪ್ರಿಯವಾದ್ದು, ಆದರೆ ಸತ್ಯವಾದ್ದು. ಹೀಗಿದೆ ನಮ್ಮ ದೇಶದ ಸೈದ್ಧಾಂತಿಕ ಮತಾಂತರ!

ಅನೇಕ ವರ್ಷಗಳಿಂದ ನಮ್ಮ ಇಡೀ ರಾಷ್ಟ್ರವು

---

## ಹೆಣ್ಣು

ಹೆಣ್ಣಾಗಿ
ಏಕೆ ಹುಟ್ಟಿದೆನೊ
ಋತುಮತಿಯಾದ
ದಿವಸ
'ಹಾಡಿ'ಯಿಂದ
ಹರದಾರಿ ದೂರ
ನನ್ನ ವಾಸ

## ತಾಯಿ

ಸ್ವಂತ ತಾಯಿ
ಬಾಡಿಗೆ ತಾಯಿ
ಆದ ನನ್ನ ಕಷ್ಟ
ಇನ್ನೂ ಮುಗಿದಿಲ್ಲ
ಭೂತಾಯಿ!

**ಪುಂಡಲೀಕ ಪಾಟೀಲ**
'ಶಾಂತಲಾ' ಪ್ಲಾ. ನಂ. ೨೧೮, ಬಾಕ್ಸಯಿಟ್ ರೋಡ
ವಿದ್ಯಾನಗರ, ಅಂಚೆ : ಹಿಂಡಲಗಿ
ಬೆಳಗಾವಿ - ೫೯೧೦೧೮

---



ಹಗರಣಗಳ ಆಗರವಾಗಿಹೋಗಿದೆ, ಪ್ರಪಂಚದ ಮುಂದೆ ತಲೆ ತಗ್ಗಿಸುವಂತಾಗಿದೆ. ಅವುಗಳ ಪಟ್ಟಿ ಅನವಶ್ಯಕ, ಏಕೆಂದರೆ ಜನಸಾಮಾನ್ಯರಿಗೂ ತೀರಾ ಪರಿಚಿತವಾಗಿರುವ ಸಂಗತಿ ಅದು. ಆ ಪಿಡುಗುಗಳೆಲ್ಲಾ ಜಾಗತೀಕರಣದಡಿಯ ಕ್ರೂರ ಬಂಡವಾಳಶಾಹಿಯ ಕೊಡುಗೆ. ಅದನ್ನು ಕಂಡಿದ್ದರೆ ಗಾಂಧೀಜಿ ಎಷ್ಟು ಮರುಗಬಹುದಿತ್ತೆಂದು ಊಹಿಸಿಕೊಳ್ಳ ಬಹುದು. ನಮ್ಮ ರಾಜ್ಯವು ಭೂಸುಧಾರಣೆಯನ್ನು ಅಷ್ಟೋ ಇಷ್ಟೋ ಜಾರಿಗೆ ತಂದಿರುವ ರಾಜ್ಯ, ಆದರೆ ಇಂದು ಬಂಡವಾಳ ಹೂಡಿಕೆ ಸಮಾವೇಶಗಳಿಗೆ ಪ್ರಸಿದ್ಧವಾಗುತ್ತಿರುವ ರಾಜ್ಯ. ಅಂತಹ ಪ್ರತಿಯೊಂದು ಸಮಾವೇಶವೂ ಸಾವಿರಾರು ಎಕರೆ ಭೂಮಿಯನ್ನು ಉಳುವವರಿಂದ ಕಸಿದುಕೊಳ್ಳುತ್ತದೆ, ಅವರನ್ನು ನಿರ್ಗತಿಕರನ್ನಾಗಿಸುತ್ತದೆ. ಸ್ವದೇಶದಲ್ಲೇ ನಿರ್ವಸಿತರಾಗಿಬಿಡುವ ಜನ ಇವರು! ಹಿಂದಿನ ಭೂಸುಧಾರಣೆಯ ಕಾನೂನನ್ನು ಮಾರ್ಪಡಿಸಲು ನಮ್ಮ ರಾಜ್ಯದ ಶಾಸನಸಭೆ ಕಾದು ಕುಳಿತಿದೆ. ಆ ಮಾರ್ಪಾಟಿನ ಪ್ರಕಾರ ರಾಜ್ಯದಲ್ಲಿ ಭೂಮಿ ಕೊಳ್ಳುವ ಕಂಪನಿಗಳಿಗೆ ಸುಗ್ಗಿ. ಈವರೆಗೆ ಕೈಗಾರಿಕೆಗಳಿಗೆ, ರಸ್ತೆಗಳಿಗೆ, ವಸತಿ ಬಡಾವಣೆಗಳಿಗೆ, ಭೂಸ್ವಾಧೀನ ಕ್ರಮಗಳಿದ್ದವು; ಇನ್ನು ಮುಂದೆ ತರಹೆವಾರಿ ಕಂಪನಿಗಳು ಭೂಮಿಯನ್ನು ಕೊಳ್ಳುವ ಅವಕಾಶವಿರುತ್ತದೆ. ೧೯೪೨ರ ಆಗಸ್ಟ್‌ನಲ್ಲಿ ಗಾಂಧೀಜಿ 'ಕ್ವಿಟ್ ಇಂಡಿಯ' ಚಳುವಳಿಗೆ ಕರೆಕೊಟ್ಟರು, ಈಗದು 'ಇಂಡಿಯಾಕ್ಕೆ ಮುಕ್ತ ಸ್ವಾಗತ' ಎಂಬ ಘೋಷಣೆಯಾಗಿ ಪರಿವರ್ತನಗೊಂಡಿದೆ. ಗುತ್ತಿಗೆ ಕೃಷಿಯ ಹೆಸರಲ್ಲಿ ರೈತರು ದೊಡ್ಡ ಬಂಡವಳಿಗರ ಕಂಪನಿಗಳ ಕತ್ತರಿಗೆ ಸಿಲುಕಿಯಾಗಿದೆ, ಇನ್ನು ಮುಂದೆ ಅವರನ್ನು ಕತ್ತರಿಸಿ ಎಸೆಯುವುದಷ್ಟೇ ಉಳಿದಿರುವುದು. ''ಭಾರತವು ಹಳ್ಳಿಗಳಲ್ಲಿದೆ'' ಎಂದ ಗಾಂಧೀಜಿ ಇಂದು ಕಂಪನಿ ಹಿಡಿತದಲ್ಲಿರುವ ಹಳ್ಳಿಗಳನ್ನು ನೋಡುವ ದುರ್ಗತಿಗೆ ಇಳಿದಿದ್ದಾರೆ. ಇದನ್ನೇ ಕುಹಕದಿಂದ 'ಅಭಿವೃದ್ಧಿ' ಎಂದು ಕರೆಯಲಾಗುತ್ತಿದೆ. ಬಹುರಾಷ್ಟ್ರೀಯ ಕಂಪನಿಗಳು ಕೊಬ್ಬಿ ಬೆಳೆಯುವಂತಹ ಪರಿಸ್ಥಿತಿಯ ನಿರ್ಮಾಣಕ್ಕೆ ಸಬೂಬು ಇದು : ''ನಮ್ಮ ರೈತರ ಹಿಡುವಳಿಗಳು ಸಣ್ಣ ಪ್ರಮಾಣದವು, ಅಲ್ಲಿ ತಂತ್ರಜ್ಞಾನ ಬಳಸಿ ಉತ್ಪಾದನೆ ಹೆಚ್ಚಿಸಲು ಬರುವುದಿಲ್ಲ, ಆದ್ದರಿಂದ ಕೃಷಿ ಹಾಗೂ ಕೃಷಿಯೇತರ ಕ್ಷೇತ್ರಗಳಿಗೆ ಬಹುರಾಷ್ಟ್ರೀಯ ಕಂಪನಿಗಳನ್ನು ಬರಮಾಡಿಕೊಳ್ಳುವುದು ಲಾಭದಾಯಕ.'' ಯಾರಿಗೆ ಲಾಭದಾಯಕ? ರೈತರಿಗಂತೂ ಅಲ್ಲ. ಕಂಪನಿಗಳಿಗೆ ಹೌದು, ಏಕೆಂದರೆ ಸಾವಿರಾರು ಎಕರೆ ಭೂಮಿಯು ಅವುಗಳ ಅಧೀನಕ್ಕೆ ಬರುತ್ತದೆ. ಕೃಷಿ ಕ್ಷೇತ್ರದಲ್ಲಿ ಬಂಡವಾಳಶಾಹಿಯ ಪ್ರವೇಶ ಹೊಸದಲ್ಲ, ಆದರೆ ಈ ರೀತಿಯ ವ್ಯಾಪಕ ಮತ್ತು ಮಾರಕ ಪ್ರವೇಶ ಹೊಸದು. ಹೈಬ್ರಿಡ್ ತಳಿಗಳಿಂದ ಕಂಗಾಲಾಗಿರುವ ರೈತನನ್ನು ಈಗ ಹೊಸಕಿ ಹಾಕಲಾಗುತ್ತದೆ. ನಮ್ಮ ದೇಶದ ಬಂಡವಳಿಗರು ಮತ್ತು ಮಾರುಕಟ್ಟೆಯ ಪ್ರಾಬಲ್ಯವನ್ನು ಎದುರಿಸಲಾಗದೆ ತತ್ತರಿಸಿಹೋದ ರೈತರು ವಿದೇಶಿ ಬಂಡವಾಳದ ಆರ್ಭಟದ ಮುಂದೆ ತರಗೆಲೆಗಳಾಗಿಹೋಗುವುದು ನಿಸ್ಸಂದೇಹ. ೧೯೫೦ರಿಂದ ೧೯೯೦ರವರೆಗೆ ನಮ್ಮ ಕೃಷಿ ಕ್ಷೇತ್ರವು ವಿಶ್ವ ವ್ಯಾಪಾರದ ಏರುಪೇರುಗಳ ಹೊಡೆತದಿಂದ ರಕ್ಷಣೆ ಪಡೆದಿತ್ತು, ಏಕೆಂದರೆ ಮಿಗುತಾಯ ಉತ್ಪನ್ನವನ್ನು ಮಾತ್ರ ಅಂತರರಾಷ್ಟ್ರೀಯ ಮಾರುಕಟ್ಟೆಗೆ ಹಾಕುತ್ತಿದ್ದೆವು. ಆದರೆ 'ಮುಕ್ತ ವ್ಯಾಪಾರ' ಎಂಬುದರ ಹೆಸರಲ್ಲಿ ಈಗ ಭೂಮಿಯನ್ನು ಪರಭಾರೆ ಮಾಡಲಾಗುತ್ತಿದೆ, ಯೂರೋಪ್-ಅಮೆರಿಕಾ-ಜಪಾನ್ ಮುಂತಾದ ದೇಶಗಳ ಬಂಡವಾಳ ನುಗ್ಗಿಬಂದು ಅದನ್ನೆಲ್ಲಾ ಕಬಳಿಸುತ್ತಿದೆ.

ಈ ವಿಚಾರದಲ್ಲಿ ಖ್ಯಾತ ಚಿಂತಕ ನೋಮ್ ಚಾಮ್‌ಸ್ಕಿಯ ಮಾತೊಂದನ್ನು ನೆನಪಿಸಿಕೊಳ್ಳುವುದು ಉತ್ತಮ. 'ಹೊಸತು' ಪತ್ರಿಕೆಯ ಜನವರಿ ೨೦೧೦ರ ಸಂಚಿಕೆಗೆ ನೀಡಿದ್ದ ಸಂದರ್ಶನದಲ್ಲಿ ಅವರು ಭಾಗಶಃ ಹೀಗೆಂದಿದ್ದರು: ''ನಮ್ಮ ವ್ಯಕ್ತಿಸ್ವಾತಂತ್ರ್ಯಕ್ಕೆ ಇರುವ ತೀರಾ ಅಪಾಯಕಾರಿ ಆಪತ್ತೆಂದರೆ ಬೃಹತ್ ವಾಣಿಜ್ಯ ಘಟಕಗಳಿಂದ. ಅವುಗಳ ಪ್ರಚಾರ ಶಕ್ತಿಯು ಜನತೆಯನ್ನು ಆರ್ಥಿಕವಾಗಿ ಶೋಷಣೆಗೆ ಒಳಗಾಗಿಸಿ, ರಾಜಕೀಯವಾಗಿ ಮತ್ತು ಸಾಮಾಜಿಕವಾಗಿ ಬಂಧನಕ್ಕೊಳಗಾಗಿಸುತ್ತದೆ. ಪ್ರಭುತ್ವಕ್ಕೆ ಕೊನೆಯ ಪಕ್ಷ ಮತದಾರರ ಎಗ್ಗಾದರೂ ಇದೆ, ಅದನ್ನು ನಿಯಂತ್ರಿಸುವ ವಾಣಿಜ್ಯ ಘಟಕಗಳಿಗೆ ಈ ಭಯ ಇಲ್ಲ. ಪ್ರಮುಖ ಬಹುರಾಷ್ಟ್ರೀಯ ಕಂಪನಿಗಳ ಸಂಪನ್ಮೂಲ ಪ್ರಭುತ್ವದ ಸಂಪನ್ಮೂಲಗಳಿಗಿಂತ ಬಹುಪಾಲು ಹೆಚ್ಚಿನದು. ಅವು ತಮ್ಮ ಲಾಭವನ್ನು ಹೆಚ್ಚಿಸಿಕೊಳ್ಳಲು ಏನು ಬೇಕಾದರೂ ಮಾಡುತ್ತವೆ. ಪ್ರಭುತ್ವದ ಅಧಿಕಾರವನ್ನು ಬುಡಮೇಲು ಸಹ ಮಾಡಬಲ್ಲವು. ಅಮೆರಿಕಾದ ಕೃಷಿ ಇಲಾಖೆಯು ಮಿಸಿಸಿಪಿಯ ಕಂಪನಿಯೊಂದಕ್ಕೆ ಬೀಜವನ್ನು ಬಂಜೆಯಾಗಿಸುವ ಕ್ರಮಕ್ಕೆ ಪೇಟೆಂಟ್ ನೀಡಿದೆ, ಗೊತ್ತೆ? ಅಂಥ ಬೀಜದಿಂದ ಒಂದು ಫಸಲು ಬೆಳೆದರೆ ಮರುಫಸಲಿಗೆ ಬೀಜ ದೊರೆಯುವುದಿಲ್ಲ. ಆಗ ರೈತರು ಪ್ರತಿ ವರುಷವೂ ಇದೇ ಕಂಪನಿಯಿಂದ ಬೀಜ ಕೊಳ್ಳುತ್ತಿರಬೇಕು. ಜನತೆಯನ್ನು ಬಡತನಕ್ಕೆ ನೂಕುತ್ತಾ ಕಂಪನಿಗೆ ಲಾಭ ನೀಡುವ ಖಾಸಗಿ ಉದ್ಯಮಗಳ ಹುನ್ನಾರಕ್ಕೆ ಇದೊಂದು ಉದಾಹರಣೆ.''

ನಮ್ಮ ರಾಜ್ಯದಲ್ಲಿಯೇ ಹತ್ತಿ ಬೆಳೆಗೆ ಕುಲಾಂತರಿ ತಳಿಯನ್ನು ಮೋನ್ಸಾಂಟೋ ಎಂಬ ಕಂಪನಿ ಕೊಡುತ್ತಿದೆ. ಮೊದಲಿಗೆ ಬೆಳೆ ಚೆನ್ನಾಗಿ ಬಂದುದರಿಂದ ರೈತರಿಗೆ ಸಂತಸ ಉಂಟಾಯಿತು. ಕ್ರಮೇಣ ಅದು ಕುತ್ತಿಗೆ ಕುಯ್ಯುವ ತಳಿಯೆಂದು ಅವರಿಗೆ ಮುಂದೆ ಅನುಭವಕ್ಕೆ ಬರುತ್ತದೆ. ಇನ್ನೊಂದು ವಿಶೇಷವೆಂದರೆ ಕಾರ್ಪೊರೇಟ್ ಸಂಸ್ಥೆಗಳು ಕೃಷಿ ಕ್ಷೇತ್ರಕ್ಕೆ ಲಗ್ಗೆಯಿಟ್ಟಾಗ ಅವುಗಳ ಆಸಕ್ತಿ ಆಹಾರಧಾನ್ಯಗಳನ್ನು ಉತ್ಪಾದಿಸುವುದಲ್ಲ; ಅವಕ್ಕೆ ಅಪಾರ ಲಾಭ ತರುವಂತಹ ಬೇರೆ ಬೆಳೆಗಳು ಬೇಕು. ಉದ್ಯಮದ ಕ್ಷೇತ್ರದಲ್ಲಿ ಕಾರ್ಪೊರೇಟ್‌ಗಳ ಗೂಳಿತನವನ್ನು ತಿಳಿಯಲು ಒಂದು ನಿದರ್ಶನ ಬೇಕೆಂದರೆ ರಿಲಯನ್ಸ್ ಕಂಪನಿಯೊಂದು ಅನಿಲ ಉತ್ಪಾದನೆಯ ವ್ಯವಹಾರದಲ್ಲಿ ಎಸಗಿರುವ ಮಹಾಮೋಸವನ್ನು ಗಮನಿಸಬಹುದು. ಕೃಷ್ಣ-ಗೋದಾವರಿ ಬಯಲಿನಲ್ಲಿ ಅನಿಲ ಹೊರತೆಗೆಯಲು ಈ ಕಂಪನಿಗೆ ಕೇಂದ್ರ ಸರ್ಕಾರವು ಕಾಂಟ್ರಾಕ್ಟ್ ಕೊಟ್ಟಿದೆ. ಒಪ್ಪಂದದ ಪ್ರಕಾರ ಉತ್ಪಾದಿತ ಅನಿಲಕ್ಕೆ ಬೆಲೆ ನಿರ್ಧರಿಸಲು ಒಂದು ಸೂತ್ರವಿದೆ. ಕಂಪನಿ ತೊಡಗಿಸುವ ಬಂಡವಾಳವನ್ನು ಪರಿಗಣಿಸಿ ಅನಿಲದ ಬೆಲೆ ನಿರ್ಧಾರವಾಗಬೇಕು. ಆ ಮೊತ್ತವನ್ನು ಒಂದಕ್ಕೆ ಮೂರರಂತೆ ಕಂಪನಿ ಉಲ್ಲೇಖಿಸಿತು. ಇದನ್ನು ಗುಮಾನಿಯಿಂದ ನೋಡಿದ ಸರ್ಕಾರ ಅದನ್ನು ಪ್ರಶ್ನಿಸಿ, ಅನಿಲದ ಬೆಲೆಯನ್ನು ಕಂಪನಿ ನಿರ್ಧರಿಸಿದ್ದಕ್ಕಿಂತ ಕಡಿಮೆ ಮಟ್ಟಕ್ಕಿಳಿಸಿತು. ಅದಾದ ಎರಡೇ ತಿಂಗಳ ನಂತರ ಕಂಪನಿಯು ಬಯಲಿನ ಕೆಲವು ಪ್ರದೇಶಗಳಲ್ಲಿ ಅನಿಲದ ಮಟ್ಟ ಕುಸಿದು ಹೋಯಿತೆಂಬ ಸುಳ್ಳು ಹೇಳಿ ಅನಿಲದ ಉತ್ಪಾದನೆಯನ್ನು ಸ್ಥಗಿತಗೊಳಿಸಿತು. ಅಲ್ಲದೆ ಅನಿಲವನ್ನು ಭಾರತದ ಯಾವ ಉದ್ದಿಮೆಗಳಿಗೆ ಸರಬರಾಜು ಮಾಡಬೇಕಾಗಿತ್ತೋ ಅವಕ್ಕೆ ಮಾಡಲಿಲ್ಲ. ಬೆಲೆಯ ಹೆಚ್ಚಳ ಮಾಡಬೇಕೆಂದು ಕಂಪನಿಯು ಪ್ರಧಾನಿಯ ಕಚೇರಿಯ ತನಕ ಒತ್ತಡವನ್ನು ಹೇರಲಾರಂಭಿಸಿತು. ಪ್ರಧಾನಿಯ ಕಚೇರಿಯು ಒತ್ತಡಕ್ಕೆ ಮಣಿದಿದೆ. ಈ ಬಾಬ್ತು ಮುಖೇಶ್ ಅಂಬಾನಿಯ ಕಂಪನಿಗೆ ಅಧಿಕವಾಗಿ ಕೂಡಿಬರುವ ಲಾಭವು ೪೫,೦೦೦ ಕೋಟಿ ರೂಪಾಯಿಗಳು. ಖಾಸಗಿ ಬಂಡವಳಿಗರ ಅನೀತಿ, ದುರ್ಲಾಭ, ಒತ್ತಡ ಹೇರುವ ತಂತ್ರ, ಎಲ್ಲವೂ ಇದರಲ್ಲಿ ಸ್ಪಷ್ಟವಾಗುತ್ತದೆ. ಇಂತಹ ಸಾವಿರ ಬೇರೆ ನಿದರ್ಶನಗಳು ನಮ್ಮ ಮುಂದಿವೆ.

ಗಾಂಧೀಜಿ ಬಯಸಿದ್ದು ಬಂಡವಳಿಗರು ಧರ್ಮದರ್ಶಿಗಳಾಗಿರಬೇಕೆಂದು; ಆದರೆ ಅವರು ವ್ಯಾಘ್ರರಂತಾಗಿ ಎಲ್ಲವನ್ನೂ ಕಬಳಿಸುತ್ತಿದ್ದಾರೆ. ಅವರ ಆದಾಯವನ್ನು ಪಟ್ಟಿ ಮಾಡಿ ದೇಶದಲ್ಲಿ ಬಡತನ ಇಲ್ಲವಾಗಿಹೋಗಿದೆಯೆಂದು ಹೇಳುವ ತಜ್ಞರು ನಮ್ಮಲ್ಲಿದ್ದಾರೆ. ಸ್ವಾವಲಂಬನೆ ಗಾಂಧೀಜಿ ಆಶಯವಾಗಿತ್ತು. ಹಾಗೆಂದರೆ ವಿದೇಶಗಳ ಸಂಪರ್ಕ ಬೇಡವೆಂದು ಅವರ ಇಂಗಿತವಲ್ಲ. ಅವರೇ ಹೇಳಿದ್ದಂತೆ ನಮ್ಮ ಮನೆಯ ಕಿಟಕಿಗಳನ್ನು ತೆರೆದಿಟ್ಟು ಗಾಳಿಯನ್ನು ಒಳಗೆ ಬರಮಾಡಿಕೊಳ್ಳಬೇಕು, ಆದರೆ ಬಾಗಿಲು, ಗೋಡೆಗಳನ್ನೆಲ್ಲಾ ಕಿತ್ತೆಸೆದು ಮನೆಯನ್ನು ಬಯಲು ಮಾಡಿಬಿಡಬಾರದು. ಭಾರತದಲ್ಲಿ ಬಂಡವಾಳಶಾಹಿಯು ದೇಶವನ್ನು ಕರುಕಲಾಗಿಸುತ್ತಿದೆ. ಗಾಂಧೀಜಿ ಚಿಂತನೆ ಮತ್ತು ಕ್ರಿಯೆ ಮಾಯವಾಗುವ ಮುನ್ನ ನಾವು ಎಚ್ಚೆತ್ತುಕೊಳ್ಳಬೇಕು. ಅದೇ ಗಾಂಧೀಜಿಗೆ ನಾವು ಸಲ್ಲಿಸಬೇಕಾದ ನಮನ.

**ಡಾ|| ಜಿ. ರಾಮಕೃಷ್ಣ**
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್, ೨೨/೧, ೪ನೇ ಕ್ರಾಸ್
ಕಾವೇರಿನಗರ, ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫

ವಿ. ಚಂದ್ರಶೇಖರ ನಂಗಲಿ

# ಡಿಜಿಟಲ್ ಯುಗದಲ್ಲಿ ಕನ್ನಡ ಜಗತ್ತು : ಹೊಸ ಸವಾಲುಗಳು



**...ನಿ**ಮ್ಮ ನುಡಿ ನಿಮ್ಮ ಗಂಡಸುತನಕೆ ಹಿರಿಸಾಕ್ಷಿ
ಗೆಲವಿದ್ದರದಕೆ ನಿಮಗಿಹುದು ಶಕ್ತಿ,
ನುಡಿ ಮಡಿದರೆಲ್ಲರೂ ಮೂಕ ಜಂತುಗಳಂತೆ :
ಬಾಲವಲ್ಲಾಡಿಪುದೆ ಪರಮಭಕ್ತಿ!
ಕುವೆಂಪು - ಸಾಯುತಿದೆ ನಿಮ್ಮ ನುಡಿ, ಓ ಕನ್ನಡದ
ಕಂದರಿರ !

ಕುವೆಂಪು ಅವರ ಈ ನುಡಿಗಳು ಹಿಂದೆಂದಿಗಿಂತಲೂ ಇಂದು ಹೆಚ್ಚು ಪ್ರಸ್ತುತವಾಗಿವೆ. ನುಡಿಯ ಗಂಡಸುತನ - ನುಡಿಯ ಪೌರುಷ - ನುಡಿಶಕ್ತಿಯನ್ನು ಕುರಿತ ಕುವೆಂಪು ಚಿಂತನೆಯನ್ನು ಭಾಷಾವಿಜ್ಞಾನದ ವ್ಯಾಪ್ತಿಗೆ ಬರುವ 'ಭಾಷಿಕ ತಂತ್ರಜ್ಞಾನ'ದಲ್ಲಿ (ಲಿಂಗ್ವಿಸ್ಟಿಕ್ ಟೆಕ್ನಾಲಜಿ) 'ಭಾಷಿಕ ಸಬಲೀಕರಣ' (ಲಿಂಗ್ವಿಸ್ಟಿಕ್ ಎಂಪವರ್‌ಮೆಂಟ್) ಎಂದು ಕರೆಯುತ್ತಾರೆ. ನಮ್ಮ ಸಾಹಿತ್ಯದಲ್ಲಿ 'ದೇವಭಾಷೆ' ಮತ್ತು 'ದೇಶಭಾಷೆ'ಗಳೆಂಬ ಪರಿಕಲ್ಪನೆಗಳಿವೆ. ಸಂಸ್ಕೃತವು ದೇವಭಾಷೆಯೆಂಬ ಗೌರವಕ್ಕೆ ಪಾತ್ರವಾಗಿದ್ದರೆ, ಕನ್ನಡ-ತೆಲುಗು-ತಮಿಳು ಮುಂತಾದವು ದೇಶಭಾಷೆಗಳೆಂದು ಹೆಸರಾಗಿವೆ. ಶ್ರೀಕೃಷ್ಣದೇವರಾಯರು 'ಆಮುಕ್ತಮೌಲ್ಯದ' ಕೃತಿಯಲ್ಲಿ ''ದೇಶಭಾಷಮ್ಮುಲಂದು ತೆಲುಗು ಲೆಸ್ಸ'' – ಎಂದು ಹೇಳಿರುವುದು ಕನ್ನಡ ಸಾಹಿತ್ಯ ಚಿಂತನೆಯಲ್ಲೂ ಪ್ರಸ್ತಾಪವಾಗಿದೆ. ದೇವ + ಭಾಷೆ ಎಂಬ ಸಂಯೋಜನೆಗಿಂತಲೂ ದೇಶ + ಭಾಷೆ ಎಂಬ ಸಂಯೋಜನೆ ಮಿಗಿಲಾಗಿದೆ. ನಾಡು ಮತ್ತು ನುಡಿಗಳ ಏಕೀಕರಣವನ್ನು ಬಿಂಬಿಸುವ 'ದೇಶಭಾಷೆ'ಯು ಭಾಷೆಯ ಜೀವಂತಿಕೆ ಮತ್ತು ಚೈತನ್ಯಶಕ್ತಿಯ ಪ್ರತೀಕವೂ ಆಗಿದೆ. ಭಾಷಿಕ ಸಬಲೀಕರಣದ ನಿರಂತರ ಪ್ರಕ್ರಿಯೆಯನ್ನು ಗಮನದಲ್ಲಿಟ್ಟುಕೊಂಡರೆ, ಭಾಷೆಗೆ ದೇಶವೊಂದರ ಜನಪದರ ನಾಲಗೆಯೇ ಆದಿಶಕ್ತಿಯೆಂದು ಹೇಳಬಹುದು. 'ಕವಿರಾಜಮಾರ್ಗ'ದಲ್ಲಿ ಕನ್ನಡಕ್ಕೆ ನಾಡವರೇ ಓಜರು (= ನಾಡೋಜ) ಎಂದು ಹೇಳಿರುವುದನ್ನಿಲ್ಲಿ ಸ್ಮರಿಸಿಕೊಳ್ಳಬಹುದು. ಭಾಷೆಯನ್ನು ಹರಿವ ನದಿಯಂತೆ ನಿತ್ಯನಿರಂತರವಾಗಿ ಕಾಯ್ದುಕೊಂಡು ಬರುವ ದೇಶಬಾಂಧವರು ಅಥವಾ ಜನಪದರನ್ನು ಈ ದೃಷ್ಟಿಯಿಂದಲೇ ಆದಿಶಕ್ತಿಯೆಂದು ಕರೆಯಲಾಗಿದೆ. ಇಂಥ ಆದಿಶಕ್ತಿಗೆ ಸಾಹಿತ್ಯ - ಸಾಂಸ್ಕೃತಿಕ - ರಾಜಕೀಯ - ತಾಂತ್ರಿಕ ಸ್ಥಾನ-ಮಾನಗಳು ಆಯಾ ಕಾಲಕ್ಕೆ ತಕ್ಕಂತೆ ಸೇರ್ಪಡೆಗೊಳ್ಳುತ್ತಿರಲೇಬೇಕು. ಇಲ್ಲದಿದ್ದರೆ ಕುವೆಂಪು ಹೇಳಿದಂತೆ ''ನಿಮ್ಮ ನುಡಿ ಸಾಯುತಿದೆ...'' ಎಂಬಂತಾಗುತ್ತದೆ.

ದೇಶಭಾಷೆಗಳ ಆದಿಶಕ್ತಿಗೆ ಪೂರಕವಾಗಿ, ಸಾಹಿತ್ಯ - ಸಾಂಸ್ಕೃತಿಕ - ರಾಜಕೀಯ - ತಾಂತ್ರಿಕ ಸ್ಥಾನ-ಮಾನಗಳು ದೊರಕದಿದ್ದರೆ, ಆ ದೇಶಭಾಷೆಗಳು ಹೇಗೆ ಅವಸಾನಗೊಳ್ಳುತ್ತವೆ ಎಂಬುದನ್ನು ಮನವರಿಕೆಮಾಡಿಕೊಳ್ಳಬೇಕಾದರೆ ವಸಾಹತುಶಾಹಿಯ ದಾಳಿ ಮತ್ತು ಆಳ್ವಿಕೆಯ ರೀತಿನೀತಿಗಳನ್ನು ಬಿಂಬಜ್ಞಾನದಿಂದ ಗ್ರಹಿಸಬೇಕಾಗುತ್ತದೆ. ಇಪ್ಪತ್ತನೇ ಶತಮಾನದ ವಸಾಹತುಶಾಹಿಯ ದಾಳಿ ಮತ್ತು ಆಳ್ವಿಕೆಯನ್ನು ಏಕರೂಪಾತ್ಮಕವಾಗಿ ನೋಡುತ್ತಾ 'ರವಿ ಮುಳುಗದ ಸಾಮ್ರಾಜ್ಯ' - ಇತ್ಯಾದಿ ಪ್ರಶಸ್ತಿವಾಚನ ಮಾಡುವುದು ಸರಿಯಲ್ಲ! ಈ ವಸಾಹತುಶಾಹಿ ಸಾಮ್ರಾಜ್ಯದ ಒಳಗಣ ಬಿರುಕುಗಳನ್ನು ಅಮೆರಿಕಾ, ಆಫ್ರಿಕಾ ಮತ್ತು ಇಂಡಿಯಾ ದೇಶಗಳ ಬಿಂಬಜ್ಞಾನದಿಂದ ತಿಳಿಯೋಣ :

**ಅಮೆರಿಕಾ :** ಭೌಗೋಳಿಕ ಸಂಶೋಧನೆಗಳಿಗೂ ಮುಂಚೆ ಭೂಗೋಳದ ಕಲ್ಪನೆ ಪೂರ್ವಾರ್ಧಗೋಳಕ್ಕೆ ಪರಿಮಿತವಾಗಿತ್ತು. ಆಗ ಪಶ್ಚಿಮಾರ್ಧ ಗೋಳದ ಕಲ್ಪನೆಯೇ ಇರಲಿಲ್ಲ. ಇಂಡಿಯಾದೇಶಕ್ಕೆ ಸಮುದ್ರಮಾರ್ಗ ಕಂಡುಹಿಡಿಯುವ ಸಾಹಸದಲ್ಲಿ 'ವೆಸ್ಟ್ ಇಂಡೀಸ್' ದ್ವೀಪಗಳು ಪತ್ತೆಯಾದವು. 'ಅಮೆರಿಕಾ' ಎಂಬುದು ಆ ನೆಲದ ನಿಜನಾಮಧೇಯವಲ್ಲ! ಅಮೆರಿಕಾ ದೇಶವನ್ನು ಕಂಡುಹಿಡಿದ ನಾವಿಕನ ಚಿರಸ್ಮರಣೆಗಾಗಿ, ಅವನ ಹೆಸರನ್ನೇ (ಅಮೆರಿಗೊ ವೆಸ್ಪುಸಿ) ಆ ದೇಶಕ್ಕೆ ಇಡಲಾಗಿದೆ. ಅಮೆರಿಕಾ ದೇಶದ ಮೂಲನಿವಾಸಿಗಳನ್ನು ಯೂರೋಪಿನ ಆಕ್ರಮಣಕಾರರು ಮಾರಣಹೋಮ ಮಾಡಿದ್ದು ಈಗ ಇತಿಹಾಸ. ಬಿಲ್ಲುಬಾಣಗಳನ್ನು ಹೊಂದಿದ್ದ ಅಮೆರಿಕಾ ದೇಶದ ಮೂಲನಿವಾಸಿಗಳಿಗೂ ಬಂದೂಕು - ಫಿರಂಗಿಗಳನ್ನು ಹೊಂದಿದ್ದ ಯೂರೋಪಿನ ಆಕ್ರಮಣಕಾರರಿಗೂ ನಡೆದ ಘೋರ ಸಂಗ್ರಾಮವನ್ನು 'ಹೀನಬಲ' ಮತ್ತು 'ಅಧಿಕಬಲ'ದ (ಪಂಪನ ನುಡಿಮುತ್ತು) ಯುದ್ಧವೆಂದೇ ಕರೆಯಬೇಕಾಗಿದೆ. ಅಮೆರಿಕಾ ದೇಶದ ಮೂಲನಿವಾಸಿಗಳೊಂದಿಗೆ ಮೂಲನಿವಾಸಿ ಭಾಷೆಗಳು ಕೂಡ ನಾಶವಾದುವು. ಅಮೆರಿಕಾ ಅಧ್ಯಕ್ಷನಿಗೆ ರೆಡ್ ಇಂಡಿಯನ್ ನಾಯಕನಾದ ಸಿಯಾಟಲ್ ಬರೆದ ಪತ್ರವನ್ನು ಓದಿದರೆ ಆ ಮೂಲನಿವಾಸಿಗಳ ಅತ್ಯುನ್ನತ ಸಾಂಸ್ಕೃತಿಕ ದೃಷ್ಟಿ-ಧೋರಣೆಗಳು ಯಾರಿಗಾದರೂ ಅರಿವಾಗುತ್ತವೆ. ಆದರೆ ಇಂಥ ಹಿರಿಮೆಯ ನಾಗರಿಕತೆ ಮತ್ತು ಅತ್ಯುನ್ನತ ಸಾಂಸ್ಕೃತಿಕ ಮೌಲ್ಯಗಳನ್ನು ಹೊಂದಿದ್ದ ಅಮೆರಿಕಾ ದೇಶದ ಮೂಲನಿವಾಸಿಗಳ ಸಾಮೂಹಿಕ ಹತ್ಯೆ ಮನುಕುಲದ ಮಹಾನ್ ಪಾತಕಗಳಲ್ಲಿ ಒಂದಾಗಿ ಉಳಿದುಹೋಗಿದೆ. ಈ ಮೂಲನಿವಾಸಿ ಭಾಷೆಗಳು ಮೌಖಿಕ ಪರಂಪರೆಯಲ್ಲೇ ಅಸ್ತಿತ್ವದಲ್ಲಿದ್ದು, ಅವರೊಂದಿಗೆ ಅವಸಾನಗೊಂಡಿದ್ದನ್ನು ಮರೆಯುವಂತಿಲ್ಲ. ನಮ್ಮ ದೇಶದಲ್ಲಿರುವ 'ಮೃಗಾಲಯ'ಗಳಂತೆ ಅಮೆರಿಕಾದಲ್ಲೀಗ ಮೂಲನಿವಾಸಿಗಳ ಪ್ರದರ್ಶನಾಲಯಗಳಿವೆ. 'ಅಬೊರಿ ಜಿನಲ್ಸ್' – ಎಂಬ ಹೆಸರಿನಲ್ಲಿ ನಾಗರಿಕರು ಮತ್ತು ಪ್ರವಾಸಿಗಳ ಕುತೂಹಲ ತಣಿಸಲು ಇಂಥ ಪ್ರದರ್ಶನಾಲಯಗಳನ್ನು ಸಂರಕ್ಷಣೆ ಮಾಡಲಾಗುತ್ತಿದೆ. ನಾವಿಲ್ಲಿ ಗಮನಿಸಬೇಕಾದ ಸಂಗತಿಯೆಂದರೆ, ಕೇವಲ ಮೌಖಿಕ ಪರಂಪರೆಯಲ್ಲಿದ್ದ ಮೂಲನಿವಾಸಿ ಭಾಷೆಗಳು ವಂಶನಾಶಕ್ಕೆ ಸಂದ ಬಗೆ.

**ಆಫ್ರಿಕಾ :** ಇತಿಹಾಸಕಾರರ ಮಾತುಗಳಲ್ಲಿ ಕಗ್ಗಪ್ಪು ದೇಶವೆಂದು ಹೆಸರಾದ ಆಫ್ರಿಕಾದೇಶದ ಕತೆಯೇ ಬೇರೆ! ಇಲ್ಲಿ ವಸಾಹತುಶಾಹಿಯು ಆಫ್ರಿಕನ್ನರನ್ನು ಸೆರೆಹಿಡಿದು ಗುಲಾಮರನ್ನಾಗಿ ಮಾಡಿ ಜಗತ್ತಿನಾದ್ಯಂತ ಮಾರಾಟ ಮಾಡಿತು. ಉತ್ತರಕನ್ನಡ ಜಿಲ್ಲೆಯ ಯಲ್ಲಾಪುರ ಬಳಿ ಇರುವ ಸಿದ್ದಿಗಳನ್ನು ಮೂಲತಃ ಆಫ್ರಿಕಾದೇಶದಿಂದ

ಕರೆತಂದ ಗುಲಾಮಜನರ ಸಂತಾನವೆಂದೇ ಗುರುತಿಸಲಾಗಿದೆ. ಬಿಳಿದೊರೆಗಳ ಗುಲಾಮರಾದ ಆಫ್ರಿಕನ್ನರು ತಮ್ಮ ಸಹಜ ಭಾಷೆ ಮತ್ತು ಸಹಜಧರ್ಮಗಳನ್ನು ಕಳೆದುಕೊಂಡು ಇಂಗ್ಲಿಷ್ ಭಾಷೆ ಮತ್ತು ಕ್ರೈಸ್ತ ಧರ್ಮಗಳನ್ನು ಒಪ್ಪಿಕೊಂಡು ಬದುಕಿದರು. ತನ್ನ ನಾಲಗೆ ಮತ್ತು ಆತ್ಮಗಳನ್ನು ಕಳೆದುಕೊಂಡು ಪರಾಧೀನರಾದ ಆಫ್ರಿಕನ್ನರ ವ್ಯಥೆಗಳನ್ನೇ ಕತೆ-ಕವಿತೆ-ಕಾದಂಬರಿ-ವಿಮರ್ಶೆಗಳಲ್ಲಿ ಅಭಿವ್ಯಕ್ತಿಗೊಳಿಸಿರುವ ಲೇಖಕರು ಇಲ್ಲಿ ನೆನಪಾಗುತ್ತಿದ್ದಾರೆ. ಆಫ್ರಿಕಾ ದೇಶದ ಮೂಲನಿವಾಸಿಗಳ ಭಾಷೆಗಳು ಕೂಡ ಮೌಖಿಕ ಪರಂಪರೆಯಲ್ಲಿ ಚಾಲ್ತಿಯಲ್ಲಿದ್ದುದನ್ನು ಗಮನಿಸಬೇಕು. ಅಂದರೆ ಕೇವಲ ಮೌಖಿಕ ಪರಂಪರೆಯಲ್ಲಿ ಮಾತ್ರ ಅಸ್ತಿತ್ವದಲ್ಲಿರುವ ಭಾಷೆಗಳು ಯಜಮಾನ ಭಾಷೆಗಳ ಎದುರಿನಲ್ಲಿ ತಲೆಯೆತ್ತಿ ನಿಲ್ಲಲಾಗದೆ ವಂಶನಾಶಕ್ಕೆ ಸಲ್ಲುವುದನ್ನು ಇಲ್ಲಿ ಮನಗಾಣಬಹುದು.

**ಇಂಡಿಯಾ :** ಅಮೆರಿಕಾ ಮತ್ತು ಆಫ್ರಿಕಾ ದೇಶದ ಮೂಲ ನಿವಾಸಿಗಳಿಗೆ ಹೋಲಿಸಿದರೆ, ಇಂಡಿಯಾದೇಶದ ಪರಿಸ್ಥಿತಿಯೇ ಬೇರೆ ಎಂಬುದು ಯಾರಿಗಾದರೂ ಮನದಟ್ಟಾಗುತ್ತದೆ. ಭಾರತದ ಬಹುತೇಕ ಭಾಷೆಗಳಿಗೆ ಮೌಖಿಕ ಪರಂಪರೆಯ ಜೊತೆಗೆ ಸಮೃದ್ಧವಾದ ಗ್ರಾಂಥಿಕ ಪರಂಪರೆ ಕೂಡ ಇದ್ದಿತ್ತು! ದೇಶಭಾಷೆಗಳಿಗೆ ಜನಪದರ ನಾಲಗೆಯೆಂಬ ಆದಿಶಕ್ತಿಯೊಂದಿಗೆ ಆದಿಕವಿಗಳು ಕೂಡ ಇದ್ದರು. ತಮಿಳುಭಾಷೆಗೆ ಸಂಘಂ ಸಾಹಿತ್ಯ, ಕನ್ನಡಕ್ಕೆ ಪಂಪ, ತೆಲುಗಿಗೆ ನನ್ನಯ್ಯ ಭಟ್ಟು ಜೀವಪ್ರಭೆಯನ್ನು (= ಬಯೋ-ಲುಮಿನಿಸೆನ್ಸ್) ತಂದುಕೊಟ್ಟಿದ್ದರು. ಕೇವಲ

## ನಮ್ಮೂರ ಬೆಟ್ಟ



**ನಾ**ನು ಮೊದಲು ನೋಡಿದ್ದೇ ನಿನ್ನ
ಪ್ರೀತಿಯ ಅರ್ಥ ತಿಳಿದದ್ದೇ ನಿನ್ನಿಂದ
ಮೋಹಗೊಂಡಿದ್ದೇ ನಿನ್ನಿಂದ

ನಾನು ನಿನ್ನನ್ನೇ ದಿಟ್ಟಿಸುತ್ತಿದ್ದೆ
ಪುಳಕಿತನಾಗುತ್ತಿದ್ದೆ
ಎಷ್ಟೇ ಜನರ ಮಧ್ಯೆ ಇದ್ದರೂ
ಎಷ್ಟೇ ದೂರ ಇದ್ದರೂ
ನಿನ್ನನ್ನೊಮ್ಮೆ ದಿಟ್ಟಿಸುತ್ತಿದ್ದೆ

ಕಾಲಬಂದಂತೆಲ್ಲಾ ಬದಲಾಗುತ್ತಿದ್ದೆ
ಒಮ್ಮೆ ನಿರಾಭರಣ ಸುಂದರಿ
ಮತ್ತೊಮ್ಮೆ ಹಸಿರುಟ್ಟ ಚೆಲುವೆ
ಮಗದೊಮ್ಮೆ ಮುಸುಕುಧಾರಿಣಿ

ದೂರದಿಂದಲೇ ನಿನ್ನ ಸೌಂದರ್ಯವನ್ನು ಸವಿಯುತ್ತಿದ್ದೆ
ಪುಳಕಿತನಾಗುತ್ತಿದ್ದೆ ಮೈ ಮರೆಯುತ್ತಿದ್ದೆ
ನಿನ್ನ ಬಳಿ ಬರಲು ತವಕಿಸುತ್ತಿದ್ದೆ
ಆ ಕಾಲ ಯಾವಾಗ ಬರುವುದೋ ಎಂದು ಕಾಯುತ್ತಿದ್ದೆ

ಬಂತು, ಬಂದೇ ಬಿಟ್ಟಿತು ಆ ಕಾಲ
ನಿನ್ನ ಬಳಿ ಬಂದೆ ನಿನ್ನನ್ನೊಮ್ಮೆ ಸ್ಪರ್ಶಿಸಿದೆ
ರೋಮಾಂಚನವಾಯಿತು ಕಣ್ಮುಚ್ಚಿ ನಿಂತುಬಿಟ್ಟೆ

ನೀನೂ ನನಗಾಗಿ ಕಾಯುತ್ತಿದ್ದೆಯೋ ಏನೋ
ನಿನ್ನ ಬಾಹುಗಳ ಬಂಧನದಲ್ಲಿ ನನ್ನ ಬಂಧಿಸಿಬಿಟ್ಟೆ
ಉನ್ಮಾದದ ತುತ್ತ ತುದಿಯನ್ನೇರಿದೆ ನಾನು

ಕುಣಿದೆ, ಕುಪ್ಪಳಿಸಿದೆ, ಆಡಿದೆ, ಹಾಡಿದೆ
ಹೊರಳಾಡಿದೆ ನಿನ್ನ ಮೇಲೆ
ನಿನ್ನ ಸರ್ವಾಂಗಗಳ ಸುಖವನ್ನು ಅನುಭವಿಸಿದೆ

ದಣಿವಾಗಲೇ ಇಲ್ಲ ನಿನಗೆ
ಆದರೆ ನಾನು, ಸುಸ್ತಾದೆ ದಣಿದೆ
ದಣಿದು ನಿನ್ನ ತೊಡೆಯ ಮೇಲೆ ಹಾಗೆ ಮಲಗಿಬಿಟ್ಟೆ

ಇಂಥ ಪ್ರೀತಿಯ ಸೌಂದರ್ಯದ ಧಾರೆ ಎರೆದ
ನಿನ್ನನ್ನು ಬಿಟ್ಟು ಹೋಗಿಬಿಟ್ಟೆನಲ್ಲ,
ಆ ನೋವನ್ನು ಯಾರಿಗೆ ಹೇಳಿಕೊಳ್ಳಲಿ
ಕೆಲವರು ನಿನ್ನಂಥವರು, ಆದರೆ ನೀನಲ್ಲ
ಕೆಲವರು ನನ್ನಂಥವರು, ಆದರೆ ನಮ್ಮವರಲ್ಲ

ಎಷ್ಟೋ ವರ್ಷಗಳ ನಂತರ ನಿನ್ನನ್ನು ಕಾಣಲೆಂದು
ಹಿಂದಿನ ನೆನಪನ್ನೆಲ್ಲಾ ಹೊತ್ತು ಓಡೋಡಿ ಬಂದೆ
ನೋಡಿದೆ, ಕಣ್ಣು ಕತ್ತಲಾಯಿತು ಕಣ್ಮುಚ್ಚಿದೆ
ದುಃಖ ಕಟ್ಟೆಯೊಡೆದು ಬಂತು,
ಕುಸಿದು ಬಿದ್ದೆ ನಿನ್ನ ಪಾದದ ಮೇಲೆ.

ಏಕೆ ಹೀಗಾಗಿರುವೆ ? ಹತ್ತು ವರ್ಷಗಳ ಹಿಂದೆ
'ಸೌಂದರ್ಯವೆಂದರೆ ನಾನೇ ಕಣೋ ಹುಡುಗ
ಎಂದವಳು ನೀನೇನಾ ? ಎಂಬ ಅನುಮಾನ

ದೇಹವೆಲ್ಲಾ ಕೃಶವಾಗಿ, ವಿಕಾರವಾಗಿ,
ಯಾವುದೋ ಮಾಯಲಾರದ ರೋಗ ಬಡಿದಂತೆ
ದೇಹದ ಚರ್ಮವೆಲ್ಲಾ ಪಕಳೆಗಳಾಗಿ ಉದುರಿದಂತೆ
ಸೌಂದರ್ಯಹೀನವಾಗಿ ಬಿದ್ದಿರುವೆಯಲ್ಲಾ
ಯಾರು ? ಯಾರು ? ಇದಕ್ಕೆ ಕಾರಣ

'ನಾನೇ' 'ನಾನೇ' ಇದಕ್ಕೆಲ್ಲಾ ಕಾರಣ
ಇಲ್ಲ... ! ಎಂದು ನೀನು ಎಷ್ಟೇ ಕೂಗಿದರೂ
ನಿನ್ನ ಈ ಸ್ಥಿತಿಗೆ 'ನಾನೇ' ಕಾರಣ
ನನ್ನನ್ನು ಕ್ಷಮಿಸಿಬಿಡು... ಏನು ಕ್ಷಮಿಸಲಾರೆಯಾ...

**ಷಣ್ಮುಖಾನಂದ**
ಪಬ್ಲಿಕೇಷನ್ ಅಸಿಸ್ಟೆಂಟ್, ಸಾಹಿತ್ಯ ಅಕಾಡೆಮಿ, ಸದರನ್ ರೀಜನಲ್ ಆಫೀಸ್
ಸೆಂಟ್ರಲ್ ಕಾಲೇಜ್ ಕ್ಯಾಂಪಸ್, ಡಾ|| ಬಿ. ಆರ್. ಅಂಬೇಡ್ಕರ್ ವೀದಿ
ಬೆಂಗಳೂರು - ೫೬೦ ೦೦೧

ಮೌಖಿಕ ಪರಂಪರೆಯಲ್ಲಿ ಮಾತ್ರ ಚಾಲ್ತಿಯಲ್ಲಿರುವ ಲಿಪಿರಹಿತ ಭಾಷೆಗಳನ್ನು ಕೇರೆಹಾವಿಗೂ, ಲಿಪಿಸಹಿತವಾದ ಸಾಹಿತ್ಯವಂತ ಭಾಷೆಗಳನ್ನು ನಾಗರಹಾವಿಗೂ ಹೋಲಿಸ ಬಹುದು. ಭಾಷೆಯೊಂದಕ್ಕೆ ಆದಿಕವಿಯೊಬ್ಬ ಇದ್ದರೆ ಅದು ಹೆಡೆಯೆತ್ತಿದ ಸರ್ಪವೆಂದೇ ತಿಳಿಯಬೇಕು. ಇದು ಕೂಡ ಭಾಷಿಕ ಸಬಲೀಕರಣದ (= ಲಿಂಗ್ವಿಸ್ಟಿಕ್ ಎಂಪವರ್‌ಮೆಂಟ್) ಪ್ರಕ್ರಿಯೆಗೆ ಸೇರುತ್ತದೆ. ಲಿಪಿರಹಿತವಾದ ಮತ್ತು ಆದಿಕವಿಯಿಲ್ಲದ ಭಾಷೆಗಳು ಯಜಮಾನಭಾಷೆಗಳ ಕಾಲ ಮೇಲೆ ಕೇರೆ (ಹಾವು) ಪೊರಳ್ವಂತೆ ಪೊರಳುವ ಪರಾಧೀನತೆಗೆ ಒಳಗಾಗುತ್ತವೆ. ದೇಶಭಾಷೆಗಳಿಗೆ ಸಾಹಿತ್ಯ ಪರಂಪರೆಯ ಶಕ್ತಿ-ಸಾಮರ್ಥ್ಯಗಳು ಮೈಗೂಡಿ ಬರುವುದಕ್ಕೆ ಸ್ವತಃ ಇಂಗ್ಲಿಷ್ ಉತ್ತಮ ನಿದರ್ಶನವಾಗಿದೆ. ಕೇವಲ ಜನಪದರ ಭಾಷೆಯಾಗಿದ್ದ ಇಂಗ್ಲಿಷಿಗೆ 'ಆದಿಕವಿ' ಶೇಕ್ಸ್‌ಪಿಯರ್ ಬಂದಮೇಲೆ 'ಜೀವಪ್ರಭೆ' ಕಾಣಿಸಿಕೊಂಡಿತು. ಇಂಗ್ಲಿಷಿಗೆ ಒಂದು ವೇಳೆ 'ಆದಿಕವಿ'ಯೇ ಇಲ್ಲದೇ ಹೋಗಿದ್ದರೆ ಬಹುಶಃ ಫ್ರೆಂಚ್, ಜರ್ಮನ್, ಸ್ಪಾನಿಶ್ ಭಾಷೆಗಳು ರವಿಮುಳುಗದ 'ಸಾಮ್ರಾಜ್ಯಭಾಷೆ'ಯಾಗುತ್ತಿದ್ದವು ಎಂದು ಊಹಿಸಿದರೆ ತಪ್ಪಾಗಲಾರದು !

ಈ ತರ್ಕದಿಂದ ನಾವು ಕಂಡುಕೊಳ್ಳಬೇಕಾದ 'ಸತ್ಯ'ವೆಂದರೆ, ದೇಶಭಾಷೆಗಳು ಲಿಪಿಸಹಿತವಾದ ಸಾಹಿತ್ಯಭಾಷೆಗಳಾಗುವುದು, ಸಾಹಿತ್ಯ ಮತ್ತು ಸಂಸ್ಕೃತಿ ಸಿದ್ಧಿಯಿಂದ ಯಜಮಾನ ಭಾಷೆಗಳಾಗುವುದು, ನಂತರ ರಾಜಕೀಯ ಅಧಿಕಾರದಿಂದ ರಾಜ್ಯ-ಸಾಮ್ರಾಜ್ಯ ಭಾಷೆಗಳಾಗುವ ಪ್ರಕ್ರಿಯೆ. ಕನ್ನಡ ಭಾಷೆಗೆ ನೃಪತುಂಗನ ಕಾಲದಲ್ಲಿ ಇಂಥ ಪ್ರಕ್ರಿಯೆ ಸಾಧ್ಯವಾಗಿತ್ತು. ೧. ಕನ್ನಡನುಡಿ ೨. ಕನ್ನಡನಾಡು ೩. ಕನ್ನಡನಾಡವರು ೪. ಕನ್ನಡ ಸಾಹಿತ್ಯ ೫. ಕನ್ನಡ ಸಂಸ್ಕೃತಿ ೬. ಕನ್ನಡ ಸಾರಸ್ವತ ೭. ಕನ್ನಡ ಪ್ರಭುತ್ವ – ಎಂಬ ಏಳು ಬಣ್ಣಗಳ ಬೆಡಗು ಇದ್ದುದರಿಂದಲೇ ನೃಪತುಂಗನು 'ಅತಿಶಯಧವಳ' ಎಂದು ಹೆಸರಾಗಿದ್ದನು. ಏಳು ಬಣ್ಣ ಸೇರಿ ಬಿಳಿಯ ಬಣ್ಣವಾಯಿತು ಎಂಬಂತೆ ಕನ್ನಡಭಾಷೆಯು 'ಅತಿಶಯಧವಳ'ವಾಗಿತ್ತು. ಮಾನ್ಯಖೇಟಕ್ಕೆ ಭಾರತದ ವಿವಿಧ ಭಾಗಗಳಿಂದ ವಿದ್ವಾಂಸರು ಬಂದು ಹೋಗುತ್ತಿದ್ದ ಸಂಗತಿಯನ್ನು 'ಕವಿರಾಜಮಾರ್ಗ'ವು ಪ್ರಸ್ತಾಪಿಸುತ್ತದೆ. ಪ್ರಸ್ತುತ, ಕನ್ನಡಭಾಷೆಗೆ ಮೊದಲ ಐದು ಬಣ್ಣಗಳು ಮಾತ್ರ ಪ್ರಾಪ್ತಿಯಾಗಿದ್ದು ಅತಿಮುಖ್ಯವಾದ ಕನ್ನಡ ಪ್ರಭುತ್ವ ಮತ್ತು ಕನ್ನಡ ಸಾರಸ್ವತ ಜ್ಞಾನದ ಕೊರತೆಯಿದೆ. ಕನ್ನಡ ಮಾಧ್ಯಮದಲ್ಲಿ ಎಲ್ಲ ಬಗೆಯ ಸ್ನಾತಕ ಮತ್ತು ಸ್ನಾತಕೋತ್ತರ ಕೋರ್ಸುಗಳು ಮಾತ್ರವಲ್ಲದೆ, ಮೆಡಿಕಲ್-ಇಂಜಿನಿಯರಿಂಗ್ - ಟೆಕ್ನಿಕಲ್ ಮುಂತಾದ ಎಲ್ಲ ಕೋರ್ಸುಗಳು ಕನ್ನಡಕ್ಕೆ ಬಂದಾಗಲೇ 'ಕನ್ನಡ ಸಾರಸ್ವತಜ್ಞಾನ' ದಕ್ಕುವುದು. ಇದು ಕನ್ನಡ ಪ್ರಭುತ್ವದ ಅನುಷ್ಠಾನವಿಲ್ಲದೆ ಸಾಧ್ಯವಾಗದು.

ಸ್ವತಂತ್ರಭಾರತದಲ್ಲಿ ಭಾಷಾವಾರು ಪ್ರಾಂತ್ಯಗಳು ರಚನೆಯಾದ ಮೇಲೆ ಕನ್ನಡ ನಾಡು-ನುಡಿಗಳ ಏಕೀಕರಣವಾಯಿತೇ ಹೊರತು ಭಾಷಾವಾರು ಪ್ರಭುತ್ವಗಳು ರೂಪುಗೊಂಡಿಲ್ಲ. ಈ ಪರಿಸ್ಥಿತಿಯನ್ನು ಕುರಿತು ಲೋಹಿಯಾ ಅವರು ಗರ್ಭಗುಡಿಯಲ್ಲಿ ದೇವರನ್ನು ಪ್ರತಿಷ್ಠಾಪನೆ ಮಾಡದೆ ಪ್ರಾಕಾರಗಳನ್ನು ಅಲಂಕರಿಸುವುದು ಎಂದು ನಿರೂಪಿಸಿದ್ದಾರೆ. ಲೋಹಿಯಾ ಪ್ರಕಾರ ಮೊದಲು ಭಾಷಾ ಪ್ರತಿಷ್ಠಾಪನೆ, ನಂತರ ಭಾಷಾ ಪರಿಪಕ್ವತೆಯ ಸಿದ್ಧಿಯಾಗಬೇಕು. ಆದರೆ, ಭಾರತದಲ್ಲಿ ಈ ಸಹಜ ದೃಷ್ಟಿಯನ್ನು ತಲೆಕೆಳಗು ಮಾಡುತ್ತಾ, ಭಾಷಾ ಪ್ರತಿಷ್ಠಾಪನೆಯನ್ನು ಮುಂದೂಡುತ್ತಾ ದೇಶಭಾಷೆಗಳನ್ನು ಅಭಿವೃದ್ಧಿಗೊಳಿಸಬೇಕು. ಪರಿಪಕ್ವಗೊಳಿಸಬೇಕು ಎಂದು ಸರ್ಕಾರಗಳು ಕರೆ ಕೊಡುತ್ತಲಿವೆ. ಆದ್ದರಿಂದಲೇ ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಕನ್ನಡ ವಿಶ್ವವಿದ್ಯಾಲಯಗಳನ್ನು ರಚನೆ ಮಾಡುತ್ತಾ, ಆಂತರ್ಯದಲ್ಲಿ ಇಂಗ್ಲಿಷನ್ನು ಮೆರೆಸಲಾಗುತ್ತಿದೆ. ಭಾಷಾವಾರು ಪ್ರಾಂತ್ಯಗಳಲ್ಲಿ ಭಾಷಾವಾರು ಪ್ರಭುತ್ವಗಳಿಲ್ಲದೆ, ಇಂಗ್ಲಿಷ್ ಭಾಷಾ ಪ್ರಭುತ್ವವನ್ನು ಕಾಯ್ದುಕೊಂಡು ಬಂದದ್ದರಿಂದಲೇ ತೊಂಬತ್ತರ ದಶಕದಲ್ಲಿ ಎಲ್.ಪಿ.ಜಿ. ನೀತಿಯನ್ನು ಅಳವಡಿಸಿಕೊಳ್ಳಬೇಕಾಯ್ತು.

೨೦೦೦ದಲ್ಲಿ ಪ್ರಕಟವಾದ ನನ್ನ 'ಕಾಡು ಮತ್ತು ತೋಪು' ಎಂಬ ಕೃತಿಯಲ್ಲಿ ಮೂರು ಪ್ರಮೇಯಗಳನ್ನು ಮಂಡಿಸಿದ್ದೇನೆ : ೧. ಶಿಕ್ಷಿತರಾಗುವುದು ಎಂದರೆ ಕನ್ನಡದಿಂದ ದೂರ ಸರಿಯುವುದು ೨. ನಾಗರಿಕರಾಗುವುದು ಎಂದರೆ ನಿಸರ್ಗದಿಂದ ದೂರ ಸರಿಯುವುದು ೩. ಸೈಬರಿಕರಾಗುವುದು ಎಂದರೆ ಜನಸಮುದಾಯಗಳಿಂದ ದೂರ ಸರಿಯುವುದು. ನಾವಿಂದು ಈ ಮೂರು ಸಂಗತಿಗಳನ್ನು ಅಖಂಡವಾಗಿ ಚಿಂತಿಸಬೇಕು. ಆದರೆ, ನಮ್ಮ ನಾಡಿನಲ್ಲಿ ಭಾಷಾದೃಷ್ಟಿಯ ಕನ್ನಡ ಚಳುವಳಿ, ನಿಸರ್ಗದೃಷ್ಟಿಯ ಪರಿಸರ ಚಳುವಳಿ, ಕೃಷಿ ದೃಷ್ಟಿಯ ರೈತ ಚಳುವಳಿಯಲ್ಲದೆ ಕಾರ್ಮಿಕ ಚಳುವಳಿ, ಮಹಿಳಾ ಚಳುವಳಿ, ದಲಿತ ಚಳುವಳಿ ಮುಂತಾದವು ಜಾತಿಪದ್ಧತಿಯನ್ನು ಹೋಲುವಂತೆ ಪ್ರತ್ಯೇಕವಾಗಿ ಹಂಚಿಹೋಗಿವೆ. ಕಂಪಾರ್ಟ್‌ಮೆಂಟಲೀಕರಣವೆನ್ನಬಹುದಾದ ಇಂಥ ಖಂಡದೃಷ್ಟಿಗಳನ್ನು ತೊರೆದು ಅಖಂಡವಾದ 'ಐಕ್ಯಸ್ಥಲ'ದ ಚಳುವಳಿಯೊಂದನ್ನು ಕಂಡುಕೊಳ್ಳಬೇಕಾದ ತುರ್ತು ನಮ್ಮ ಮುಂದಿದೆ. ಇಂದಿನ ಅಪಾಯವೆಂದರೆ;

೧. ನೈಸರ್ಗಿಕ ಪರಿಸರದ ಸಮಾಧಿಯ ಮೇಲೆ ಅಭಿವೃದ್ಧಿ ಯೋಜನೆಗಳು, ೨. ಸಾರ್ವಜನಿಕ ಶಿಕ್ಷಣದ ಸಮಾಧಿಯ ಮೇಲೆ ಎಲ್.ಪಿ.ಜಿ. ನೀತಿಗಳು, ೩. ಮಾತೃಭಾಷೆಯ ಸಮಾಧಿಯ ಮೇಲೆ ಡಿಜಿಟಲ್ ತಂತ್ರಜ್ಞಾನಿಗಳು.

ಯಾವುದೇ ದೂರದೃಷ್ಟಿ ಮತ್ತು ವಿವೇಚನೆಗಳಿಲ್ಲದೆ ಅನುಷ್ಠಾನಗೊಳ್ಳುತ್ತಿವೆ. ಡಿಜಿಟಲ್ ಯುಗದಲ್ಲಿ ಕನ್ನಡ ಜಗತ್ತು: ಹೊಸ ಸವಾಲುಗಳನ್ನು ಇದುವರೆಗೆ ನಿರೂಪಿಸಿದ ಭಾಷಿಕ ಸಬಲೀಕರಣದ (ಲಿಂಗ್ವಿಸ್ಟಿಕ್ ಎಂಪವರ್‌ಮೆಂಟ್) ಅಂಗವೆಂದು ಪರಿಗಣಿಸಿ ನೋಡಬೇಕಾಗಿದೆ. ಜ್ಞಾನದ ನಿರ್ವಹಣೆ ಮತ್ತು ವ್ಯವಸ್ಥೆಗಳನ್ನು ಡಿಜಿಟಲ್ ಯುಗದಲ್ಲಿ ಎದುರುಗೊಳ್ಳಬೇಕಾದ ಬಹುಮುಖಿ ಆಯಾಮಗಳನ್ನು ಕನ್ನಡವು ಒಳಗೊಳ್ಳುವುದು ಹೇಗೆ ? ಎಂದು ವಸ್ತುನಿಷ್ಠವಾಗಿ ಪರಿಶೀಲಿಸಬೇಕು.

ಒಂದು ಸಹಸ್ರಮಾನವನ್ನು ಮೀರಿದ ಕನ್ನಡ ಸಾಹಿತ್ಯ ಮತ್ತು ಸಾಂಸ್ಕೃತಿಕ ಪರಂಪರೆಯಲ್ಲಿ ನವೋದಯಗಳು ಅಥವಾ ರೆನೈಸಾನ್ಸ್‌ಗಳನ್ನು ಗುರುತಿಸಬಹುದು. 'ಕರ್ಣಾಟ ಭಾರತ ಕಥಾಮಂಜರಿ'ಗೆ ಬರೆದ ಮುನ್ನುಡಿಯಲ್ಲಿ ಕುವೆಂಪು ಅವರು ಹೊಸಗನ್ನಡದ ನವೋದಯಕ್ಕೆ ಹಿನ್ನೆಲೆಯಾಗಿರುವ ಪ್ರಥಮ ನವೋದಯ (ಪಂಪ), ದ್ವಿತೀಯ ನವೋದಯ (ವಚನಕಾರರು), ತೃತೀಯ ನವೋದಯ (ಕುಮಾರವ್ಯಾಸ)ಗಳನ್ನು ಪ್ರಸ್ತಾಪಿಸಿದ್ದಾರೆ. ನಾವೀಗ, **ಅಂದು ಹೊಸಗನ್ನಡದ ನವೋದಯ ಇಂದು ಡಿಜಿಟಲ್ ಕನ್ನಡದ ನವೋದಯ** – ಎಂಬಂತೆ ನಿರ್ವಹಣೆ ಮಾಡಬೇಕಾಗಿದೆ. ಕನ್ನಡವು ಇಂಗ್ಲಿಷಿಗೆ ಸಮಾನದೇಹಿ ಕಲ್ಪವಾಗಿ ತಲೆಯೆತ್ತಿ ನಿಲ್ಲಬೇಕಾದರೆ, ಕನ್ನಡಕ್ಕೆ 'ಡಿಜಿಟಲ್ ರೆನೈಸಾನ್ಸ್' ಅತ್ಯಗತ್ಯವಾಗಿದೆ. ಈ ದಿಸೆಯಲ್ಲಿ ಭಾರತದ ದೇಶಭಾಷೆಗಳೊಂದಿಗೆ ಕೈಜೋಡಿಸುವ ಕೆಲಸವನ್ನು ಕನ್ನಡವು ಮಾಡಬೇಕು. ಆದರೆ, ದುರದೃಷ್ಟವಶಾತ್ ಕನ್ನಡದ ಚಿತ್ರರಂಗದ ಹಠಮಾರಿ ಧೋರಣೆಯಿಂದ ಡಬ್ಬಿಂಗ್ ತಂತ್ರಜ್ಞಾನಕ್ಕೆ ಬಹಿಷ್ಕಾರ ಹಾಕಿದ್ದು, ಡಿಜಿಟಲ್ ಕನ್ನಡದ ನವೋದಯಕ್ಕೆ ಹಾನಿಯಾಗಿದೆ.

ಕನ್ನಡ ಚಿತ್ರರಂಗವು ಅರವತ್ತರ ದಶಕದಲ್ಲಿ ಡಬ್ಬಿಂಗ್ ವಿರೋಧಿ ಚಳುವಳಿ ಮಾಡಿದ್ದು ಆ ಕಾಲಕ್ಕೆ ಅರ್ಥಪೂರ್ಣವಾಗಿತ್ತು. ಅ.ನ.ಕೃ., ಮ. ರಾಮಮೂರ್ತಿ, ಡಾ|| ರಾಜ್‌ಕುಮಾರ್ ಮುಂತಾದವರ ನೇತೃತ್ವದಲ್ಲಿ ನಡೆದ ಡಬ್ಬಿಂಗ್ ವಿರೋಧಿ ಚಳುವಳಿ ಯಶಸ್ವಿಯಾಗಿದ್ದು ಮಾತ್ರ ವಲ್ಲದೆ ಇದರ ಫಲವನ್ನು ಕನ್ನಡ ಚಿತ್ರರಂಗ ಉಣ್ಣುವಂತಾಯ್ತು. ಜಂಟಿ ನಿರ್ಮಾಣಗಳು ಎನ್ನಬಹುದಾದ ದ್ವಿಭಾಷಾ ಮತ್ತು ತ್ರಿಭಾಷಾ ಚಲನಚಿತ್ರಗಳನ್ನು (= ತೆಲುಗು, ತಮಿಳು, ಕನ್ನಡ) ನಾವೆಲ್ಲ ನೋಡುವಂತಾಯ್ತು. ವಿಜಯಾ, ವಿಕ್ರಂ, ಎವಿಎಂ ಮುಂತಾದ ಸಂಸ್ಥೆಗಳು ಅನೇಕ ಜಂಟಿ ನಿರ್ಮಾಣಗಳನ್ನು ತೆರೆಗಿತ್ತರು. ಉದಾಹರಣೆ : ಸತ್ಯ ಹರಿಶ್ಚಂದ್ರ (ಕನ್ನಡ, ತೆಲುಗು, ತಮಿಳು), ಭೂಕೈಲಾಸ (ಕನ್ನಡ, ತೆಲುಗು), ಅಮರಶಿಲ್ಪಿ ಜಕಣಾಚಾರಿ (ಕನ್ನಡ, ತೆಲುಗು), ಗಾಳಿಗೋಪುರ (ಕನ್ನಡ, ತೆಲುಗು), ವಾಲ್ಮೀಕಿ (ಕನ್ನಡ, ತೆಲುಗು) ಮುಂತಾದುವು. ಆದರೆ ಈಗಿನ ಪರಿಸ್ಥಿತಿಯೇ ಬೇರೆ ! ಈಗ ಡಬ್ಬಿಂಗ್ ವಿರೋಧದಿಂದ ಕನ್ನಡಕ್ಕೆ ಯಾವೊಂದು ಪ್ರಯೋಜನವೂ ಆಗುತ್ತಿಲ್ಲ. ಇದರಿಂದ ದಕ್ಕುವ ಫಲ ಏನೂ ಇಲ್ಲ. ಇದರ ಹಿಂದೆ ಪಟ್ಟಭದ್ರರ ಹಿತಾಸಕ್ತಿಗಳಿವೆಯೇ ಹೊರತು ಸಾರ್ವಜನಿಕ ಹಿತಾಸಕ್ತಿ ಇಲ್ಲ. ಈ ದಿಸೆಯಲ್ಲಿ ನಾನು ಶ್ರೀಯುತ ಯು. ಬಿ. ಪವನಜ ಅವರನ್ನು ಸಂಪರ್ಕಿಸಿದಾಗ ಕೇಳಿದ ಪ್ರಶ್ನೆಗೆ ಕೊಟ್ಟ ಉತ್ತರವಿದು :

**ನಂಗಲಿ :** ಡಬ್ಬಿಂಗ್ ತಂತ್ರಜ್ಞಾನದಿಂದ ಹೊರಗುಳಿದ ಕನ್ನಡಕ್ಕೆ ಹಿನ್ನಡೆ ಆಗಿದೆಯೇ ?

**ಪವನಜ :** ತುಂಬ ನಷ್ಟವಾಗಿದೆ. ಕನ್ನಡಿಗರು ನಿರಭಿಮಾನಿಗಳು. ಮೂರ್ಖ ಕಾನೂನುಗಳನ್ನು ಮಾಡಿಕೊಂಡಿದ್ದಾರೆ. ಎಲ್ಲ ಜೆರಾಕ್ಸ್ ಮಿಷಿನ್ನುಗಳು. ರಿಮೇಕ್ ಮಾಡ್ತಾರೆ. ಒರಿಜಿನಾಲಿಟಿಯೇ ಇಲ್ಲ!... ಪೋಗೊ, ನ್ಯಾಷನಲ್ ಜಿಯಾಗ್ರಾಫಿಕ್, ಡಿಸ್ಕವರಿ, ಅನಿಮಲ್ ಪ್ಲಾನೆಟ್ ಮುಂತಾದುವುಗಳನ್ನು ತೆಲುಗು-ತಮಿಳು-ಹಿಂದಿಯಲ್ಲಿ ಡಬ್ಬಿಂಗ್ ಮಾಡಿಕೊಂಡು ಅವರವರ ಭಾಷೆಗಳಲ್ಲೇ ನೋಡುತ್ತಿದ್ದಾರೆ. ಕನ್ನಡಿಗರು ಪೆಚ್ಚುಮೋರೆ ಹಾಕಿಕೊಂಡು ಕುಳಿತಿರಬೇಕು. ಅಷ್ಟೆ!

– *ಮೊಬೈಲ್ ಮಾತುಕತೆಯಿಂದ (ದಿನಾಂಕ : ೧೭-೧-೨೦೧೩)*

ಕೋಲಾರದಲ್ಲಿ ಗೆಳೆಯರ ಬಳಗವು ಅಭಿಮಾನದಿಂದ 'ಮೂವಿಂಗ್ ಎನ್‌ಸೈಕ್ಲೋಪೀಡಿಯ' (ಚಲಿಸುವ ವಿಶ್ವಕೋಶ) ಎಂದು ಕರೆಯುವ ಶ್ರೀ ವಿ. ಎಸ್. ಎಸ್. ಶಾಸ್ತ್ರಿ ಅವರನ್ನು ಈ ಕುರಿತು ಸಂಪರ್ಕಿಸಿದಾಗ ಕೊಟ್ಟ ಉತ್ತರವಿದು :

**ನಂಗಲಿ :** ಕನ್ನಡದ ಡಿಜಿಟಲ್ ಜಗತ್ತು ವಿಸ್ತಾರಗೊಳ್ಳುತ್ತಿಲ್ಲವೇಕೆ ? ಡಬ್ಬಿಂಗ್ ವಿರೋಧ ಸರಿಯೇ ?

**ಶಾಸ್ತ್ರಿ:** ತೆಲುಗು, ತಮಿಳು, ಹಿಂದಿಗಳಿಗೆ ಹೋಲಿಸಿದರೆ ಕನ್ನಡ ಹತ್ತು ವರ್ಷಗಳಷ್ಟು ಹಿಂದೆ ಉಳಿದಿದೆ. ಕನ್ನಡದಲ್ಲಿ ಜ್ಞಾನ ಭಂಡಾರ ಸಮೃದ್ಧವಾಗಿದೆ. ಆದರೆ ಅಳವಡಿಸಿ ಕೊಳ್ಳುವಲ್ಲಿ ಬೌದ್ಧಿಕ ದಾರಿದ್ರ್ಯವಿದೆ. ಕೆಲವರು ಡಬ್ಬಿಂಗ್ ವಿರೋಧಿಸುತ್ತಾ ಬ್ಲಾಕ್‌ಮೇಲ್ ಮಾಡುತ್ತಿದ್ದಾರೆ.....

ನಾನು ವಾಲ್ಟ್‌ಡಿಸ್ನಿ ಸೀರೀಸ್‌ಗಳನ್ನು ಕನ್ನಡಕ್ಕೆ ಅನುವಾದ ಮಾಡಿಕೊಟ್ಟು ಇಪ್ಪತ್ತೈದು ಸಾವಿರ ರೂಪಾಯಿಗಳಿಗೂ ಹೆಚ್ಚು ಸಂಪಾದಿಸಿದ್ದೇನೆ. ಟೆನ್ನಿಸ್ ಆಟಗಾರ ಶ್ರೀ ವಿಜಯ್ ಅಮೃತರಾಜ್ ನೇತೃತ್ವದ 'ಬೆನವಿಸ್ಟ್' ಕಂಪೆನಿಗಾಗಿ – ಒಂದು ಶಬ್ದಕ್ಕೆ ಒಂದು ರೂಪಾಯಿ – ಎಂಬ ಯೋಜನೆಯಲ್ಲಿ ವಾಲ್ಟ್‌ಡಿಸ್ನಿಯನ್ನು ಕನ್ನಡಾನುವಾದ ಮಾಡಿಕೊಟ್ಟು ನನಗೆ ಬಂದ ಹಣದಿಂದ ನಲವತ್ತೆರಡು ಸಾವಿರ ರೂಪಾಯಿ ಬೆಲೆಬಾಳುವ ಗಾಲಾಕ್ಸಿ ಟ್ಯಾಬ್ ಪಿ. ಸಿ. ಕೊಂಡುಕೊಂಡಿದ್ದೇನೆ..... ಕನ್ನಡವು ಹಿಂದಿ, ತೆಲುಗು, ತಮಿಳು ಭಾಷೆಗಳಂತೆ ಡಬ್ಬಿಂಗ್ ತಂತ್ರಜ್ಞಾನವನ್ನು ಬಹುವ್ಯಾಪಕವಾಗಿ ಅಳವಡಿಸಿಕೊಳ್ಳದಿದ್ದರೆ ಮುಂದೆ ಕಷ್ಟವಾಗುತ್ತದೆ. ಭಾಷಾ ಬಳಕೆಯಿಲ್ಲದಿದ್ದರೆ ಭಾಷಾನಾಶ ಉಂಟಾಗುತ್ತದೆ.

*– ಮೊಬೈಲ್ ಮಾತುಕತೆಯಿಂದ (ದಿನಾಂಕ : ೧೬-೧-೨೦೧೩)*

ಮೇಲಿನ ಚರ್ಚೆಗಳಿಂದ ಕನ್ನಡಕ್ಕೆ ಬೇಕಾದಾಗ 'ಡಿಜಿಟಲ್ ರೆನೈಸಾನ್ಸ್' ಸ್ವರೂಪವನ್ನು ಮನದಟ್ಟು ಮಾಡಿಕೊಳ್ಳಬಹುದು.

ನನ್ನ ಸ್ವಾನುಭವವನ್ನೇ ಆಧರಿಸಿ ಹೇಳುವುದಾದರೆ, ಇಂಗ್ಲಿಷಿನಲ್ಲಿ ತಯಾರಾದ ಐವತ್ತು ಮತ್ತು ಅರವತ್ತರ ದಶಕದ ಉತ್ಕೃಷ್ಟ ಸಿನೆಮಾಗಳು 'ಹಾಲಿವುಡ್‌ನ ಅದ್ಭುತಗಳು' ಎನ್ನಬಹುದು. (೧) ಆಫ್ರಿಕನ್ ಸಫಾರಿ, ದ ಡ್ರಮ್ಸ್ ಆಫ್ ದ ಡೆಸ್ಟಿನಿ, ಕಿಂಗ್ ಎಲಿಫೆಂಟ್ ಮುಂತಾದ ಅರಣ್ಯ ಸರಣಿಯ ಸಿನೆಮಾಗಳು, (೨) ದ ಗ್ರೇಟ್ ಎಸ್ಕೇಪ್, ದ ಗನ್ಸ್ ಆಫ್ ನವ್‌ರೋನ್, ವೇರ್ ಈಗಲ್ಸ್ ಡೇರ್, ದ ಬ್ರಿಡ್ಜ್ ಆನ್ ರಿವರ್ ಕ್ವಾಯಿ, ಟೋರ ಟೋರ - ಪರ್ಲ್ ಹಾರ್ಬರ್, ವಾನ್‌ರಾಯ್ನ್ ಎಕ್ಸ್‌ಪ್ರೆಸ್, ಒನ್ ದಟ್ ಗಾಟ್ ಅವೆ, ಸ್ಟಾಲಾಗ್ - ೧೭ ಮುಂತಾದ ವಿಶ್ವಯುದ್ಧ ಸರಣಿಯ ಸಿನೆಮಾಗಳು, (೩) ಸ್ಯಾಮ್‌ಸನ್ ಅಂಡ್ ಡೆಲೈಲ, ಬೆನ್‌ಹರ್, ಟೆನ್ ಕಮಾಂಡ್‌ಮೆಂಟ್ಸ್, ಎಲ್ಸಿದ್, ದ ರೋಬ್, ದ ಗ್ರೇಟೆಸ್ಟ್ ಸ್ಟೋರಿ ಎವರ್ ಟೋಲ್ಡ್, ದ ಬೈಬಲ್ ಮುಂತಾದ ಬೈಬಲ್ ಸರಣಿಯ ಸಿನೆಮಾಗಳು, (೪) ಸ್ಯಾಂಡ್ ಪೆಬ್ಬಲ್ಸ್, ಕ್ರಿಮ್‌ಸನ್ ಟೈಡ್, ಸಬ್‌ಮೆರಿನ್ ಕಮಾಂಡ್, ಎನಿಮಿ ಬಿಲೊ, ಐಸ್ ಸ್ಟೇಷನ್ ಜೇಬ್ರ ಮುಂತಾದ ಮೆರಿನ್/ಸಬ್‌ಮೆರಿನ್ ಸರಣಿಯ ಸಿನೆಮಾಗಳು, (೫) ಜೂಲಿಯಸ್ ಸೀಸರ್, ಒಥೆಲೊ, ಮರ್ಚೆಂಟ್ ಆಫ್ ವೆನಿಸ್, ಕಿಂಗ್ ಲಿಯರ್, ಕ್ಲಿಯೊಪಾತ್ರ, ಹ್ಯಾಮ್ಲೆಟ್ ಮುಂತಾದ ಶೇಕ್ಸ್‌ಪೀರಿಯನ್ ಸರಣಿಯ ಸಿನೆಮಾಗಳು, (೬) ದ ಲ್ಯಾಂಡ್ ಆಫ್ ಫೆರೋಸ್, ಚೆಂಗೀಸ್‌ಖಾನ್, ಅಲೆಕ್ಸಾಂಡರ್ ದ ಗ್ರೇಟ್, ಸ್ಪಾರ್ಟಕಸ್, ಲಾರೆನ್ಸ್ ಆಫ್ ಅರೇಬಿಯ, ದ ಫಾಲ್ ಆಫ್ ರೋಮನ್ ಎಂಪೈರ್ ಮುಂತಾದ ಐತಿಹಾಸಿಕ ಸರಣಿಯ ಸಿನೆಮಾಗಳು, (೭) ದ ಮೆಕೆನ್ನಾಸ್ ಗೋಲ್ಡ್, ಪ್ಯಾಪಿಲಾನ್, ಗುಡ್ ಬ್ಯಾಡ್ ಅಗ್ಲಿ, ಮ್ಯಾಗ್ನಿಫಿಷಿಯೆಂಟ್ ಸೆವೆನ್, ಟ್ರಿನಿಟಿ ಸಿರೀಸ್, ಫೈರ್‌ಫಾಕ್ಸ್, ಟವರಿಂಗ್ ಇನ್‌ಫರ್ನೊ, ಗನ್‌ಫೈಟ್ ಅಟ್ ಒ.ಕೆ. ಕೊರ್ರಲ್ ಮುಂತಾದ ಅಡ್ವೆಂಚರ್ ಸರಣಿಯ ಸಿನೆಮಾಗಳು – ಇವುಗಳ ಸೊಬಗು ಮತ್ತು ಸವಿಗಳನ್ನು ನೋಡಿದವರೇ ಬಲ್ಲರು. ಬೆಂಗಳೂರಿನ ಸುಪ್ರಸಿದ್ಧ ಗ್ಯಾಸ್ ಕಾಲೇಜಿನಲ್ಲಿ ಓದುತ್ತಿದ್ದಾಗ ನಾನು ನೋಡಿದ ಹಾಲಿವುಡ್‌ನ ಅದ್ಭುತಗಳಿವು. ಇವನ್ನು ಸಿನೆಮಾಗಳೆಂದು ತಳ್ಳಿಹಾಕುವಂತಿಲ್ಲ. ಇವೆಲ್ಲವೂ 'ನಾಲೆಡ್ಜ್ ಮ್ಯಾನೇಜ್‌ಮೆಂಟ್'ಗೆ ಸಂಬಂಧಪಟ್ಟ ಸಿನೆಮಾಗಳಾಗಿದ್ದು ದೃಶ್ಯಾತ್ಮಕ ಮಹಾಕಾವ್ಯಗಳು ಅಥವಾ ವಿಶ್ವಕೋಶಗಳು ಎಂದು ಕರೆಯಬಹುದಾದವು. ಕುವೆಂಪು ಕೂಡ ತಮ್ಮ ಆತ್ಮಕಥನದಲ್ಲಿ ತಾವು ನೋಡಿದ ಇಂಗ್ಲಿಷ್ ಅರಣ್ಯಚಿತ್ರಗಳ ಸೊಗಸನ್ನು ಮುಕ್ತಮನಸ್ಸಿನಿಂದ ಕೊಂಡಾಡಿದ್ದಾರೆ.

'ಹಾಲಿವುಡ್‌ನ ಅದ್ಭುತಗಳು' ಎನ್ನಬಹುದಾದ ಈ ಸಿನೆಮಾಗಳು ಡಬ್ಬಿಂಗ್ ತಂತ್ರಜ್ಞಾನದ ಅಳವಡಿಕೆಯಿಂದ ಇಂದು ನಾಲ್ಕು ಭಾಷೆಗಳಲ್ಲಿ (ಇಂಗ್ಲಿಷ್, ಹಿಂದಿ, ತೆಲುಗು, ತಮಿಳು) ಡಿ.ವಿ.ಪಿ.ಗಳಾಗಿ (ಡಿಜಿಟಲ್ ವೀಡಿಯೊ ಪ್ಯಾಕೇಜ್) ಮೂಡಿಬಂದಿದೆ. ಉದಾಹರಣೆಗೆ, 'ಟೆನ್ ಕಮಾಂಡ್‌ಮೆಂಟ್ಸ್' – ಎಂಬ ಡಿ.ವಿ.ಪಿ.ಯನ್ನು ಸಿಸ್ಟಮ್ಮಿಗೆ ಹಾಕಿ, ಆನ್ ಮಾಡಿ, ಲಾಂಗ್ವೇಜ್ ಆಪ್ಷನ್‌ಗೆ ಹೋದರೆ ಇಂಗ್ಲಿಷ್, ಹಿಂದಿ, ತೆಲುಗು, ತಮಿಳು ಎಂಬ ಬಾಕ್ಸ್‌ಗಳು ಕಾಣಿಸಿಕೊಳ್ಳುತ್ತವೆ. ಇದರಲ್ಲಿ ನಮಗೆ ಬೇಕಾದ ಭಾಷೆಯನ್ನು ಆಯ್ಕೆಮಾಡಿ ಒ.ಕೆ. ಕೊಟ್ಟರೆ ಆಯಾ ಭಾಷೆಯಲ್ಲಿ ಮಾತುಗಳು ಕೇಳಿಬರುತ್ತವೆ. ಈ ನಾಲ್ಕು ಭಾಷೆಗಳ ಪ್ಯಾಕೇಜ್‌ನಿಂದ ಹೊರಗುಳಿದಿರುವ ಕನ್ನಡಕ್ಕೆ ಆಗಿರುವ ನಷ್ಟವನ್ನು ಸಹೃದಯರು ಪರಿಭಾವಿಸಬೇಕು.

ಡಿ.ಟಿ.ಎಚ್. (ಡೈರೆಕ್ಟ್ ಟು ಹೋಮ್) ಸೌಲಭ್ಯವನ್ನು ಅಳವಡಿಸಿಕೊಂಡವರು ಸಹ ಈ ನಾಲ್ಕು ಭಾಷೆಗಳ ಪ್ಯಾಕೇಜಿಗೆ ಹೋಗಿ, ಬೇಕಾದ ಭಾಷೆಯನ್ನು ಆಯ್ಕೆ ಮಾಡಿಕೊಂಡು ನೋಡಬಹುದು. ನ್ಯಾಷನಲ್ ಜಿಯಾಗ್ರಾಫಿಕ್, ಡಿಸ್ಕವರಿ, ಅನಿಮಲ್ ಪ್ಲಾನೆಟ್, ಪೋಗೊ ಮುಂತಾದ ಚಾನಲ್‌ಗಳಿಗೆ ಹೋದವರು ಲಾಂಗ್ವೇಜ್ ಆಪ್ಷನ್ ಮೂಲಕ ಇಂಗ್ಲಿಷ್, ಹಿಂದಿ, ತೆಲುಗು, ತಮಿಳು ಭಾಷೆಗಳಲ್ಲಿ ಬೇಕಾದುದನ್ನು ಆಯ್ಕೆಮಾಡಿಕೊಂಡು ನೋಡಬಹುದು. ಇತ್ತೀಚೆಗೆ, ಕಮಲಹಾಸನ್ ಅವರು 'ವಿಶ್ವರೂಪಂ' ಎಂಬ ಭಾರಿ ಬಜೆಟ್ ಸಿನೆಮಾವನ್ನು ಡಿ.ಟಿ.ಎಚ್. ಮೂಲಕ ಬಿಡುಗಡೆ ಮಾಡಲು ನಿರ್ಧರಿಸಿದ್ದರು. ಆದರೆ, ಚಿತ್ರಮಂದಿರದ ಮಾಲೀಕರ ಹಿತಾಸಕ್ತಿಯಿಂದ ಸಾಧ್ಯವಾಗಲಿಲ್ಲ.

'ಕನ್ನಡ ಜಗತ್ತು' ಎಂದರೇನು ? ಎಂಬ ಪ್ರಶ್ನೆಗೆ ಕನ್ನಡವೆಂಬ ಏಕಮಾತ್ರ ಭಾಷಾ ಜಗತ್ತು ಎಂದು ಉತ್ತರಿಸಲಾಗದು. ಈ ವಿಶ್ವದಲ್ಲಿ ಕನ್ನಡವು ಪ್ರತ್ಯೇಕವಾದ ಭಾಷಾಜಗತ್ತಾಗಿ ಉಳಿಯಕೂಡದು. 'ಕವಿರಾಜಮಾರ್ಗ'ದಲ್ಲಿ ಕನ್ನಡ ಜಗತ್ತಿನ ವಿವರಣೆ ಸಮರ್ಪಕವಾಗಿದೆ : ''ವಸುಧಾವಲಯ ವಿಲೀನ ವಿಶದ ವಿಷಯ ವಿಶೇಷಂ'' – ಇಲ್ಲಿರುವ ವಕಾರದ ವರ್ಣಾವೃತ್ತಿಗೆ ಬೆರಗಾದವರು ಅನುಪ್ರಾಸದ ಗುಂಗಿನಲ್ಲಿ ಅಂತರಾರ್ಥ ಮರೆತು ಬಿಡುವುದುಂಟು. ಇಲ್ಲಿರುವ 'ವಿಶದ'ಕ್ಕೆ ಪ್ರಸಿದ್ಧ ಎಂದೂ 'ವಿಷಯ'ಕ್ಕೆ ದೇಶವೆಂದೂ ಅರ್ಥೈಸಿಕೊಳ್ಳಬೇಕು. ಇಡೀ ವಸುಧಾವಲಯವನ್ನು ತನ್ನೊಳಗೆ ವಿಲೀನಗೊಳಿಸಿ ಕೊಂಡಿರುವ ಸುಪ್ರಸಿದ್ಧವಾದ ವಿಶಿಷ್ಟ ದೇಶವೇ ಕನ್ನಡ ಜಗತ್ತು ಎಂಬ ಕವಿರಾಜಮಾರ್ಗದ ವಿವರಣೆ ಸರಿಯಾಗಿದೆ. ಆದರೆ, ಇಂದು ಕನ್ನಡಕ್ಕೆ ದಕ್ಕದೆ ಹೋಗಿರುವ 'ಡಿಜಿಟಲ್ ನವೋದಯ'ದಿಂದಾಗಿ ವಸುಧಾವಲಯದಿಂದ ದೂರಸಿಡಿದು, ಕನ್ನಡ ಜಗತ್ತು ಪ್ರತ್ಯೇಕ ದ್ವೀಪವಾಗುತ್ತಿದೆ.

ನಾವಿಂದು ಡಬ್ಬಿಂಗ್ ತಂತ್ರಜ್ಞಾನವನ್ನು ಏಕರೂಪಿಯಾಗಿ ಸಿನೆಮಾಜಗತ್ತಿಗೆ ಮಾತ್ರ ಪರಿಮಿತಗೊಳಿಸುವಂತಿಲ್ಲ. ಡಬ್ಬಿಂಗ್ ತಂತ್ರಜ್ಞಾನವು ಬಹುರೂಪಿಯಾದುದು. ಉದಾಹರಣೆಗೆ,

೧. ಭಾಷಿಕ ಡಬ್ಬಿಂಗ್, ೨. ಜಾಹಿರಾತು ಡಬ್ಬಿಂಗ್, ೩. ವಾಯ್ಸ್ ಡಬ್ಬಿಂಗ್, ೪. ಸಾಹಿತ್ಯಕ ಡಬ್ಬಿಂಗ್, ೫. ಚಾನಲ್ ಡಬ್ಬಿಂಗ್, ೬. ಸಿನೆಮಾ ಡಬ್ಬಿಂಗ್, ೭. ಸೀರಿಯಲ್ ಡಬ್ಬಿಂಗ್, ೮. ಆ್ಯನಿಮೇಷನ್ ಡಬ್ಬಿಂಗ್ ಇತ್ಯಾದಿ.

ಮೇಲೆ ಕಾಣಿಸಿರುವ ಬಹುರೂಪಿ ಡಬ್ಬಿಂಗ್ ಪೈಕಿ ಕನ್ನಡವು ಮೊದಲ ನಾಲ್ಕು ಡಬ್ಬಿಂಗ್‌ಅನ್ನು ಮಾಡಿಕೊಳ್ಳುತ್ತಲೇ ಇದೆ. ಆದರೆ ಉಳಿದ ಡಬ್ಬಿಂಗ್ ಕಾರ್ಯಗಳಿಗೆ ಬಹಿಷ್ಕಾರ ಹಾಕಿದೆ. ಈ ಇಬ್ಬಗೆಯ ಧೋರಣೆಯ ಹಿಂದೆ ಪಟ್ಟಭದ್ರರ ಹಿತಾಸಕ್ತಿ ಇರುವುದು ಸುಸ್ಪಷ್ಟ! ರಾಜಕೀಯವಾಗಿ ಪ್ರಜಾಪ್ರಭುತ್ವವನ್ನು ಒಪ್ಪಿಕೊಂಡಿರುವ ನಾವು 'ಭಾಷಿಕ ಪ್ರಜಾಪ್ರಭುತ್ವ'ವನ್ನು ಕೂಡ (ಲಿಂಗ್ವಿಸ್ಟಿಕ್ ಡೆಮಾಕ್ರಸಿ) ಒಪ್ಪಿಕೊಳ್ಳಬೇಕಾಗುತ್ತದೆ. ವೈಯುಕ್ತಿಕ ಹಿತಾಸಕ್ತಿಗಳಿಗೆ ಶರಣಾಗಿ 'ಭಾಷಿಕ ಸರ್ವಾಧಿಕಾರ' (ಲಿಂಗ್ವಿಸ್ಟಿಕ್ ಡಿಕ್ಟೇಟರ್‌ಷಿಪ್) ಮೆರೆಯುವುದು ಸಮರ್ಪಕವೆನಿಸುವುದಿಲ್ಲ. ಈ ದಿಸೆಯಲ್ಲಿ ಕನ್ನಡದ ಬುದ್ಧಿಜೀವಿಗಳು ಮತ್ತು ಚಿತ್ರರಂಗದ ಮುಂದಾಳುಗಳು ಸಹನೆಯಿಂದ ಮರುಚಿಂತನೆ ಮಾಡಿಕೊಳ್ಳಬೇಕೆಂದು ಕೋರುತ್ತೇನೆ. ಬಹುರೂಪಿಯಾದ ಡಬ್ಬಿಂಗ್ ತಂತ್ರಜ್ಞಾನವು ಇಂದಿನ ಡಿಜಿಟಲ್‌ಯುಗದಲ್ಲಿ ಕನ್ನಡಕ್ಕೆ ದಕ್ಕಲೇಬೇಕಾದ 'ಭಾಷಿಕ ಸಬಲೀಕರಣ'ವೆಂಬ (ಲಿಂಗ್ವಿಸ್ಟಿಕ್ ಎಂಪವರ್‌ಮೆಂಟ್) ಪ್ರಕ್ರಿಯಾತ್ಮಕ ಸಂಬಂಧವಾಗಿದೆ. ಕೊನೆಯದಾಗಿ, ಮತ್ತೊಮ್ಮೆ ಆರಂಭದಲ್ಲಿ ಉಲ್ಲೇಖಿಸಿದ ಕುವೆಂಪು ಅವರ ''ಸಾಯುತಿದೆ ನಿಮ್ಮ ನುಡಿ, ಓ ಕನ್ನಡದ ಕಂದರಿರ !'' – ಎಂಬ ಕವಿತೆಯನ್ನು ನೆನಪಿಸುತ್ತಾ ಇಲ್ಲಿಗೆ ವಿರಮಿಸುತ್ತೇನೆ.

***(ಹಾವೇರಿ ಜಿಲ್ಲೆಯ ಏಳನೇ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಹೊಸರಿತ್ತಿಯಲ್ಲಿ ದಿನಾಂಕ ೩೦ ಮತ್ತು ೩೧ ಜನವರಿ ೨೦೧೩ರಂದು ಏರ್ಪಡಿಸಿದ್ದಾಗ ಕೊನೆಯದಿನ ಸಂವಾದಗೋಷ್ಠಿಯಲ್ಲಿ ಅಧ್ಯಕ್ಷತೆ ವಹಿಸುತ್ತಾ – 'ಕನ್ನಡ ಜಗತ್ತು ಮುಂದಿರುವ ಸವಾಲುಗಳು' – ಎಂಬ ವಿಷಯ ಕುರಿತು ಮಾಡಿದ ಭಾಷಣವನ್ನು ಆಧರಿಸಿದ ಲೇಖನವಿದು.)***

**ವಿ. ಚಂದ್ರಶೇಖರ ನಂಗಲಿ**
ನಂ. ೧೬, 'ಶ್ರೀ ಗೌರಿ', ೪ನೇ ಕ್ರಾಸ್, ಕನಕನಗರ, ಹೊಸಕೋಟೆ - ೫೬೨ ೧೧೪
ಬೆಂಗಳೂರು ಗ್ರಾಮಾಂತರ ಜಿಲ್ಲೆ

''ಕಣ್ ಮುಚ್ಚಾಕಿ ಎಂಟು ದಿನ ಆಯ್ತು. ನಮ್ ಅವ್ವ ಗುಣ ಆಯ್ತಳೋ ಇಲ್ಲೋ. ಒಂದ್ ಹನಿನು ಗಂಜೀ ನೀರು ಕುಡಿವಳ್ಳು,'' ಮಾತಾಡಲು ಬಂದವರಿಗೆಲ್ಲಾ ಸುಮಂಗಲಾ ಮೂಗಿನ ತುದಿಗೆ ಸೆರಗು ಹಚ್ಕೊಂಡು ಹೇಳುತ್ತಿದ್ದಳು.

''ಹೆಣದ ವಾಸುನು ನನ್ನ ಮೈಯಿಂದ ಹೊಂಟಾದ್ರೇ ನಾನಿನ್ನು ತಟ್ಟಲ್ಲ... ಅಂತ ನಾಕು ದಿನದ ಹಿಂದ ಹೇಳ್ತಿದ್ದ ಅತ್ತೇರು ಇವಾಗ ಮಾತೇ ಆಡ್ತಾ ಇಲ್ಲ.'' ಸೊಸೇರು ಸಹ ಬಂದೋರ ಮಾತಿನಾಗ ಹೇಳೋದ ಕೇಳಿ ಕೇಳಿ ಮುದುಕಿಯ ಜೀವ ದಂಗಾಗತಿತ್ತು.

ಯಾರ್ ಬದುಕಬೇಕಂತಾರಾ ? ಜೀವತ್ಯಾಗ ಮಾಡ ಬೇಕೆಂದೇ ಅನ್ನ ನೀರು ತ್ಯಜಿಸುವ ನಿರ್ಧಾರ ತೆಗೆದು ಕೊಂಡಿದ್ದು ತಾನೇ ? ಇದೆಲ್ಲಾ ಇವರಿಗ್ಹೇಗೆ ಹೇಳೋದು ?

ಕಣ್ಣು ತೆರೆಯಲು, ಮಾತಾಡಲು ಮನಸಾಗ್ತಾ ಇರಲಿಲ್ಲ. ಹಸಿವಂತು ಎಂದೋ ಕಳೆದುಹೋಗಿತ್ತು. ಮುತ್ತೈದಿ ಸಾವು ಬೇಡಿದ ಜೀವಕ್ಕ ರಂಡಮುಂಡಿ ಸಾವು ಹಣೆಯಲ್ಲಿ ಬರೆದುದು ಹ್ಯಾಗ ತಪ್ಪತದ ? ಹೆಂಗಾದರೂ ಮಾಡಿ ಈ ನೆಪದಲ್ಲಾದರೂ ಜೀವ ಬಿಡಬೇಕೆಂದ್ರ ಖೋಡಿ ಜೀವ ಧಂಡದಾಗಿಂದ ಹೋಗೇವಲ್ದು.

ಬದುಕಿನ ಪಯಣದಲ್ಲಿ ತನ್ನನ್ನು ಬಿಟ್ಟುಹೋದ ಗಂಡನ ನೆನಪು ನುಗ್ಗಿಬಂತು. ಎಂತಹ ಗಟ್ಟಿ ಜೀವ ಅದು. ಹೊರಗ ನೋಡಲಾಕೆ ಎಷ್ಟು ಗಟ್ಟಿಯೋ ಒಳಗ ಓಟೆ ಲಡಪುಸಕಿ. ತನ್ನಂತೆ ತನ್ನ ಹಾಗೆನೆ ತನ್ನೆಲ್ಲಾ ಮಕ್ಕಳು ಮೊಮ್ಮಕ್ಕಳು ಸೊಸೆಯಂದಿರೆಲ್ಲಾ ಠಾಕುಠೀಕಾಗಿ ಟೈಮಿಗನುಸಾರವಾಗಿ ಬದುಕಿನ ದಿನಚರಿ ಹೊಂದಿರಬೇಕೆಂದು ಬಯಸುವಾತ. ಇದಕ್ಕೆ ಯಾರಾದರೂ ತಪ್ಪಿದರೋ ಪೋತರಾಜ ಕುಣಿದ ಹಂಗ ಇಡೀ ದಿನ ತನಗೆ ಬೈಯೋದೇನು ? ವಂಕ ಮಾತಾಡೋದೇನು ? ಆತನ ಧಕ್ಕಿಗಿ ನಾನಂತ ತಟ್ಟೀನಿ. ಇವತ್ತಿನ ಪೊರಗೋಳು ಸಾಸಿವೆ ಕಾಳಿನಷ್ಟು ತಾಳಲಾರರು.

ಮುದುಕ ಹೊಂಟೋದ ಮ್ಯಾಲ ಆಕಾಶವೇ ಕಳಚಿ ಮೈಮ್ಯಾಲ ಬಿದ್ದಂತಾಯಿತು. ಜೀವ ಹೋದ ಧಂಡದ ಹಂಗ ರಂಡ ಮುಂಡಿಯಾದ ತನ್ನದೊಂದು ಬದುಕು ಬದುಕೆ ? ಎಲ್ಲದರಲ್ಲೂ ಸೌಭಾಗ್ಯ ಕಳೆದುಕೊಂಡು ಒಂಟಿಯಾದ ಬದುಕಿಗೆ ನಿರಾಸಕ್ತಿಯೇ ಆಸ್ತಿಯಾದುದು. ಮುತ್ತೈದಿ ಸಾವು ತನ್ನದಿರಬೇಕೆಂದು ಸಿಕ್ಕ ಸಿಕ್ಕ ದೇವರು ಗಳಿಗೆ ಬೇಡಿ ಕೊಂಡುದುದು ನಿರರ್ಥಕವಾಗಿತ್ತು. ಇದಕ್ಕೆ ಕಠೋರವಾಗಿ ಗಂಡನ ನೆನಪಲ್ಲಿ ದಿನಕ್ಕೊಂದು ಸಲ ಊಟ ಮಾಡುವ ವ್ರತವನ್ನು ಕಳೆದ ಹತ್ತು ವರುಷಗಳಿಂದ ಕೈಗೊಂಡು ಬಂದುದು ಇವಾಗ ಕೈಗೆಟುಕಿದ ಸಿದ್ದಿಯಾಗಿತ್ತು. ಆದ್ರೆ ಡಾಕ್ಟರರುಗಳು ಮೇಲಿಂದ ಮೇಲೆ ತಪಾಸಣೆ ಮಾಡ್ತಾ ''ಎಲ್ಲವೂ ಸರಿ ಇದೆ. ಊಟ ಯಾಕೆ ಮಾಡ್ತಾ ಇಲ್ಲ ಎಂಬುದು ನಮಗೊಂದೂ ತಿಳಿತಾ ಇಲ್ಲ'' ಎಂದು ತಮ್ಮ ನಿಸ್ಸಹಾಯಕತೆ ಮಕ್ಕಳ ಮುಂದೆ ಚೆಲ್ಲಿದ್ದರು. ಜೊತೆಗೆ ಮೇಲಿಂದ ಮೇಲೆ ಗ್ಲೂಕೋಸ್ ಹಚ್ಚುವುದಂತು ಮನಸಿಗೆ ಎಲ್ಲಿಲ್ಲದ ಕಿರಿಕಿರಿಯಾಗಿತ್ತು. ಆದರೇನು ಮಾಡೋದು ? ಬ್ಯಾಡ ಅಂದ್ರೂ ಮಕ್ಕಳು ಕೇಳವಲ್ಲರು.

''ನೋಡ್ ಯವ್ವಾ'' ನಿನ್ ಇಚ್ಛೆ ನೀ ಉಂಡ್ರ ಛಂದ ಅದ. ಇಲ್ಲಾ ಅಂದ್ರs ಏಸ್ ಯಾಕ್ ರೊಕ್ಕಾ ಹೋಗಲ್ಲು ಇಲ್ಲೇ ದವಾಖಾನ್ಯಾಗೆ ನಿಂಗ ಇಡ್ತೀವಿ. ಆರೈಕೆ ಮಾಡ್ತೀವಿ'' ಅಂತ ಎರಡನೆಯ ಮಗ ದಿನಕ್ಕೆ ಮೂರ್‍ನಾಲ್ಕು ಬಾರಿ ಹೇಳ್ತಾ ಇದ್ದ.

ಇವ್ನ ಮಾತಿಗೆ ಸಿಟ್ಟು ಬರ್‍ತಿತ್ತು.''ಮನ್ಯಾಗ ಒಯ್ದು ಸೇವಾ ಮಾಡಾರಿ ಅಂಬಲ್ರಿ. ಅದು ಬಿಟ್ಟು ದವಾಖಾನ್ಯಾಗ ಏನ್ ಸೇವಾ ಮಾಡ್ತೀರೋ'' ಎಂದು ಚೀರಿ ಹೇಳಬೇಕೆಂದರೂ ಮನಸಿಗೆ ಗವಾ ಸಿಗಲಿಲ್ಲ.

ಗಿಳಿ ಹಂಗ ಎಲ್ಲೋರಿಗು ಹೇಳಿದ್ರೂ ಒಬ್ರೂ ಕೇಳಲ್ರೂ. ಕುಣಕುಣಿದು ಎಲ್ಲೋರು ಬ್ಯಾರೆನೆ ಆಗಬೇಕಂತಾರ. ಬ್ಯಾರೆ ಆಗೋದ್ರಾಗ ಇವುಕ ಏನ್ ಖುಷಿಯೋ ಏನೋ ದೇವರೆ ಬಲ್ಲ.

''ಮನೆಗೆ, ಮನೆಗುರುಗಳು ಬಂದಾಗಲೆಲ್ಲಾ ಪಾಂಡೋರ ಹಿಂದ ಶ್ರೀ ಕೃಷ್ಣ ಇದ್ಹಾಂಗ ನನ್ ಮಕ್ಕಳ ಮ್ಯಾಲ ತಮ್‌ದು ನಿಗಾ ಇರಬೇಕು ಯಪ್ಪಾ'' ಅಂದಾಗ ಅವರು ನಕ್ಕು ಎಷ್ಟು ಸಲೀಸಾಗಿ ಹೇಳಿದ್ರು : ''ಯಲ್ಲಕ್ಕೂ ಯ್ಯಾಳೆ ಅದ ಮಗ. ಯಾವುದು ಯಾವ ಯಾವ ಕಾಲಕ್ಕ ಏನ್ ಆಗಬೇಕೋ ಅದು ಆಯ್ತಾದ. ಇಲ್ಲಿ ಯಾರ್ ಕೈಯಾಗೂ ಯಾನೂ ಇಲ್ಲ. ಅದು ಎಲ್ಲಾ ಆ ಮ್ಯಾಲಿನವನ ಮರ್ಜಿ. ಈ ಆಟದಾಗ ನಾವೆಲ್ಲಾ ಪಾರಟಧಾರಿಗಳು.'' ನಿರ್ವಿಕಾರವಾಗಿ ಹೇಳೋದು ಮನಸಿಗಿ ಛಂದ ಅನಿಸಲಿಲ್ಲ. ಆದ್ರ ಅವರೆಷ್ಟಾದರು ಮನೆ ಗುರುಗಳು ತಾನೆ ? ದಾರಿ ತೋರುವವರು.

ಸೊಸೆಯಂದಿರಂತೂ ತಮ್ಮ ತಮ್ಮಲ್ಲೆ ಕದ್ದು ಮಾತಾಡುತ್ತಿದ್ದರು. ಎಷ್ಟೋ ಸಲ ಕಿವಿಯಾರೆ ಕೇಳಿದ್ದೂ ಆಗಿತ್ತು. ''ಇವ್ರು ತಮ್ಮ ಮೈದುನ ನೆಗೆಣಿಯವರ ಜೊತೆ ಬ್ಯಾರೆ ಆಗಿಲ್ಲಾs ? ನಾವು ಬ್ಯಾರೆ ಆಗಬೇಕಂದುರಬಿ ಸುದರಾಸೇಗೊಡಲ್ರು. ಏನಾದರೊಂದು ನೆವನಾ ವಡ್ಡಿ ರೋಕುಸ್ತಾ ಅಡ್‌ಗಾಲೇ ಹಾಕ್ತಾರ...'' ತಮ್ಮೆಲ್ಲಾ ರಂಜ್ ನನ್ ಮ್ಯಾಲ ಹಾಕೋದು ನೋಡಿದ್ರ ಬ್ಯಾರೇ ಆಗೋದು ಇವರಿಗೆಷ್ಟು ಖುಷಿ !

ಆದುರ ನನ್ ಬಗ್ಗೆ ಯಾರಾದ್ರೂ ಯೋಚನೆ ಮಾಡ್ತಾರಾ ? ಇಲ್ಲ. ಖಂಡಿತ ಇಲ್ಲ.

ಈ ಮುದುಕಿ ಇರತನ ನಾವು ಬ್ಯಾರೆ ಆಗಬಾರದು ಅಂಬೋದಾಗಲಿ, ಯಾವ ಮಕ್ಕಳ ಬಲ್ಲಿ ಮುದುಕಿ ಇರಬೇಕು ಎಂಬುದಾಗಲಿ ಚಿಂತಿಸಿದವರೆ ಅಲ್ಲ. ತಮ್ಮ ತಮ್ಮ ಮನೆಗೆ ತಾವು ಮಹಾರಾಣಿಯರಾಗಿ ಮೆರೆಯ ಬೇಕೆಂದು ಸೊಸೆಯಂದಿರು ಬಯಸ್ತಾ ಇದ್ರ ಹೊಟ್ಟೇಲಿ ಹುಟ್ಟಿದ ಮಕ್ಕಳೆಲ್ಲಾ ತಮ್ಮ ತಮ್ಮ ಹೆಂಡ್ರ ಮಾತು ಕೇಳ್ತಾ,

# ಧಂಯಾಳ

**ಶಿವಕುಮಾರ ನಾಗವಾರ**



ಅವರು ಹೇಳಿದ ಹಂಗ ಕುಣಿಯೋದು ನೋಡಿ ಮನಸು ವಿಲಿವಿಲಿ ಒದ್ದಾಡ್ತದ. ಏನು ಮಾಡೋದು ? ಕೈಲಾಗಲ್ಲ ಮ್ಯಾಲಿಂದ ಸರಿಯಾಗಿ ಕಿವಿ ಕೇಳಲ್ಲ. ಕಣ್ಣು ಕಾಣಲ್ಲ. ಲಾಚಾರ ಆದ ಮ್ಯಾಲ ಮಾಡೋದೇನು ?

ಮಕ್ಕಳೆಲ್ಲಾ ಬ್ಯಾರೇ ಆಗೋದು ಅಂದ್ರೆ ತನ್ನೆಲ್ಲಾ ಅಧಿಕಾರ ಸೊಸೆಯಂದಿರರು ಕಸಿದುಕೊಳ್ಳುವುದೇ ಆಗಿತ್ತು. ತನ್ನ ಮನೆಯಲ್ಲಿ ತನ್ನ ಮಕ್ಕಳು ಕಣ್ಮುಂದೆ ಇರಬೇಕೆಂದು ತಾನು ಬಯಸಿದರೆ ಅವರ ಮನೆಯಲ್ಲಿ ನಾವಿರಬೇಕೆಂದು ಸೊಸೇರು ಬಯಸೋದಾಗಿತ್ತು.

''ಯಾರ ಮನೆಯಲ್ಲಿ ಅಂತ ಇರೋದು ? ಒಬ್ಬರ ಮನೆಯಲ್ಲಿ ಇದ್ದರೆ ಮತ್ತೊಬ್ಬರಿಗೆ ಹ್ಯಾಂಗನಿಸ್ತದೆ ? ನನಗೊಂದ್ವೇಳೆ ಪೆನ್‌ಶನ್ ಇರದಿದ್ರೆ ಇಟ್ಕೊಳತಿದ್ರಾ ?

ಒಬ್ಬರ ಮನೆಯಲ್ಲಿ ಇರೋದಂದ್ರೆ ಉಳಿದವರ ಮನಸಿನಾಗ ನಮ್ಮ ಅವ್ವಂದು ನಮ್ ಮ್ಯಾಲ ಜೀವ ಇಲ್ಲ ಅಂತ ತಿಳ್ಕೊಂಡ್ರೆ ಹ್ಯಾಗೆ ? ಮಗಳಂತು ಮ್ಯಾಲಿಂದ ಮ್ಯಾಲೆ ಹೇಳ್ತಾಳೆ : ಯವ್ವಾ ಒಬ್ಬರ ಬಲ್ಲಿ ಇದ್ದುರ ಮತ್ತೊಬ್ರಿಗಿ ಸಿಟ್ಟು. ಅದ್ಕ ನೀ ಸುಮ್ನೆ ನನ್ ಬಲ್ಲಿ ಇದ್ದು ಬಿಡು.'' ಆದುರ ಸಮಾಜ ಏನಂತಾದ? ಅಳಗಾ ಬಳಗಾ ಏನಂತಾದ ? ಗಣ ಮಕ್ಕಳ ಬಲ್ಲಿ ಇರಬೇಕಾ ಮುದುಕಿ? ಮನಿ ಹೆಣ್ ಮಗಳು ಮನ್ಯಾಗ ಇರಬೇಕಾ ? ಅಂತು ಸಾಯಾ ಯಾಳ್ಯಾಕ ಉಗುಳಿಸಿಕೊಳ್ಳಬೇಕಾ ? ಎಂಬ ಚಿಂತೆಯ ಹುತ್ತಿನಲಿ ಮಲಗಿದವಳಿಗೆ,

''ಅಮ್ಮಾs... ಅಮ್ಮಾs...'' ಯಾರೋ ಕೂಗಿದಂತಾಯಿತು.

ಎರಡು ಮೂರು ಸಲ ಕೂಗಿದ ಮೇಲೆ ಈ ದನಿ ಎಲ್ಲೋ ಯಾವಾಗೋ ಯಾರದೋ ಕೇಳಿದಂತೆ ಭಾಸವಾಗತೊಡಗಿತು. ಯಾರಿರಬಹುದು ? ಕಣ್ಣು ತೆರೆದು ನೋಡಬೇಕೆಂದರೂ ಎವೆಗಳು ಮೇಲೇಳವು.

''ಅವ್ವ ಎಷ್ಟು ಸೊರಗಿ ಹೋಗ್ಯಾಳ ? ನನಗ್ಯಾಕ ಹೇಳಿಲ್ಲ?'' ಬಂದಾಕೆ ಆರೋಪಿಸುತ್ತಿದ್ದಳು.

''ವೈನಿ, ಬಂದ್ ನೀವೇನು ಮಾಡೋರಿದ್ದಿರಿ. ನಿಮ್ ಕಚೇರಿ ಕೆಲಸ ಬಿಟ್ಟು ಬರಾಕ ಆಯ್ತದಾ ? ಈಗ ನಾವು ಹೇಳೋರೆ ಇದ್ದೀವಿ. ನಿವಾಗೆ ಬಂದ್ರಿ ಛಂದ ಆಯ್ತು.'' ಸುಮಂಗಲಾ ಸಮಧಾನಿಸುತ್ತಿದ್ದಳು.

''ಅಣ್ಣ ಬಂದಿಲ್ಲ?'' ಮತ್ತೆ ಸುಮಂಗಲಾ ಕೇಳಿದಳು.

''ಅವರ ಸ್ನೇಹಿತರು ಯಾರ್‍ಯೋ ನಿಮ್ ತಾಯಿಗಿ ಆರಾಮ ಇಲ್ಲಂತ ಕೇಳಿದಿನಿ. ನಿಜವೋ ಸುಳ್ಳೋ ಅಂತ ಕೇಳಿದಾಗ ಇಲ್ಲಿ ಮನೆಯವರಿಗೆ ನಿಮ್ಮಣ್ಣ ಫೋನು ಮಾಡಲು ಹರುಕು ಮುರುಕು ವಿಷಯಾನೆ ತಿಳಿಸಿದಿರಂತೆ. ನಂಗೆನೆ ಹೋಗಿ ಬಾ ಅಂದಿದಕ ಇಲ್ಲಿ ಬಂದು ನೋಡಿದರ ಅವ್ವಾ ತುಂಬಾ ಸೀರಿಯಸ್ಸಳೇ ಆಗಿದ್ದಾಳ...''

''ಅರೇ... ಇವಳು... ಇವಳು... ರಜಿಯಾ ! ತಾನೇ ?''... ಮುದುಕಿಯ ಗಂಟಲಲ್ಲಿ ಶಬ್ದಗಳು ಸುಳಿದಾಡಿದವು.

''ರಾಜಮ್ಮಾs...'' ಕರೆದಳು. ಮತ್ತೆ ಕರೆದಳು. ಆದರೆ ಯಾರೊಬ್ಬರು ಕೇಳಿಸಿಕೊಳ್ಳೋದೆ ಇಲ್ಲ. ತಾನು ಕರೆದುದು ತನಗೆ ಕೇಳಿ ಬರ್‍ತಾ ಇದ್ದರು ಇವರ್‍ಯಾಕೆ ಕೇಳಿಸಿಕೊಳ್ತಾ ಇಲ್ಲ ಎಂಬುದು ದೊಡ್ಡ ಪ್ರಶ್ನೆಯಾಯಿತು.

ರಾಜಮ್ಮ ಯಾವಾಗ ಬಂದಳು? ರಾಜಮ್ಮಳ ಗಂಡನ ನೆನಪು ನುಗ್ಗ ತೊಡಗಿತು.

ನಡಬರಕಿನ ಮಗ ಓದಲು ಪ್ಯಾಟಿಗಿ ಹೋದವನು ನೌಕರಿ ಮಾಡ್ತಾ ಅಲ್ಲೇ ನೆಲೆ ನಿಂತವನು. ಅಪ್ಪನ ವಿರೋಧ ಕಟ್ಟಿಕೊಂಡೆ ತುರುಕರ ಪೋರಿಗೆ ಮದುವೆ ಆಯ್ತಿನಂತ ಹಟ ಹಿಡಿದು ಮದುವೆ ಆದವನು.

ಇದಕ ಮುದುಕನ ಹಾರಾಟವೆಷ್ಟು? ಕೋಪವೆಷ್ಟು? ಹೇಳಲು ಬಾರದಂತಹುದು. ''ದೇವು ನನ್ನ ಮುಂಡಾಸಿ ಕೆಳಗ ಹಾಕ್ಯಾನ. ನಮ್ಮ ಅಳಗಾ ಬಳಗಾದ ಎದುರು ಸಮಾಜದ ಎದುರು ನನ್ನ ಪಾರ ನನ್ನ ಮಾತು ಕೇಳಾಲ ಅಂಬೋದು ಸಾಬೀತು ಮಾಡ್ಯಾನ. ''ಜವಾನಿ ದೌರದಾಗ ಹಾದಿ ತಪ್‌ಬ್ಯಾಡೋ'' ಅಂತ ಬುದ್ಧಿವಾದ ಹೇಳಿದುದಕ ನಮಗೆನೆ ಬಿಟ್ಟು ಹೇಳದೆ ಕೇಳದೆ ಮದುವೆನೆ ಆಗಬೇಕಾ ? ನಮ್ ಪದ್ಧತಿ ಹಂಗ ಮದುವೆ ಆದುರ ಆ ಬೀಗರಿಗೆ ಅವರ ಸಮಾಜದಲ್ಲಿ ಅವರಿಗಿ ಅವಮರ್ಯಾದೆ. ಅವುರ ಪದ್ಧತಿ ಹಂಗ ಮದುವೆ ಆದುರ ನಮ್ಮ ಸಮಾಜದಲ್ಲಿ ನಮಗೆ ಅವಮರ್ಯಾದೆ ''ಹಿಂಗಾದ ಮ್ಯಾಲ ನೀ ಹ್ಯಂಗ ಮದುವೆಯಾಗೋದು?'' ಎಂದುದಕ, ''ಸರ್ಕಾರಿ ಧಫ್ತರದಲ್ಲಿ ಮದುವೆ ಯಾಗೋದ? ಇದು ಅವ್ನಿಗಿ ಸರಿ ಇರಬಹುದು. ಆದುರ ಹಡೆದ ತಾಯಿ ತಂದಿಗಿ, ಬಿಟ್ಟು ಈ ರೀತಿ ಮದಿ ಆಗೋದು ನನಗಂತು ಪಸಂದ ಇಲ್ಲ ನೋಡು. ಈ ಪೋರಿಗರ ತಿಳಿಬಾರದ? ತಾಯಿ ತಂದಿಗಿ, ನಮಗ ಬಿಟ್ಟು ದೇವೂನ ಜೊತೆ ಹ್ಯಾಗಿರ್‍ತಾಳೋ ಆ ದೇವರಿಗೆ ಗೊತ್ತು. ಇದು ಏಟೇಟು ಸರಿಯಲ್ಲ. ಮಿಂಯ್ಯಾ ಬಿಬೀ ರಾಜೀ ಆದ ಮ್ಯಾಲ ಅಲ್ಲಿ ಕಾಜಿ ಕೆಲ್ಸ ಇರಲಿಕ್ಕಿಲ್ಲ ನಿಜ. ಆದುರಬಿ ತಾಯಿ ತಂದೆಯರಿಗಂತು ಈ ಸಂಬಂಧ ಬಿಡಲಾಕ ಬರ್‍ತದಾ? ದೇವು ಯಾಕ್ ಹಿಂಗ್ ಮಾಡದಾ?''

''ಮದಿ ವಲ್ಲ ವಲ್ಲ ಅಂಬೋನು ಮದಿಯಾದರು ಆದ್ನಲ್ಲ ಬಿಡು ಅದ್ಯಾಕ ವೋಟ್ ಬೇಜಾರು ಮಾಡ್ಕೋತಿ. ಅಂದುರ್‌ಬೀ ನನ್ ಮಗ ಶ್ಯಾಣೆನೆ ಹನ. ನೀವು ಬೀಗರು ಯಾರೂ ಬೇಜಾರು ಮಾಡ್ಕೋಬಾರದಂತ ದಫ್ತರದಾಗೆ ಮದುವಿ ಆಗ್ಯಾನ'' ಇದಕ ಮುದುಕನ ಜಬಾನೇ ಜಪ್ತ ಆಗಿ ಹೋಯ್ತು. ಆವಾಗ ಮುದುಕ ತನ್ನನ್ನು ಘುರಕಾಸಿ ನೋಡೋ ರೀತಿ ಮರೆಯದಂತಹುದು.

ತನ್ನ ಚಪ್ಪಲಿ ಹಚ್ಚಿ ತಾನೇ ಹೊಡ್ಕೊಂಡ ಹಂಗ ಆಯ್ತೋ ? ಅಥವಾ ಈ ಮುದುಕಿ ಏಟ್ ಹುಚ್ಚ ಅದ ಅಂತೋ ?... ಭವಿಷ್ಯದಾಗ ದೇವೂನ ಕುಟುಂಬ ಹ್ಯಂಗ ನಡಿತಾದ ಅಂತೋ ?... ಇನ್ನೂ ಏನೇನೋ ತಲೆಗೆ ಹಚ್‌ಕೊಂಡಿದ್ದು ಈ ಮುದಿಕಿಗಿ ಹ್ಯಾಗ ಹೇಳಿದ್ರ ತಿಳಿತದೋ ಅಂತೋ ಒಟ್ಟಾರೆ ಆವಾಗಿನ ಮುದುಕನ ಮುಖದಲ್ಲಿ ಆತನನ್ನು ತಿಳ್ಕೋಮಾದು ತನ್ನಿಂದ ಸಾಧ್ಯವೇ ಆಗ್ಲಿಲ್ಲ.




ರಜಿಯಾ ಈಗ್ಯಾಕೆ ಬಂದಳು ? ಮದುವಿ ಆದ ಮ್ಯಾಲ ಈ ಕಡಿ ಹಣಿಕಿ ಹಾಕಲ್ದವಳು ತನ್ನ ತವರ್‍ಮನೆಯಿಂದಲು ಗಂಡನೂರಿನಿಂದಲು ದೂರ ಇದ್ದವಳು ಇವಾಗ ಅದು ಹ್ಯಾಗೆ ಬಂದಳು ? ಏನು ಮಾಡುವವಳು ಇದ್ದಾಳೆ ? ತಾನು ಸಾಯೋದು ಗೊತ್ತಾಗಿ ಪಾಲುಕೇಳಲು ಬಂದಿರ ಬಹುದೇ ? ದೇವೂನೂ ಬಂದಾನೋ ಇಲ್ಲ ಇವಳೊಬ್ಬಳೆ ಬಂದಾಳೋ ? ಪಂಚೇತಿ ಹಾಕಿ ಹೊಲಮನಿ ಕೇಳಲಿಕ್ಕೆನೆ ಬಂದಿರಬೇಕು. ಆದ್ರ ಈ ಹಳ್ಳಿಯ ಆಸ್ತಿ ತಕೊಂಡು ಅವಳೇನ್ಮಾಡ್ತಾಳೆ ? ಗಂಡ ಹೆಂಡಿರಿಬ್ಬರು ಸರ್ಕಾರಿ ನೌಕರಿ ಮಾಡೋರು ಇವರಿಗೇನು ಕಮ್ಮಿಯದ ? ಭಾಳ ಮಾಡಿ ರಜಿಯಾ ಪಾಲು ಕೇಳಾಕ ಬರಲಿಕ್ಕಿಲ್ಲ. ಇಲ್ಲಿ ಅವಳಿಗಿ ಯಾರು ಗೊತ್ತು ಹರ ? ಮದುವಿಯಾದ ಮ್ಯಾಲ ಇದೇ ಮೊದಲ ಸಲ ಬಂದವಳಿಗೆ ನೆಂಟರಿಷ್ಟರು ಗೊತ್ತಿಲ್ಲದ ಮ್ಯಾಲ ಪಾಲು ಹ್ಯಂಗ ಯಾರಬಲ್ಲಿ ಪಡಿತಾಳ ?

ಎರಡು ಮಕ್ಕಳ ತಾಯಿಯಾದ ರಜಿಯಾ ಇಲ್ಲಿತವ ಗಂಡನೂರಿಗೆ ಹಣಿಕಿಹಾಕಿಲ್ಲ ಅಂದ್ರ ಬಂದುದರಲ್ಲಿ ಏನೋ ರಾಜ್ ಅದ.

ಥೆ ! ಹಿಗೆಲ್ಲಾ ನಾನ್ಯಾಕ ಇಚಾರ ಮಾಡಬೇಕು. ಇವತ್ತಿಲ್ಲ ನಾಳೆ ನಾನು ಶಿವನ ಪಾದ ಸೇರುವವಳು. ಜಾತಿ ಧರ್ಮ ಬದಲಾದರೇನಾಯ್ತು? ರಜಿಯಾ ಏಟಾದರು ತನ್ನ ಸೊಸೆ ತಾನೆ ? ಪಾಪ ಈ ಪೋರಿಯಾದರೂ ಏನು ಮಾಡಿತು. ದೇವೂನೆ ಮೆಚ್ಯಾನ ಅಂದ ಮೇಲೆ ಅವಳೂ ದೇವೂಗೆ ಮೆಚ್ಚಿ ತನ್ನ ಧರ್ಮ ಬಿಟ್ಟು ಬಂದಾಳ ತಾನೇ ?

ಸುರು ಸುರು ರಜಿಯಾಳ ಮ್ಯಾಲ ನಂಗೂ ಏಟ್ ಸಿಟ್ಟು ಬಂದಿತ್ತು. ಪಾರುಗ ಹಾದಿ ತಪಸ್ಯಾದ ಆವಾರಾ ಪೋರಿ ಅಂತಿದ್ದೆ. ಆದರೆ ರಜಿಯಾ ಅಂತಹವಳಲ್ಲ ಎಂಬುದು ಅವಳಲ್ಲಿಗೆ ಹೋದ ಮ್ಯಾಲ ತಾನೇ ಗೊತ್ತಾದದ್ದು.

''ಅಂಗಾಲಿಗಿ ಹೇಸಿಗಿ ಇಲ್ಲ. ಕಳ್ಳೀsಗಿ ನಾಚಿಕಿ ಇಲ್ಲ'' ಮಗನ ಕಕಲೋತಿಯಲ್ಲಿ ದೇವೂ ನಮ್ಮಿಂದ ಛಯಾಳಾಗಿಹೋದ್ರು ತಾನು ಮಾತ್ರ ಹರಿದು ಹರಿದು ಮಗನಲ್ಲಿಗೆ ಹಲವು ಸಲ ಹೋಗಿ ಬಂದು ಮೊಮ್ಮಕ್ಕಳಿಗಿ ಆಡಿಸಿ ಬಂದಿದ್ದು ಉಂಟು. ಜಾತಿ, ಧರ್ಮದಲ್ಲಿ ರಜಿಯಾ ಎಷ್ಟು ದೂರವಾಗಿದ್ದಳೋ ಸೊಸೆಯಾಗಿ ಅವಳು ತನಗೆ ಜೀವ ಕಡದು ಕಕಲೋತಿ ಮಾಡೋದು ನೋಡಿ ತನಗರಿಯದಂತೆ ರಾಜಮ್ಮಳಾಗಿ ! ತನ್ನೆದೆಯಲ್ಲಿ ಜಾಗ ಪಡೆದುಕೊಂಡವಳಾಗಿದ್ದಳು.

''ರಾಜಮ್ಮಾs... ಯಾವಾಗ ಬಂದಿ ಬೇಟಾ?'' ಮಾತಾಡಿದಳು.

ಯಾರೂ ಗಮನ ಕೊಡಲಿಲ್ಲ. ಮತ್ತೆ ಕರೆದಳು.

ಉಹೂಂ... ಯಾರೊಬ್ಬರು ತನ್ನ ಮಾತು ಕೇಳವಲ್ರು. ರಾಜಮ್ಮಳು ಕೇಳಬಾರದೆ ?

ತಾನು ಮಾತಾಡಿದುದು ಕೇಳಲಿಕ್ಕಿಲ್ಲವೆಂದು ತಿಳಿದು ಮತ್ತೆ ಮತ್ತೆ ಮಾತಾಡಿದಳು. ಯಾರೊಬ್ಬರು ತನ್ನ ಕಡೆ ನೋಡಲಾರರು. ಮಾತೂ ಆಡಲಾರರು. ಇವರೆಲ್ಲರೂ ಒಂದೇ ಕಾಲಕ್ಕೆ ಕಿವುಡರಾಗಬೇಕೆ ?

ರಾಜಮ್ಮ ತನ್ನ ಮಕ್ಕಳಿಗೆ ಕರೆದುಕೊಂಡು ಬಂದಿಲ್ಲವೆಂದು ಕಾಣುತ್ತದೆ. ಇಲ್ಲ ಅಂದ್ರೆ ಅಜ್ಜೀ ಅಜ್ಜೀ ಅಂತ ತನಗೆ ತಬ್ಬಿಕೊಂಡು ಎಷ್ಟು ಜೀವ ಮಾಡ್ತಾ ಇದ್ದುವು. ಥೇಟ್ ದೇವೂನ ಹಾಗೆ ಮೊಮ್ಮಗಳಾದರೆ ರಾಜಮ್ಮಳಂತೆ ಮೊಮ್ಮಗ!

ದೇವು ಮೊಮ್ಮಕ್ಕಳ ಮ್ಯಾಲೆ ಯಾಕಿಷ್ಟು ಕಕಲೋತಿ ಹಾಕ್ತಾನೊ ತಿಳಿನೇವಲ್ದು. ಅವುಕ ಎತ್ಕೊಂಡು ಓಡಾಡಿದಷ್ಟು ಖುಷಿ. ಮಕ್ಕಳು, ಸೊಸೆಯಂದಿರು ತನ್ನ ಮಾತು ಕೇಳದಿದ್ದರೇನಾಯ್ತು ? ಮೊಮ್ಮಕ್ಕಳು ತಾ ಹೇಳಿದಷ್ಟೇ ಕೇಳ್ತಾವೆ ಎಂಬುದು ಅರಿವಿಗಿ ಬಂದಾಗಂತು ಮನಸಿಗಿ ಭಾಳ ಖುಸಿಯಾಗ್ತದೆ.

ವಲ್ಲ ವಲ್ಲ ಎಂದರು ತಿನ್ನಲು ಉಣ್ಣಲು ಮೊಮ್ಮಕ್ಕಳು ತನಗೆ ಒತ್ತಾಯಿಸೋದು... ಮಕ್ಕಳು ಸೊಸೆಯಂದಿರರು ಇದನ್ನ ನೋಡಿ ಮುಗುಳ್ನಗೋದು... ಎದ್ಯಾಗಿನ ಬೆಚ್ಚನೆಯ ನೆನಪುಗಳು.

ಎಲ್ಲಾ ಮೊಮ್ಮಕ್ಕಳು ಒಂದೆಡೆ ಕುಳಿತುಕೊಂಡು ಆಟ ಆಡೋದು ನೋಡಿದ್ರ... ಅವುಗಳ ತೊದಲು ನುಡಿಗಳಲ್ಲಿಯ ಜಗಳ... ತನ್ನ ಖಾಂದಾನದ ಕುಂಬಳ ಕುಡಿಗಳ ಕಾಣುವ ಮನಸಿಗೆ ಎಂತಹದೋ ಒಂದು ಸಂಭ್ರಮ. ಆದರೆ ದೊಡ್ಡವರಾದ ತನ್ನ ಮಕ್ಕಳೆಲ್ಲಾ ಬ್ಯಾರೇ ಆಗಬೇಕಂತ ಏನೇನೋ ಹುನ್ನಾರ ಮಾಡೋದು ಮಾತ್ರ ಎದೆ ಹಿಂಡುತ್ತಿತ್ತು.

''ರಜಿಯಾ, ಹಿಂಗ ಒಂದು ದಿನ ಬಂದು ವಯಸ್ಸಾಗಿ ನೆಲ ಹಿಡಿದವರ ಆರೈಕೆ ಮಾಡಿದ್ರ ಆಯ್ತಾ? ಹಣ್ ಹಣ್ ಮುದುಕರಿಗೆ ಸಂರಕ್ಷಣ ಮಾಡೋರಿಗೆ ಮಾತ್ರ ಗೊತ್ತು ಇದು ಏಟು ಕಷ್ಟದ ಕೆಲಸ ಅಂತ''... ಇತರೆ ಸೊಸೆಯಂದಿರರ ಪಿಸು ಮಾತುಗಳು!

ಮೂಗಿನಲ್ಲಿ ನಳಿಕೆ ಹಾಕಿ ಹಣ್ಣಿನ ರಸ ಕುಡಿಸೋದು, ಬಟ್ಟೆ ಬದಲಾಯಿಸೋದು, ಮಗ್ಗುಲೆ ಕುಳಿತು ತನ್ನಾರೈಕೆ ಮಾಡುವ ರಜಿಯಾಗೆ ಉಳಿದ ನೆಗೆಣ್ಣಿಯರು ಹಿಂದೆ ಹಿಂದೆ ಮಾತಾಡಿಕೊಳ್ಳುತ್ತಿದ್ದು ಕೇಳಿ ಕೇಳಿ ಮನಸ್ಸಿಗೆ ತುಂಬಾ ಖೇದವಾಗುತ್ತಿತ್ತು.

ಬಂದಾಗಿನಿಂದಲೂ ರಜಿಯಾ ತನ್ನ ಸುತ್ತಲೇ ಇರೋದು ಕಂಡ ನೆಗೆಣ್ಣಿಯರು, ''ನಾವು ಮುದುಕಿಗಿ ಮನಾರ ಕುಂಡಿ ತೊಳದಿವಿ. ಇವಳು ಎಷ್ಟು ಮಾಡ್ತಾಳೋ ಮಾಡ್ಲಿ. ಒಂದೆರಡು ದಿನ ಅಷ್ಟೆ. ಆಮ್ಯಾಲಂತು ನಮ್ಗ ತಪ್ಪಿದಲ್ಲ...'' ಈ ರೀತಿ ಮಾತಾಡಿಕೊಳ್ಳೋದು ಕೇಳಿ ಮನಸಿಗೆ ಖಾರದ ಪುಡಿ ತಿಂದಂಗ ಆಗ್ತಿತ್ತು.

''ನಾನಿಷ್ಟು ಇವರಿಗಿ ಒಜ್ಜಿ ಆಗೀನಾ ? ಎಷ್ಟೊಂದು ಬ್ಯಾಸರಿಸಿ ಮಾತಾಡ್ತಾರ. ಶಿವನೇ ನನ್ನ ಕಣ್ಣು ಬೇಗ ಮುಚ್ಚಿಸಪ್ಪಾ'' ದೇವರಲ್ಲಿ ಪ್ರಾರ್ಥಿಸಿದಳು.

ತನ್ನೆಲ್ಲಾ ಭಾವಂದಿರರಿಗೂ ನೆಗೆಣ್ಣಿ ನಾದಿನಿಯ ಅವರಿಗು ''ಅತ್ತೆಗೆ ಮನೆಗೆ ಒಯ್ಯೋಣ''ವೆಂದು ರಜಿಯಾ ಆಡುವ ಮಾತುಗಳು ಕೇಳಿ ಮನಸ್ಸು ಪ್ರಸನ್ನವಾಯಿತು.

ಪೊರಗೋಳು ಎಂತಹ ಹುಚ್ಚು ಅದಾವ. ತಾನಂತು ಹ್ಯಾಗೂ ಸಾಯುವವಳೆ. ಮನೆಯಲ್ಲಿಯೆ ಸತ್ತರೆ ತನ್ನ ಜೀವಕ್ಕೆ ನೆಮ್ಮದಿ ಸಿಗ್ತಾದೆಂಬುದು ಇವುಕ ತಿಳಿಯ ಬಾರದೆ? ಮನೆಗೆ ಒಯ್ಯೋದು ಬಿಟ್ಟು ಸುಮ್ಕೇ ದವಾಖಾನ್ಯಾಗ ಹಾಕ್ಯಾವ ಎಂಬ ದುಃಖ ಉಮ್ಮಳಿಸಿತು. ಆದ್ರ... ಕಣ್ಣೀರಿಲ್ಲದ ತನ್ನ ಈ ಸಂಕಟ ಇವರಿಗಿ ಹ್ಯಾಗ ತಿಳಿಬೇಕು? ಯಾರಿಗೂ ತಿಳಿನೇವಲ್ದು.

ಮನಸಿನ ಸಂಕ್ಟ ಶರೀರದಲ್ಲಿ ನೂಕಿ ಇವರಿಗೆ ಹ್ಯಾಗೆ ತಿಳಿಸಿ ಹೇಳಬೇಕೋ ಎಂಬುದು ತಿಳಿಯದಾಯಿತು. ವಿಲಿವಿಲಿ ಒದ್ದಾಡಿದಳೆ ವಿನಾ ಮನಸಿಗೆ ನೆಮ್ಮದಿ ಸಿಗಲಿಲ್ಲ.

''ಅಂದ್ರ, ನಾನು ಬರೋಡಾಕೆ ಒಯ್ಲಾ?'' ರಜಿಯಾಳ ಧ್ವನಿ!



''ಬರೋಡಾ!...''

ಜೀವ ಧಸ್ಸೆಂದಿತು. ''ರಾಜಮ್ಮ ನಿನ್ನ ಕಕಲೋತಿಗಿ ಸವಾಲ್ ಹಾಕಲಾರೆ. ಆದ್ರ ಆ ದೂರಿನ ಶಹರದಲ್ಲಿ ನನಗ ಇರಾಕ ಮನಸು ಬರಲ್ದು ಮಗ. ನಾ ಈಗ ಎಲ್ಲಿದ್ದಿನೋ ಇಲ್ಲೇ ಛಂದ್ ಇದ್ದೀನಿ.'' ಚೀರಿ ಹೇಳಿದಳು. ಅರೇ... ಒಬ್ರಿಗೂ ಕೇಳಿಯೆ ಹೋಗದು. ರಾಜಮ್ಮಳ ಕೈ ಹಿಡಿದು ಅವಳ ಕಣ್ಣಲ್ಲಿ ಕಣ್ಣಿಟ್ಟು ಹೇಳ ಬೇಕೆಂದರೆ ಕೈಗಳು ಮೇಲೆ ಏಳಲಾರವು. ಬಾಯಲ್ಲಿಯ ನಾಲಗೆ ಹೊರಳಲಾರದು. ಮತ್ತೆ ಮತ್ತೆ ಕೂಗಿದಳು. 'ಬರೋಡಾಕ್ಕೆ ಬ್ಯಾಡ ಮಗ, ನಾನಿಲ್ಲಿಯೆ ಇರ್ತೀನಿ.'

ಕ್ಷಣಗಳು ಉರುಳಿದ ನಂತರ ಮುದುಕಿಗೆ ನಾಚಿಕೆಯೆನಿಸಿತು.

ಎಂತಹ ಹುಚ್ಚು ಜೀವ ತನ್ನದು. ಒಂದು ಕಡೆ ಸಾಯಬೇಕೆಂದು ಅನ್ನ ನೀರುಗಳ ಸತ್ಯಾಗ್ರಹ ಕೈಗೊಳ್ಳುವ ತನಗೆ ಬರೋಡಾ ಏನು? ಬೀದರನ ಏಳೂರು ಹಳ್ಳಿಯಾದರೇನು?

ಹೌದು. ಬರೋಡಾದಲ್ಲಿ ತಿಂಗಳ ಕಾಲ ರಾಜಮ್ಮಳ ಎರಡನೆಯ ಬಾಣಂತನದಲ್ಲಿದ್ದುದು ನೆಂಪಾಗಿ ಇಂತಹ ಯೋಚನೆ ಮನಸ್ಸಿನಲ್ಲಿ ಕುಣಿಯಿತೇನೋ. ಪಾಪ ದೇವು ಮತ್ತು ರಾಜಮ್ಮ ಎಷ್ಟೊಂದು ಕಕಲೋತಿ ತೋರಿಸ್ತಾರೆ. ಆದರೇನು ಮಾಡೋದು ಪ್ಯಾಟಿಯಲ್ಲಿ ಮನಸೇ ಬಾರದು.

ಮೊಮ್ಮಕ್ಕಳು, ಮರಿ ಮಕ್ಕಳು, ನೆಗೆಣಿಯರು, ನೆಗೆಣಿಯರ ಮಕ್ಕಳು, ಭಾವ ಮೈದುನಂದಿರರು, ಸೊಸೆಯಂದಿರರು, ಆಜು ಬಾಜು ಮನೆಯವರು... ಜಮ್ಮs ಅಂತ ಎಲ್ಲೋರ ನಡಬರಕ ಅನು ಆಪತ್ ಹೇಳ್ತಾ ಹೇಳ್ತಾ ಮಾತಾಡ್ತ ಇದ್ದ ಈ ಜೀವsಕ ಬರೋಡ ಪ್ಯಾಟಿ ತನಗಂತು ಜೇಲ್‌ಖಾನಿಗೆ ಆಗಿತ್ತು ಅಂಬದು ಮತ್ತೆ ನೆನಪಿಗೆ ಬಂತು.

ಬಾಣಂತಿಯಾಗಿದ್ದುಕೊಂಡು ತನಗೆ ಒಂದ್ಚೂರು ಕೆಲಸ ರಾಜಮ್ಮ ಹಚ್‌ತಾ ಇರಲಿಲ್ಲ. ''ಇಲ್ಲಮ್ಮ, ನೀವು ಏನೂ ಮಾಡಬೇಡಿ. ನಿಮ್ಮ ಮೊಮ್ಮಗ ಮತ್ತು ಮೊಮ್ಮಗಳಿಗಿ ನೋಡ್ಕೊಂಡಿರ್ರಿ ಸಾಕು. ನಿಮ್ ಮಗ ನಿಮ್ಗ ಭಾಳ ಜೀವ ಮಾಡ್ತಾರ. ಈ ಆಶೀರ್ವಾದವೆ ನಿಮ್ಮ ಮೊಮ್ಮಕ್ಕಳಿಗಿ ಮಾಡಿ. ಇದು ನನಗೆ ತುಂಬಾ ಖುಷಿ ಕೊಡ್ತದೆ.''

ಇಂತಹ ಅದೆಷ್ಟೋ ರಾಜಮ್ಮಳ ವಿಚಾರಗಳಿಗೆ ಎದೆ ತುಂಬಿ ಬರ ತೊಡಗಿತು. ಬೆಳೆದ ತನ್ನ ಮಗನನ್ನ ಅಪಹರಿಸಿದ ತುರುಕರ ಪೋರಿ ರಜಿಯಾ ಕಾಪಾರಳೆಂದು ಬಗೆದಿದ್ದ ಮನಸ್ಸಿಗೆ ಆಘಾತವಾಯಿತು. ತನ್ನ ನಡೆ-ನುಡಿಯಿಂದ ನಾನು ನೀರಾ ಗುವಂತೆ ಮಾಡುವುದರ ಜೊತೆಗೆ ತನ್ನ ಮತ್ತು ದೇವೂನ ಮಧ್ಯವಿರುವ ತಾಯ್ತನದ ಕಕಲೋತಿಗೆ ಎಷ್ಟೊಂದು ಬಗೀತಾ ಇದ್ದಾಳೆ!

ನೆಗೆಣ್ಣಿಯರ ಸ್ವಭಾವ, ಭಾವ ಮೈದುನರ ಸ್ವಭಾವ, ಮಗಳು ಸುಮಂಗಲಾಳ ಕುಟುಂಬ ಎಲ್ಲದರ ಬಗ್ಗೆ ಕೇಳಿ ತಿಳಿದುಕೊಳ್ಳುವ ಕಕಲೋತಿ ತೋರಿಸುವ ಅವರ ಸುಖ-ದುಃಖಗಳ ಬಗ್ಗೆ ಮಾತಾಡುವ ಮಾವನ ಬಗ್ಗೆ ತಿಳಿದುಕೊಳ್ಳುವ ರಜಿಯಾ ರಾಜಮ್ಮಳಾಗಿ ಎದೆ ತುಂಬಿದಳು. ತನ್ನ ಮಗು ದೇವೂ ತಪ್ಪು ಮಾಡಿಲ್ಲ ವೆಂದು ಬಂಗಾರದಂತಹ ಪೋರಿಗಿ ತಂದು ತನಗೆ ಸೊಸೆಯಾಗಿ ತಂದಿರುವನೆಂದು ಆವಾಗಲೆ ಮನಸಿಗೆ ಖಾತ್ರಿಯಾಯಿತು.

ದನಗಳ ಖಂಡ ತಿನ್ನೋ ತುರುಕರ ಪೋರಿ ಕೈಯಿಂದ ಅಡುಗೆ ಉಣ್ಣೋದೆ? ಅದು ಗೋ ಮಾಂಸ! ದೇವುನ ಎದುರು ಬರೋಡಾಕ್ಕೆ ಬರುವಾಗ ಮೊದಲು ಹೇಳಿಕೊಂಡ ಮನಸಿನ ಈ ಅಳಲಿಗೆ ಅಂವ ಹೇಳಿದ ಸಮಾಧಾನ ಆವಾಗ ತನಗೆ ನೆಮ್ಮದಿ ತಂದಿರಲಿಲ್ಲ. ''ನೋಡವ್ವ, ನಿನ್ನೆಲ್ಲಾ ಸೊಸೆಯಂದಿರರಿಗಿಂತ ಚೆನ್ನಾಗಿ ಅಡುಗೆ

ಮಾಡ್ತಾಳೆ. ಅವರ ಜಾತಿ, ಕುಲದಾಗ ಮಾಂಸ ತಿನ್ನೋದು ಇರಬೇಕು. ಆದರೆ ರಜಿಯಾ ನನಗಾಗಿ ಅದೆಲ್ಲವನ್ನು ತ್ಯಾಗ ಮಾಡಿದ್ದಾಳೆ. ತ್ಯಾಗ ಮಾಡಿದಷ್ಟು ಬದುಕು ನಿರಾಳ ಅಂತ ನೀನಾಗೆ ಹೇಳ್ತಾ ಬಂದಿದ್ದು ತಾನೇ ? ಒಂದ್ಸಲ, ಒಂದೇ ಒಂದು ಸಲ ನಿನ್ನ ಸೊಸೆ ಬಲ್ಲಿ ಇದ್ದು ನೋಡು. ನಿನಗೆ ಸರಿ ಅನಿಸಿದರೆ ನಮ್ಮ ಬಲ್ಲಿ ಇರು. ಇಲ್ಲ ಅಂದ್ರ ಒಂದ್ ಗಳಿಗೀನು ಇರಬೇಡ.''

ಅಡುಗೆ ಮಾಡುವಾಗ ದಿನ ನಿತ್ಯ ಕೇಳಿ ಅಡುಗೆ ಮಾಡುವುದು. ಮನೆಯ ರೀತಿ ರಿವಾಜುಗಳ ಆಚರಣೆ ಗಳಲ್ಲಿ ತನಗೆ ಮಾನ್ಯತೆ ಕೊಡ್ತಾ ಆಚರಿಸುವುದು ನೋಡಿ ದಂಗಾಗಿ ಹೋಗುವಂತಾಯಿತು.

ತುಂಬಾ ಓದಿಕೊಂಡ ರಜಿಯಾ ತನ್ನಂಥ ಅನಪಢ ಜಂಗ್ಲಿ ಅತ್ತೆಗೆ ಮಾನ-ಮರಿಯಾದಿ ಕೊಟ್ಟು ಹಲವು ಸಂದರ್ಭಗಳಲ್ಲಿ ಕಳಕಳಿ ತೋರಿಸ್ತಾನೆ. ಹಲವು ಸಲ ತನ್ನ ನಡತೆ ಹಾಗೂ ನಂಬುಗೆಗಳಿಗೆ ತಿಳಿ ಹೇಳ್ತಾ ತಿದ್ದೋದು ಎದ್ವಾಗ ಬೇಚೈನ ಆಗಿತ್ತು. ಅವಳ ಈ ಹರ್‌ಕತ್‌ಗಳಿಗೆ ಒಮ್ಮೊಮ್ಮೆ ಬೇಜಾರಾದರೂ ಕಠೋರಾಗಲು ಮನಸ್ಸು ಒಪ್ತಾ ಇರಲಿಲ್ಲ. ಎಷ್ಟಾದರು ನನ್ನ ದೇವುಗೆ ಪ್ರಿಯವಾದವಳು.

ದೇವು ಅವಳ ಹೆಸರು ಹಿಡಿದು ಕರೆದಾಗಲೆಲ್ಲಾ ಕಿವಿಗಳಿಗೆ 'ರಜಿಯಾ' ಎಂದು ಕೇಳಿದರೆ ಕಣ್ಮನಗಳಲ್ಲಿ ರಾಜಮ್ಮಳಾಗಿ ತುಂಬ್ತಾ ಇದ್ದಳು.

ರಜಿಯಾ ಕೂಡ ತನ್ನ ಗಂಡನಿಗೆ 'ದೇವೂ' ಎಂದು ಕರೆದಾಗಲೆಲ್ಲಾ ತನಗೆ ಮುದುಕನ ನೆನಪಾಗುತ್ತಿತ್ತು. ಯಾವತ್ತು ಒಬ್ಬರಿಗೊಬ್ಬರು ಹೆಸರಿಂದ ಕರೆದವರೆ ಇಲ್ಲ. ತನ್ನವ್ವ, ಗಂಡನಿಗೆ ಹೆಸರಿಂದ ಕರೆದರೆ ಗಂಡನ ಉಮರ ಕಮ್ಮಿ ಆಗ್ತಾತ ಅಂತ ಹೇಳಿದುದಕೊ ಏನೋ ತಪ್ಪಿಯು ಮುದುಕನ ಹೆಸರು ಹಿಡಿದು ಕರೆಯುತ್ತಿರಲಿಲ್ಲ. ಆದರ ಇವತ್ತಿನ ಪೊರಗೋಳು ಒಬ್ರಿಗೊಬ್ರು ಹೆಸರು ಹಿಡಿದು ಕರೆಯುವುದರಲ್ಲಿಯೆ ಖುಷಿ ಪಡತಾರೆ.

ದೇವೂನ ಹೆಸರು ಹಿಡಿದು ರಜಿಯಾ ಕರೆಯು ವುದರಲ್ಲಿ 'ಗಂಡನಿಗೆ ಏಟೊಂದು ಹಚ್ಕೊಂಡಾದ ಪೋರಿ' ಅಂತ ಮನಸಿನಲ್ಲಿಯೆ ಎಷ್ಟೋ ಸಾರಿ ಅಂದುಕೊಂಡುದುಂಟು.

''ಇಂತಹದ್ರಾಗ ಹೆಂಗ್ ವಯ್ತೀರಿ ವೈನಿ.'' ಸುಮಂಗಲಾಳ ಮಾತುಗಳ ಕಡೆ ಧ್ಯಾನ ಹರಿಯಿತು.

''ಕಣ್-ಅರ ತೆರೆದು ಹಾಕಲಿ. ಕೈಕಾಲು ಸುಧ್ಯಕ ಆಡಸಳ್ಳು. ನಿಮ್ ತಮ್ಮ ನಂಗ ಅವುಗ ಆರಾಮ ಆಗಾತನ ಇಲ್ಲೆ ಇರಲಾಕ ಹೇಳ್ಯಾರ. ನೀವೇನೂ ಚಿಂತಿ ಮಾಡಬ್ಯಾಡ್ರಿ,'' ತನ್ನ ಗಂಡನ ಅನುಮತಿ ಪಡೆದೆ ತಾನು ಅವ್ವಳ ಆರೈಕೆಗೆ ನಿಂತುದಾಗಿ ಸುಮಂಗಲಾ ಹೇಳಿದಳು.

ತನ್ನ ನಾದಿನಿಯ ಮಾತುಗಳಿಗೆ, ''ಅದಕ್ಕಲ್ಲವ್ವ, ನಾನು ಬರೋಡಾಕ್ಕೆ ಒಯ್ಯೋ ಮಾತಾಡೋದು. ಇಲ್ಲಿ ಯಾರ ಮನೆಯಲ್ಲಿ ಇರಬೇಕು ?...'' ರಾಜಮ್ಮಳ ಮಾತುಗಳು ಕೇಳುತ್ತಲೆ ಮುದುಕಿಗೆ ಹೌಹಾರುವಂತಾಯಿತು.

''ಅಂದ್ರೇ... ಅಂದ್ರೇ.... ತನ್ನೆಲ್ಲಾ ಮಕ್ಕಳು ಬ್ಯಾರೆ ಬ್ಯಾರೆಯಾಗಿ ಭಯಳಾಗಿ ಹೋದರೇ! ಅಯ್ಯೋ ದೇವರೇ! ರಾಜಮ್ಮ ಅನ್ನೋದು ಸರಿಯೆ ಇದೆ. ನನ್ನ ಮನಿ ಉಜಾಡಾಗಿ ಹೋದ ಮ್ಯಾಲ ಇಲ್ಲಿ ನಾ ಯಾರ ಮನ್ಯಾಗ ಇರೋದು ?

ಒಮ್ಮಿಂದೊಮ್ಮೆಗೆ ಹಿಂದಿನ ದಿನ ಬಿದ್ದ ಕನಸು ನೆನಪಾಯಿತು : ಆ ಕನಸಿನಲ್ಲಿ ಮನಿ ಗುರುಗಳು ಬಂದು, ''ಆರಾಽಮಾ ಮಗ ?'' ಕೇಳಿದುದಕೆ ''ಎಲ್ಲಿ ಆರಾಮ ಅಪ್ಪೋರೆ, ನನಗ ಮನ್ಯಾಗ ಆರೈಕಿ ಮಾಡರೋ ಅಂತ. ಏಸ್ ಸಲ ಹೇಳದುರಬಿ ಬೊಂದಗೋಳ್ ನನ್ನ ಮಾತೇ ಕೇಳಲ್ರು. ಇಲ್ಲಿ ಸರಕಾರಿ ದವಾಖಾನ್ಯಾಗ ತಂದು ಹಾಕ್ಯಾರ ನೋಡ್ರಿ. ನನಗ ಮನಿಗಿ ಒಯ್ಲಾಕ - ಒಬ್ರೂ ತಯ್ಯಾರಿಲ್ಲ.''

''ಮಗಾಽ ಬದುಕಿನ ಒಂದು ದರವಾಜಾ ಮುಚ್ಚಿದರ ಮತ್ತೊಂದು ಖುಲಾಸ್ತಂದ. ಇದೇ ನಿಯತಿಯ ನಿಯಮ. ಅದಕ್ಯಾಕ - ತಲೆ ಕೆಡಸ್ಕೋತಿ'' ಥಕ್ಕನೆ ಅವರು ಮಾಯವಾದಂತೆ ಕನಸು ಒಡೆದಿತ್ತು!

''ಅಂದ್ರೇ ನಾನು ಬರೋಡಾಕ್ಕೆ ಹೋಗ್ಬೇಕಾಗುತ್ತೆ.''

ಅಂತ ಗುರುಗಳು ಹೇಳಿರಬಹುದಾ ?

ಹಂಗಾದುರ ತಾನು ಕೈಗೊಂಡ ಜೀವತ್ಯಾಗ ಸತ್ಯಾಗ್ರಹದ ಗತಿಯೇನು ? ದೂರದ ಪ್ಯಾಟಿಯಲ್ಲಿ ಇರ ಸೊಸಿ ಬಂದು ಕರೀತಿದ್ದಾಳೆ. ''ಅತ್ತೆಮ್ಮಾ, ನಿಮ್ಮ ಮಗನ ಮನ್ಯಾಗ ಇರಾಟ್ರಿ ನಡಿರಿ. ಕಣ್ ತೆರಿರಿ. ದೇವು ನಿಮ್ಗ ಕರಕೊಂಡು ಬಾ ಅಂದಾರ...'' ರಾಜಮ್ಮಳ ಎದೆ ಯಾಳದ ಮಾತುಗಳು ಮುದುಕಿಗೆ ಅಲುಗಾಡಿಸಿದವು.

ಇಲ್ಲಿಯವರೆಗೆ ಯಾವ ಸೊಸೆಯಂದಿರರು ಕರೆದಿರಲಿಲ್ಲ. ಗಣ ಮಕ್ಕಳಂತು ನೆನಪೂ ಮಾಡಿರಲಿಲ್ಲ.

ತನ್ನಿಂದ ಭಯಾಳಾದ ಮಕ್ಕಳು ಸೊಸೆಯಂದಿರರಲ್ಲಿ ರಾಜಮ್ಮ ದೇವೂನ ಮನೆಗೆ ಕರೀತಿದ್ದಾಳೆ!

ಕೈ ಕಾಲುಗಳಲ್ಲಿ ಧಂಡದಲ್ಲಿರುವ ಎಲ್ಲಾ ಶಕ್ತಿ ಮೆಲ್ಲ ಮೆಲ್ಲನೆ ನುಗ್ಗತೊಡಗಿತು. ಕೈಯ ಬೆರಳುಗಳು ಬೊಗಸೆ ಯಾಕಾರವಾಗಲು ಹವಣಿಸುವಂತೆ ಬಿಟ್ಟು ಬಿಟ್ಟು ಕಂಪಿಸ ತೊಡಗಿದವು. ಎಷ್ಟೋ ಸಲ ಕಣ್ಣು ತೆರೆಯಬೇಕೆಂದರೂ ತೆರೆಯದೆ ಇರುವ ಕಣ್ಣಿನ ಮೇಲ್‌ರೆಪ್ಪೆಗಳನ್ನು ಬಲವಾಗಿ ಮೇಲೇಳುವಂತೆ ಇವಾಗ ಅವಳ ಮನಸ್ಸು ಧ್ಯಾನಸ್ಥ ಗೊಳ್ಳತೊಡಗಿತು. ಜಡವಾಗಿ ಬಿದ್ದ ನಾಲಗೆ ಆಕುಂಚನ ವಿಕಸನಗಳ ತರಂಗಾವಸ್ಥೆಯಲ್ಲಿ ಹೊರಳಾಡತೊಡಗಿತು. ಆವಾಗ ಇದ್ದಕ್ಕಿದ್ದಂತೆ ಮೈಯಲ್ಲಿ ಅದೆಂತಹದೋ ವಿದ್ಯುತ್ ಸಂಚಾರ!

ಮೆಲ್ಲ ಮೆಲ್ಲನೆ ಕಣ್ಣಿನ ಮೇಲ್‌ರೆಪ್ಪೆಗಳು ಮುಚ್ಚುತ್ತಾ ತೆರೆಯುತ್ತಾ ತೆರೆದೆರಡು ಕಣ್ಣುಗಳು, ''ರಾಜಮ್ಮಽ!...'' ಅನ್ನೋ ಕ್ಷೀಣ ಸ್ವರ ತರಂಗಗಳಲಿ ನೆರೆದ ಸುತ್ತಲಿನ ಮಕ್ಕಳು ಸೊಸೆಯಂದಿರರಲಿ ರಜಿಯಾ ಸೊಸೆಯನ್ನು ಹುಡುಕತೊಡಗಿದವು.

ಈ ಮಧ್ಯ ಚಿಕ್ಕವಳಿದ್ದಾಗ ಅವಳವ್ವ ಹಾಡುವ ಹಾಡು ಕಿವಿಗಳಲ್ಲಿ ಗುಂಯ್‌ಗುಡತೊಡಗಿತು.

*ಗಿಡದಲ್ಲಿ ಗಿಡ ಹುಟ್ಟಿ*
*ಮರದಲ್ಲಿ ಮರ ಹುಟ್ಟಿ*
*ತಿನ್ನಾಕ ಬರದ ಹಣ್ಣು, ಬಲು ಚಂದ!*

**ಶಿವಕುಮಾರ ನಾಗವಾರ**
ಮನೆ ನಂ. ೧೭-೫-೪೫೧, ಸಂಗಮೇಶ್ವರ ನಗರ, ಗುಂಪಾ
ಅಂಚೆ : ಅಮಲಾಪೂರ, ಬೀದರ - ೫೮೫ ೪೦೩

## ಗಜಲ್

**ಹ**ರಿದ ಅರಿವೆಯ ಜೋಡಿಸುವ ಸೂಜಿ ಸಣ್ಣದೇನು ?
ಹರಡಿದ ದುರ್ನಾತ ಕಳೆವ ಗಂಧ ಕಾಣುವುದೇನು ?

ಬೆಂಕಿಕಡ್ಡಿ ಸಣ್ಣದು ನಿಜ, ಜಗವ ಸುಡಬಲ್ಲದು
ನಿಜರೂಪ ಹೇಳುವ ಕೈಗನ್ನಡಿ ಸುಳ್ಳೇನು ?

ಕತ್ತಿ ಸಣ್ಣದು ನಿಜ, ಕೊಯ್ಯುವ ಗುಣ ಬಿಡದು
ಮುಚ್ಚಿದ ಒಳಗಣ್ಣು ತೆರೆಸುವ ಕವಿತೆ ಮರೆಯದೇನು ?

ಕನಸು ಸಣ್ಣದು ನಿಜ, ಬದುಕಿಗೆ ಹೆದ್ದಾರಿ ಮೂಡಿಸುವುದು
ಜಗದ ದಾಹ ತಣಿಸುವ ಚಿಲುಮೆ ಉಳಿಯದೇನು ?

ಬೀಜ ಸಣ್ಣದು ನಿಜ, ಸಾವಿರ ಫಲ ಕೊಡುವುದು
ನೂರು ಮಾತು ಅಡಗಿಸಿಕೊಂಡ ಮೌನ ನಲಿಯದೇನು ?

ಹಣತೆ ಸಣ್ಣದು ನಿಜ, ಅರಿವಿನ ಬೆಳಕ ಹಂಚುವುದು
'ದಿನ್ನಿ' ದಿನವೂ ಕಾಡಿ ಮೆತ್ತಗಾಗಿಸುವ ನೆನಪು ಅಳಿವುದೇನು ?



**ಡಾ|| ದಸ್ತಗೀರಸಾಬ್ ದಿನ್ನಿ**, ಸಹಾಯಕ ಪ್ರಾಧ್ಯಾಪಕರು, ಸರಕಾರಿ ಪ್ರಥಮ ದರ್ಜೆ ಕಾಲೇಜು, ರಾಯಚೂರು



# ವರ್ಗಗಳು ಅಪ್ರಸ್ತುತ ಎಂಬುದು ಒಂದು ಮಿಥ್ಯೆ

ಕಲ್ಪನಾಲೋಕಗಳು ಮಾರ್ಕ್ಸ್‌ವಾದಿಗಳಿಗೆ ರಂಜನೆ ನೀಡುವುದಿಲ್ಲ; ಹಾಗೆಯೇ ಅಸ್ತಿತ್ವದಲ್ಲಿರುವ ಸಮಾಜದ ವಾಸ್ತವಗಳನ್ನು ಬಿಟ್ಟು ಕಲ್ಪನೆಗಳಿಗೆ ಜೋತು ಬೀಳುವುದು ಸಹ ಅವರಿಗೆ ರುಚಿಸದು. ಮುಖೇಶ ಅಂಬಾನಿ ಚೆಡ್ಡಿ ಧರಿಸಿ ಮುಂಬೈಯ ಮೆರೀನ್ ಡ್ರೈವ್‌ನಲ್ಲಿ ಅಡ್ಡಾಡುತ್ತಾನೆ, ನಾರಾಯಣಮೂರ್ತಿಗಳು ಗಾಂಧಿಬಜಾರಿನಲ್ಲಿ ಅವರೆಕಾಯಿ ಕೊಳ್ಳುತ್ತಾರೆ, ಪ್ರೇಂಜಿ ತನ್ನ ಕಂಪನಿಯ ನೌಕರರೊಡಗೂಡಿ ಟೆನ್ನಿಸ್ ಆಡುತ್ತಾರೆ; ಆದ್ದರಿಂದ ಸಾಮಾಜಿಕ ವರ್ಗ ಎಂಬ ಮಾತು ಅಬದ್ಧ. ಹೀಗೆ ತರ್ಕ ಬೆಳೆಸುವುದು ಬಾಲಿಶತ್ವದ ಸೂಚನೆ. ಮಾರ್ಕ್ಸ್‌ವಾದವು ವರ್ಗಗಳನ್ನು ಗುರುತಿಸುವುದು ಉಡುಪು, ಆಟ, ತರಕಾರಿಯ ಆಯ್ಕೆ, ಮುಂತಾದವುಗಳ ಆಧಾರದಿಂದಲ್ಲ. ವರಮಾನ, ಉದ್ಯೋಗದ ಸ್ವರೂಪ, ಇವು ಸಹ ವರ್ಗ ಸೂಚಕಗಳಲ್ಲ. ಅಥವಾ, ಮನೆಯಲ್ಲಿ ಎಂಥ ನಾಯಿ ಸಾಕಿದ್ದಾರೆಂಬುದು ಕೂಡ ಲೆಕ್ಕಕ್ಕೆ ಬರುವುದಿಲ್ಲ. ಸಮಾಜವಾದಕ್ಕಾಗಿ ಹೋರಾಟ ಮಾಡುವವರು, ಮಾಡಿ ಹುತಾತ್ಮರಾದವರು, ಇವಕ್ಕೆಲ್ಲಾ ಸೊಪ್ಪು ಹಾಕುವುದಿಲ್ಲ.

ಅಮೆರಿಕಾದಲ್ಲಿ ವರ್ಗವೆಂದರೆ ''ಮನೋಭಾವ'' ಎಂಬರ್ಥ ನೀಡುವುದುಂಟು. ನೀವು ಜಾನಪದ ಮೇಳಕ್ಕೆ ಹೋಗುತ್ತೀರೋ ಅಥವಾ ಬೆಂಗಳೂರು ಅರಮನೆಯ ಆವರಣದಲ್ಲಿ ನಡೆಯುವ ರಾಕ್ ಸಂಗೀತಕ್ಕೆ ಹೋಗುತ್ತೀರೋ ಎಂಬುದು ನಿಮ್ಮ ವರ್ಗದ ಗುರುತು ಎಂಬ ಅಭಿಪ್ರಾಯ ಅಲ್ಲಿ ಪ್ರಚಲಿತವಾಗಿದೆ. ಅಸ್ಪೃಶ್ಯತೆಯನ್ನು ಮಾನ್ಯ ಮಾಡುವುದು ಇಲ್ಲವೆ ಧಿಕ್ಕರಿಸುವುದು 'ಮನೋಭಾವ', ಆದರೆ ಅದು ವರ್ಗಸೂಚಕವಲ್ಲ. ವರ್ಗವು ಭಾವದ ವಿಚಾರವಲ್ಲ, ಅದು ಏನು ಮಾಡುತ್ತೇವೆಂಬುದರ ವಿಚಾರ. ಉತ್ಪಾದನಾ ವಿಧಾನದಲ್ಲಿ ನಿಮ್ಮ ಸ್ಥಾನ ಯಾವುದು ಎಂಬುದು ಪ್ರಸ್ತುತವೇ ವಿನಾ ನಿಮ್ಮ ಸಂಬಳವೊಂದೇ ಅಳತೆಗೋಲಲ್ಲ. ಒಬ್ಬ ವ್ಯಕ್ತಿ ಗುಲಾಮನೋ, ಅರ್ಧ ಎಕರೆ ಭೂಮಿ ಹೊಂದಿರುವ ರೈತನೋ, ಬೇರೆಯವರ ಭೂಮಿಯಲ್ಲಿ ಕೂಲಿ ಮಾಡುವವನೋ, ಭೂಮಾಲಿಕನಾಗಿ ಮನೆಯಲ್ಲಿ ಕೂತು ಹೊಟ್ಟೆಯನ್ನು ಗುಡಾಣ ಮಾಡಿಕೊಳ್ಳುತ್ತಾನೋ, ಚಿಕ್ಕ ಅಂಗಡಿಯ ಮಾಲಿಕನೋ, ದೊಡ್ಡ ಕಂಪನಿಯ ಬಂಡವಾಳ ಹೂಡಿರುವ ಖದೀಮನೋ, – ಇವು ವರ್ಗದ ಪ್ರಶ್ನೆಗೆ ಪ್ರಸ್ತುತ. ಯಾವನೋ ರಾಜಕುಮಾರ ಕುಡಿದು ಚರಂಡಿಯಲ್ಲಿ ಬಿದ್ದಿರುತ್ತಾನೆಂಬುದು ಮಾರ್ಕ್ಸ್‌ವಾದದ ವರ್ಗ ವಿಭಜನೆಯ ವಿಚಾರಕ್ಕೆ ಎಳ್ಳಷ್ಟೂ ಮುಖ್ಯವಲ್ಲ. ಬೆಂಗಳೂರಿನ ನಾಲ್ಕು ದೊಡ್ಡ ಬಂಡವಳಿಗರು ಒಬ್ಬ ಹಾವಾಡಿಗನೊಡನೆ ಒಂದು ಗಂಟೆ ಕಳೆದರೆ ಅವರು ಸೇರುವ ವರ್ಗದಲ್ಲಿ ಪಲ್ಲಟವೇನೂ ಆಗಿಹೋಗುವುದಿಲ್ಲ.

ಆದ್ದರಿಂದ ಯಾರೋ 'ದುಡಿಯುವ ವರ್ಗ' ಎಂಬುದೇನೂ ಈಗ ಉಳಿದಿಲ್ಲ ಎಂದಬ್ಬರಿಸಿದರೆ ವಸ್ತುಸ್ಥಿತಿ ತಲೆಕೆಳಗಾಗುವುದಿಲ್ಲ. ನಮ್ಮ ಸಾಹಿತ್ಯ ಪರಂಪರೆಯಲ್ಲಿ ರಾಜರ, ಭೂಮಾಲಿಕರ, ವರ್ಣನೆಗಳು ಬೇಕಾದಷ್ಟಿವೆ. ಅವರ ಆಟೋಪ, ರಸಿಕತನ, ದಾನಶೂರತ್ವ, ಎಲ್ಲಾ ವಿವರವಾಗಿ ಬಿಚ್ಚಿಡಲ್ಪಟ್ಟಿವೆ. ಆದರೆ ಅಂತಹ ರಾಜರು, ಭೂಮಾಲಿಕರು, ಇಂದು ಇಲ್ಲವಲ್ಲ! ಟಾಲ್‌ಸ್ಟಾಯ್ ಚಿತ್ರಿಸಿದಂತಹ ಭೂಮಾಲಿಕರೂ ಇಲ್ಲ, ಜೇನ್ ಆಸ್ಟಿನ್ ಬಣ್ಣಿಸಿದ ವಿರಾಮವುಳ್ಳ ವಿಹಾರಿಗಳೂ ಇಲ್ಲ. ''ಎಂಥಾ ಸುಂದರ ಬದಲಾವಣೆ'' ಎಂದು ಸಮಾಜವಾದಿಗಳು ಅದರಿಂದ ಪ್ರಫುಲ್ಲರಾಗುವುದಿಲ್ಲ. ಹಿಂದಿನ ವಿಹಾರಿಗಳ ಜಾಗದಲ್ಲಿ ಇಂದಿನ ''ಚೆಕ್ ಬರೆಯುವುದೊಂದೇ ಕೆಲಸವಿರುವ'' ಐಷಾರಾಮಿ ಜೀವಿಗಳಿವೆ! ಕ್ರಿಕೆಟ್ ತಂಡವನ್ನು ಕೊಂಡು ಪೋಷಿಸುವ ಶಿಲ್ಪಾ ಶೆಟ್ಟಿ ಇದ್ದಾಳೆ, ಕೋಟಿಗಟ್ಟಲೆ ಹಣ ಸುರಿದು ಮಗನ ಮದುವೆ ಮಾಡುವ ''ಸುಸಂಸ್ಕೃತ'' ನಿತಿನ್ ಗಡ್ಕರಿ ಇದ್ದಾರೆ, ಪ್ರತಿ ವರ್ಷ ಒಂದು ''ಪೋಲಿ'' ಕ್ಯಾಲೆಂಡರ್ ಅಚ್ಚುಮಾಡುವ

೧೯೪೩ರಲ್ಲಿ ಜನಿಸಿದ ಟೆರಿ ಈಗಲ್‌ಟನ್ ಮೂಲತಃ ಐರ್ಲೆಂಡಿನ ಒಂದು ಕುಟುಂಬದವನು. ಆದರೆ ಹುಟ್ಟಿದ್ದು, ವಿದ್ಯಾಭ್ಯಾಸ ಪಡೆದಿದ್ದು ಮತ್ತು ಕೆಲಸ ಮಾಡಿದ್ದು ಇಂಗ್ಲೆಂಡಿನಲ್ಲಿ. ಕೇಂಬ್ರಿಜ್, ಆಕ್ಸ್‌ಫರ್ಡ್, ಮ್ಯಾಂಚೆಸ್ಟರ್ ಮತ್ತು ಲೆಸ್ಟರ್ ವಿಶ್ವವಿದ್ಯಾನಿಲಯಗಳೊಡನೆ ಅವನದು ಐವತ್ತಕ್ಕೂ ಹೆಚ್ಚು ವರ್ಷಗಳ ಸಂಬಂಧ. ವ್ಯಾಸಂಗ ಕೇಂಬ್ರಿಜ್‌ನಲ್ಲಿ, ಆದರೆ ಪ್ರಾಧ್ಯಾಪಕನಾಗಿದ್ದುದು ಲೆಸ್ಟರ್‌ನಲ್ಲೇ ಹೆಚ್ಚು. ಬೇರೆ ಎರಡು ವಿಶ್ವವಿದ್ಯಾನಿಲಯಗಳಲ್ಲೂ ಬೋಧನೆ ಮತ್ತು ಸಂಶೋಧನೆ ನಡೆಸಿದ್ದಾನೆ. ಸಾಹಿತ್ಯ, ಇತಿಹಾಸ ಮತ್ತು ತತ್ತ್ವಶಾಸ್ತ್ರ ಅವನ ಆಸಕ್ತಿಯ ಕ್ಷೇತ್ರಗಳು. ಸಾಹಿತ್ಯ ಮೀಮಾಂಸೆ ಮತ್ತು ವಿಮರ್ಶೆಯಲ್ಲಿ ಆತನ ಕೃಷಿ ಅತ್ಯಂತ ಮೌಲಿಕವಾದ್ದು. ಅದಕ್ಕೆ ವಿಶೇಷ ಮಾನ್ಯತೆ ಲಭ್ಯವಾಗಿದೆ. ಮಾರ್ಕ್ಸ್‌ವಾದಿ ಸಿದ್ಧಾಂತದ ಬಗೆಗಿನ ಅವನ ತಿಳಿವು ಕೇವಲ ಅಧ್ಯಯನದಿಂದ ಬಂದಿದ್ದಲ್ಲ, ಅವನೊಬ್ಬ ಖ್ಯಾತ ಸಂಘಟಕ ಮತ್ತು ಹೋರಾಟಗಾರ ಕೂಡ. ಅಮೆರಿಕಾದಲ್ಲಿ ಇರುವ ಯೇಲ್ ವಿಶ್ವವಿದ್ಯಾನಿಲಯ ೨೦೧೧ರಲ್ಲಿ ''ಮಾರ್ಕ್ಸ್ ಹೇಳಿದ್ದು ಏಕೆ ಸರಿ ?'' ಎಂಬ ಅವನ ೨೪೦ ಪುಟಗಳ ಪುಸ್ತಕವನ್ನು ಪ್ರಕಟಿಸಿತು. ಮಾರ್ಕ್ಸ್‌ವಾದವನ್ನು ಖಂಡಿಸುವವರು ಸಾಮಾನ್ಯವಾಗಿ ಎತ್ತುತ್ತಲೇ ಬಂದಿರುವ ಆಕ್ಷೇಪಗಳನ್ನು ಪರೀಕ್ಷಿಸಿ ಸತ್ವಯುತವಾದ ವಿಮರ್ಶೆ ಮಾಡುವುದು ಅವನ ಉದ್ದೇಶ. ಈ ಪುಸ್ತಕವನ್ನು ಅನುಸರಿಸಿ ಡಾ|| ಜಿ. ರಾಮಕೃಷ್ಣ ಅವರು ಸಂಗ್ರಹ ರೂಪದಲ್ಲಿ ಮಾರ್ಕ್ಸ್‌ವಾದದ ಬಗೆಗಿನ ಪ್ರತಿಪಾದನೆಯನ್ನು ಪರಿಚಯಿಸಿದ್ದಾರೆ. ಇದು ಒಂಭತ್ತನೆಯ ಕಂತು.

ಡಾ|| ಜಿ. ರಾಮಕೃಷ್ಣ

ವಿಜಯ ಮಲ್ಯ ಇದ್ದಾರೆ. ಇವರೆಲ್ಲಾ ಸ್ಟಾಕ್ ಮಾರ್ಕೆಟ್ ಜನ, ಬಂಡವಾಳ ಹೂಡಿಕೆ ಮಾಡುವ ಜನ, ಬ್ಯಾಂಕುಗಳಿಂದ ಸಾರ್ವಜನಿಕರ ಹಣವನ್ನು ಸಾಲ ಪಡೆದು 'ಗುಳುಂ' ಮಾಡುವ ಜನ. ಅಂದರೆ, ವರ್ಗ ಎಂಬುದಿದೆ ಎಂದರ್ಥ. ಅದರ ಬಣ್ಣ, ವಿಧಾನ, ಗಾತ್ರ, ಆಳ, ಬದಲಾಗುತ್ತಿರಬಹುದು, ಅಷ್ಟೆ.

ಬಂಡವಾಳಶಾಹಿಯು ಸಂದರ್ಭದಲ್ಲಿ ಸಮಾನತೆಯನ್ನು ಪಾಲಿಸುತ್ತದೆ: ಯಾವ ಜನರನ್ನು ಎಷ್ಟು ಮತ್ತು ಹೇಗೆ ಶೋಷಿಸಬಹುದು ಎಂಬ ವಿಷಯದಲ್ಲಿ. ಅದನ್ನು ಬಿಟ್ಟರೆ ಅದು ಬಹುಮುಖಿ, ಎಂತೆಂಥವನ್ನೂ ಕಲೆಸಲು ಸಿದ್ಧವಿರುವಂಥದು. ಎಲ್ಲರನ್ನೂ ಒಳಗೊಳ್ಳಲು ಅದಕ್ಕೆ ಅಭ್ಯಂತರವಿಲ್ಲ. ಲಾಭ ಖಚಿತವಾಗುವುದಾದರೆ ಜಾತಿಗಳನ್ನು ಮೀರಬಲ್ಲುದು, ದುಡಿಯುವವರ ವಯಸ್ಸನ್ನು ಪರಿಗಣಿಸದಿರಬಹುದು, ಚರ್ಮದ ಬಣ್ಣವನ್ನು ನೋಡದಿರಬಹುದು, ಮತ್ತು ಗಂಡು-ಹೆಣ್ಣು ಎಂಬ ತಾರತಮ್ಯ ಮಾಡದಿರಬಹುದು. ಭಾರತದಲ್ಲಾದರೂ ಸರಿ, ಸುಮಾತ್ರಾದಲ್ಲಾದರೂ ಸರಿ, ಇಥಿಯೋಪಿಯದಲ್ಲಾದರೂ ಸರಿ, ಎಲ್ಲ ಕಡೆಯೂ ಅದೇ ''ಸಮಭಾವ''ದಿಂದ ದುಡಿಯುವವರನ್ನು ಶೋಷಿಸಿ ಲಾಭ ತುಂಬಿಸಿಕೊಳ್ಳಲು ಅದು ಉತ್ಸುಕವಾಗಿರುತ್ತದೆ. ''ಸರಕು'' ಎಂಬುದು ಎಲ್ಲವನ್ನೂ ಸಮನಾಗಿಸುತ್ತದೆ, ಸಮಾಜವಾದವಲ್ಲ, ಎಂಬುದು ಅದರ ಧೋರಣೆ. ಸರಕನ್ನು ಕೊಳ್ಳುವ ವ್ಯಕ್ತಿ ಯಾವ ಶಾಲೆಯಲ್ಲಿ ಕಲಿತ, ಶ-ಷಗಳ ವ್ಯತ್ಯಾಸ ಅವನಿಗೆ ಗೊತ್ತೆ, ಪುರಂದರದಾಸರ ಹಾಡನ್ನು ಹಾಡುತ್ತಾನೋ ಅಥವಾ ಸೂಫಿ ಪದ ಹಾಡುತ್ತಾನೋ, ಎಂಬುವೆಲ್ಲಾ ''ಸರಕು'' ಎಂಬ ಘಟಕಕ್ಕೆ ಲೆಕ್ಕಕ್ಕೆ ಬರುವುದಿಲ್ಲ. ಮಾರ್ಕ್ಸ್‌ಗೆ ಏಕರೂಪತೆ ಹಿಡಿಸಲಿಲ್ಲ, ಆದರೆ ಸರಕಿಗೆ ಅದು ಚೆನ್ನಾಗಿ ಹಿಡಿಸುತ್ತದೆ; ನೀವದನ್ನು ಕೊಳ್ಳುತ್ತಿರಬೇಕು, ಅಷ್ಟೆ.

ಬಂಡವಾಳಶಾಹಿಯು ತುತ್ತತುದಿಗೆ ಹೋಗುವ ವೇಳೆಗೆ ಅದು ವರ್ಗಗಳನ್ನು ಇಲ್ಲವಾಗಿಸಿದೆಯೆಂಬ ಭ್ರಾಂತಿ ಮೂಡಿಸುತ್ತದೆ. ತನ್ನಲ್ಲಿರುವ ಅಸಮಾನತೆಗಳನ್ನು ಮುಚ್ಚಿಹಾಕಲು ಇದೊಂದು ತೋರಿಕೆಯಲ್ಲ, ಅದು ಆ ಮೃಗದ ಸ್ವಭಾವ. ಹಿಂದೆ ಯಾವುದಾದರೂ ದೊಡ್ಡ ಕಂಪನಿಯ ಕಚೇರಿಗೆ ಹೋದರೆ ಏನೆಲ್ಲಾ ಆಡಂಬರಗಳು ಕಣ್ಣು ಕುಕ್ಕುತ್ತಿದ್ದವು: ಆ ನುಣುಪಾದ ಮರದ ಮೇಜು-ಕುರ್ಚಿಗಳು, ಹಾಸಿದ ರತ್ನಗಂಬಳಿ, ಬೆಳ್ಳಿ ಟೆಲಿಫೋನು, ಇತ್ಯಾದಿ. ಬಹುರಾಷ್ಟ್ರೀಯ ಕಂಪನಿಗಳ ಇಂದಿನ ಕಚೇರಿಗೆ ಹೋದರೆ ಬಾಗಿಲುಗಳಿಲ್ಲದ ಚಿಕ್ಕ ಚಿಕ್ಕ ಕೋಣೆಗಳು, ಸಾದಾ ಉಡುಪಿನ ವ್ಯವಸ್ಥಾಪಕ, ಒಂದಷ್ಟು ಕಂಪ್ಯೂಟರ್‌ಗಳು, ಇತ್ಯಾದಿ. ನಾರಾಯಣಮೂರ್ತಿ ಅಂಥದರಲ್ಲೂ ಅವರ ಮೈಸೂರು ತರಬೇತಿ ಕೇಂದ್ರದ ಬೃಹತ್ ಕಟ್ಟಡವನ್ನು ಇಡಿಯಾಗಿ ಹವಾನಿಯಂತ್ರಿತ ಎನಿಸಿಬಿಟ್ಟಿದ್ದಾರೆ! ಅದೆಷ್ಟು ವಿದ್ಯುಚ್ಛಕ್ತಿ ಪೋಲು ಮಾಡುತ್ತಾನೆ ಈತ! ಈಗಿನ ದೊಡ್ಡ ಕಚೇರಿಗಳಲ್ಲಿ ನಿಮ್ಮ ''ಬಾಸ್'' ಆದವನನ್ನು 'ಹಲೋ, ನಾರಾಯಣ್' ಅಥವಾ 'ಹಲೋ, ತಾರಾ' ಎನ್ನಬಹುದು. ಆದರೆ ಬಂಡವಾಳವೆಲ್ಲಾ ಶೇಖರಣೆಯಾಗಿರುವುದು ಕೆಲವರಲ್ಲಿ ಮಾತ್ರ; ಮೊದಲಿಗಿಂತಲೂ ಕಡಿಮೆ ಜನಗಳಲ್ಲಿ, ಬಡಜನರನ್ನು ಕಣ್ಣಿಗೆ ಕಾಣಿಸದಷ್ಟು ದೂರಕ್ಕೆ ತಳ್ಳಿಬಿಟ್ಟಿದ್ದಾರೆ, ಇಲ್ಲವೆ ದೊಡ್ಡ ಗೋಡೆಗಳ ಹಿಂದಕ್ಕೆ ಅವರನ್ನು ನೂಕಿದ್ದಾರೆ. ಒಬ್ಬ ಅಂಬಾನಿ ಘಟೋತ್ಕಚನಿಗೆ ಪ್ರತಿಯಾಗಿ ಲಕ್ಷಗಟ್ಟಲೆ ಹಸಿದ ಜನ ಬವಣೆಗೆ ಸಿಲುಕಿ ನರಳುತ್ತಿದ್ದಾರೆ: ಒಂದು ಕೋರಮಂಗಲಕ್ಕೆ ನಾಲ್ಕು ಈಜಿಪುರಗಳು, ಒಂದು ಬಾಂದ್ರಾಕ್ಕೆ ಹತ್ತು ಧಾರಾವಿಗಳು. ಆ ಕೊಳಚೆ ಪ್ರದೇಶಗಳಲ್ಲಿ ನಗರಗಳ ಮೂರನೆಯ ಒಂದು ಪಾಲು ಜನ ವಾಸಿಸುತ್ತಿದ್ದಾರೆ. ಇಡೀ ವಿಶ್ವದಲ್ಲಿ ಅಂತಹ ಕೊಂಪೆಗಳೆಷ್ಟು ಎಂಬ ಲೆಕ್ಕ ಮಾಡಿನೋಡಿ. ಬಂಡವಾಳಶಾಹಿಯಿಂದ ಕೊಬ್ಬಿದ ದೇಶಗಳು ವಿಶ್ವದ ಅರ್ಧ ಜನಸಂಖ್ಯೆಯ ಬಡಜನರಿಗೆ ''ಉದಾರ ಪ್ರಜಾಪ್ರಭುತ್ವ''ದ ಪಾಠ ಹೇಳುತ್ತದೆ. ಪಾಠ ಹೇಳುವ ದೇಶಗಳ ರಾಜಕೀಯವೆಲ್ಲಾ ಕಾರ್ಪೊರೇಷನ್‌ಗಳ ಹಿಡಿತದಲ್ಲಿದೆ ಮತ್ತು ಅವು ತಮ್ಮ ಷೇರುದಾರರನ್ನುಳಿದು ಬೇರೆ ಯಾರಿಗೂ ಲೆಕ್ಕ ಕೊಡಬೇಕಾಗಿಲ್ಲ. ಹೀಗಿದ್ದೂ ವರ್ಗಗಳು ಇಲ್ಲವಾಗಿವೆಯೆಂಬ ಮಿಥ್ಯೆಗೆ ಅಂಟಿಕೊಳ್ಳಲು ಜನರನ್ನು ಪುಸಲಾಯಿಸುವ ಹುನ್ನಾರ ನಡೆದಿದೆ. ಅದನ್ನು ಅಹ್ಲುವಾಲಿಯನಂಥವರು ಮಾಡುತ್ತಾರೆ, ಹಲವು ಬುದ್ಧಿಜೀವಿಗಳು ಆತನ ಬಗಲಿನಲ್ಲಿ ಕೂತು ಕತ್ತಿ ಝಳಪಿಸುತ್ತಾ ಸೊಕ್ಕಿನಿಂದ ಬಡವರನ್ನು ಹಂಗಿಸುತ್ತಿದ್ದಾರೆ.

ಮಾರ್ಕ್ಸ್‌ವಾದಿಗಳು ಬಂಡವಾಳಶಾಹಿಯ ''ವಿರುದ್ಧ'' ಎಂದಾಗ ಅದು ಧೂಮಪಾನದ ವಿರುದ್ಧ ಅಥವಾ ಜಿಂಕೆಗಳ ಬೇಟೆ ವಿರುದ್ಧ ಎಂಬಂತಲ್ಲ. ಬಂಡವಾಳದ ಇತ್ಯಾತ್ಮಕ ಕೊಡುಗೆಯನ್ನು ಮಾರ್ಕ್ಸ್‌ನಷ್ಟು ಬೇರೆ ಯಾರೂ ಶ್ಲಾಘಿಸಿಲ್ಲ. ಸಮಾಜವಾದವನ್ನು ನಿರ್ಮಿಸುವುದು

## ಅಣ್ಣ, ಅಣ್ಣಾ ಮತ್ತು ನನ್ನಣ್ಣ

೧

ಅಣ್ಣಾ...
ಬೆಟ್ಟ-ಸಮುದ್ರ, ಸೂರ್ಯ-ಚರ್ಮ,
ಬೆವರು - ಮೋಡಗಳಿಗಿದ್ದಂತೆ
ನನಗೂ - ನಿನಗೂ ಕಾವ್ಯಸಂಬಂಧವಿಲ್ಲ
ನಾಲಗೆಯ ಮೇಲಿಟ್ಟ ತರ್ಕಕ್ಕೆ ಹುತ್ತದ ಹಿಡಿಮಣ್ಣಷ್ಟೂ ರುಚಿಯಿಲ್ಲ.
ಬಯಲ ಒಂಟಿ ಒಣಕೊರಡಿನಂಥ ದೇಹದಾಲಯದಲ್ಲಿ
ಲಿಂಗವಿರದ ಖಾಲಿಜೋಳಿಗೆ ಹೊತ್ತ ಜಂಗಮ ನಾನು.
ಅಕ್ಕಾ...
ಗಿರಿಗಹ್ವರಗಳ ಅಲೆದು
ಕಾಡುಕೋಳಿಗಳ ಹಾಡುಕೇಳ್ವೆನೆಂಬುದು ಖರೆ.
ಹೆಬ್ಬೆರಳ ಹೋಲುವ ಸೌದೆ-ಅಣಬೆ-ಕಣಿಲೆಗಳ ಹೊರತು
ಮತ್ತೇನನೂ ಕೇಳಲಾರೆ; ಬೇರೇನನೂ ಹುಡುಕಲಾರೆ!
ಜಠರ-ಕರುಳ ಕೂಸುಗಳಿಗುಣಿಸಿ ನಿದ್ರಿಸಲು ಬಿಡಬೇಕು;
ಜಂತುಹುಳುಗಳ ರಾಗಕ್ಕೆ ಹೊಸದೊಂದು ಮೀಮಾಂಸೆ ಬರೆಯಬೇಕು.

೨

ಅಣ್ಣಾ...
ಅಜ್ಜ ಹೋದ ಮೇಲೆ ಕಜ್ಜಿಹಿಡಿದ ಮಣ್ಣಿಗೆ
ಮುಲಾಮು ಹಚ್ಚಿದಷ್ಟೂ ಕೀವು ಜಾಸ್ತಿ.
ನಿಂತಿದ್ದೀಯೆ ಹೀಗೆ - ಕಾಲ್ಬೆರಳ ಸಂದುಗಳಲ್ಲಿ ಬ್ರಯೋಫಿಲ್ಲಂ ಬೇರಿಳಿಸಿ.
ನಾಳೆ ಪಾತಾಳಗಳ ಕೊರೆಕೊರೆದು
ಅನಾದಿ ಕೊತಕೊತ ಲಾವಾಗಳ ತಣ್ಣಗಾಗಿಸಲಿ.
ಸೂರ್ಯ, ಪಾಪಿ, ಸೊರಗಿದ್ದಾನೆ - ಅವ್ವನಂತೆ;
ನೆಲದ ನಡುನೆತ್ತಿಯ ಕಟಕಟೆಯ ಮೇಲೆ -
ತನ್ನ ತಾ ದಹಿಸಿ ದಯಾಮರಣದ ಧ್ಯಾನದಲ್ಲಿ,
ಡಿಜಿಟಲ್ ಮಿಂಚು ನಿನ್ನ ಮೈಮೇಲೆ
ಮೋಡವಿದ್ದರೂ ನಾವಿದ್ದೇವೆ ಇಲ್ಲಿ-
ಒಡೆದ ಹಿಮ್ಮಡಿಯಂಥ ನೆಲವ ಬಗಿದು.
ಗಾಳಿ-ಬೆಳಕಿರುವವರೆಗೆ
ಘೋಷಗಳು, ಬಾವುಟಗಳು
ಹೊಟ್ಟೆಗೆ - ಒಂದು ಹಿಡಿ ತುತ್ತಿಗೆ.

೩

ನನ್ನಣ್ಣಾ...
ಹಸಿತೈತೆ ಒಸಿ ಮುದ್ದೆಕೊಡು
ಉಂಡು ಉಂಟ್ಕಳನಾ...!!



ಕಾಜೂರು ಸತೀಶ್
ಶಿಕ್ಷಕ, ಸ. ಹಿ. ಪ್ರಾಥಮಿಕ ಶಾಲೆ,
ಕರಿಕೆ ಕಾಲೋನಿ
ಮಡಿಕೇರಿ ತಾಲೂಕು - ೫೭೧ ೨೪೭

ಬಂಡವಾಳಶಾಹಿಯ ಸಾಧನೆಗಳ ಅಡಿಪಾಯದ ಮೇಲೆಯೇ: ರಾಜಕೀಯ ಪ್ರಜಾಪ್ರಭುತ್ವ, ಅಭಿವೃದ್ಧ ಆರ್ಥಿಕತೆ, ವ್ಯಕ್ತಿಗೌರವ, ನಾಗರಿಕ ಸ್ವಾತಂತ್ರ್ಯ, ಅಂತರರಾಷ್ಟ್ರೀಯ ಸಮುದಾಯದ ರಚನೆ, ಇತ್ಯಾದಿ. ಆದರೆ ವರ್ಗಗಳ ಚರಿತ್ರೆಯನ್ನು ತಳ್ಳಿಹಾಕುವಂತಿಲ್ಲ, ಬಂಡವಾಳಶಾಹಿಯ ಸಾಧನೆಗಳಿರುವಂತೆ ಅದರ ಕ್ರೂರ ಘಾತುಕತನವೂ ಇದೆ. ಮಾರ್ಕ್ಸ್‌ವಾದವು ಅದರ ನ್ಯಾಯಯುತ ಆಯವ್ಯಯ ಪಟ್ಟಿ ತಯಾರಿಸುತ್ತದೆ: ಅದನ್ನು ಬೇಕಾಬಿಟ್ಟಿ ಅಟ್ಟಕ್ಕೇರಿಸುವುದಿಲ್ಲ, ವೃಥಾ ಕೆಸರಿಗೆ ತಳ್ಳಿ ಘಾಸಿಮಾಡುವುದಿಲ್ಲ. ಬಂಡವಾಳಶಾಹಿಯು ಪ್ರಪಂಚಕ್ಕೆ ನೀಡಿರುವ ಮಹಾನ್ ಕೊಡುಗೆಯೆಂದರೆ ದುಡಿಯುವ ವರ್ಗ. ತನ್ನ ಹಿತಾಸಕ್ತಿಗಳ ಪೂರೈಕೆಗೆ, ರಕ್ಷಣೆಗೆ, ಅದನ್ನು ಸೃಷ್ಟಿಸಿದ ಬಂಡವಾಳಶಾಹಿಯನ್ನು ಈ ವರ್ಗವು ಮೆಟ್ಟಿನಿಲ್ಲಲು ತಯಾರಿದೆ. ಇತಿಹಾಸದ ವ್ಯಂಗ್ಯಗಳಲ್ಲಿ ಇದೂ ಒಂದು ಎನ್ನುತ್ತಾನೆ ಮಾರ್ಕ್ಸ್. ತನ್ನನ್ನು ಹೂಳಲು ಅಗತ್ಯವಾದ ಗುಂಡಿಯನ್ನು ಬಂಡವಾಳಶಾಹಿಯು ತಾನೇ ತೋಡಿ ಸಿದ್ಧಪಡಿಸಿದೆ; ಅದಲ್ಲವೇ ಮೋಜು! ಮಾರ್ಕ್ಸ್‌ವಾದವು ದುಡಿಯುವ ವರ್ಗವನ್ನು ವೈಭವೀಕರಿಸುವುದಿಲ್ಲ, ಅದರ ದುಡಿಮೆಯ ಉದಾತ್ತತೆಯನ್ನು ಮೆಚ್ಚಿ ಕನಿಕರ ತೋರುವುದಿಲ್ಲ, ಕನ್ನ ಹಾಕುವವರು ಸಹ ''ದುಡಿಮೆ'' ಮಾಡುತ್ತಾರೆ, ಅವರನ್ನು ಹಾಡಿ ಹೊಗಳಬೇಕೆ ? ಹಿಂದಿನ ಅಧ್ಯಾಯಗಳಲ್ಲಿ ಚರ್ಚಿಸಿದಂತೆ ಮಾರ್ಕ್ಸ್‌ವಾದವು ದುಡಿಮೆಯನ್ನು ಎಷ್ಟು ಸಾಧ್ಯವೋ ಅಷ್ಟು ಕಡಿಮೆ ಗೊಳಿಸಲು ಬಯಸುತ್ತದೆ. ದುಡಿಯುವ ವರ್ಗದವರು ನಿಕೃಷ್ಟ ಸಾಮಾಜಿಕ ಗುಂಪುಗಳವರೆಂಬ ಕಾರಣಕ್ಕೆ ಮಾರ್ಕ್ಸ್‌ವಾದ ಅವರಿಗೆ ರಾಜಕೀಯ ಪ್ರಾಮುಖ್ಯತೆ ನೀಡ ಹೊರಡುವುದಿಲ್ಲ. ಒಬ್ಬ ಸಾಮಾನ್ಯ ದುಡಿಮೆಗಾರನಷ್ಟೇ ಸಾಂತ್ವನಕ್ಕೆ ಅರ್ಹರಾದವರು ಬೇರೆ ಬೇಕಾದಷ್ಟು ಗುಂಪುಗಳಿವೆ: ಭಿಕಾರಿಗಳು, ಮುದುಕರು, ವಿದ್ಯಾರ್ಥಿ ಸಮುದಾಯ, ನಿರುದ್ಯೋಗಿಗಳು, ಅಂಗವಿಕಲರು, ಹೀಗೆ. ದುಡಿಯುವ ವರ್ಗದವರು ಬಣ್ಣದ ಟಿ.ವಿ. ಅಥವಾ ಬಿಳಿ ಕಲ್ಲಿನ ಬಚ್ಚಲು ಮನೆ ಪಡೆದರೆ ಮಾರ್ಕ್ಸ್‌ವಾದಿಗಳು ಅವರ ಬಗ್ಗೆ ನಿರಾಸಕ್ತಿ ಭಾವ ತಾಳುವುದಿಲ್ಲ. ಮಾರ್ಕ್ಸ್‌ವಾದಕ್ಕೆ ಆ ವರ್ಗವು ಬಂಡವಾಳಶಾಹಿ ಉತ್ಪಾದನಾ ಮಾದರಿಯಲ್ಲಿ ಯಾವ ಸ್ಥಾನ ಹೊಂದಿದೆ ಎಂಬುದೇ ಮೂಲಭೂತ ಆಸಕ್ತಿ. ನಾಳೆ ಬಂಡವಾಳಶಾಹಿ ಯಂತ್ರವನ್ನು ಸ್ವಾಧೀನಕ್ಕೆ ತೆಗೆದುಕೊಂಡಾಗ ಅದನ್ನು ಮುನ್ನಡೆಸುವವರು ಇವರೇ: ಅದರ ಸೂಕ್ಷ್ಮ ತಿಳಿದವರು, ಅದರಿಂದ ನೈಪುಣ್ಯ ಪಡೆದವರು, ರಾಜಕೀಯ ಪ್ರಜ್ಞಾವಂತರು. ಯಾರೋ ದೊಡ್ಡ ಪೋಷಕ ಯಜಮಾನ ಬಂದು ಅವರ ಸ್ಥಾನ ತುಂಬುವುದಿಲ್ಲ. ಬಹು ಸಂಖ್ಯಾತರಾದ ದುಡಿಯುವ ವರ್ಗದವರು ಮತ್ತು ಅರ್ಥಯುತ ಬಲಿಷ್ಠ ಪ್ರಜಾಪ್ರಭುತ್ವ ಜೊತೆಜೊತೆಯಲ್ಲಿ ಸಾಗುತ್ತವೆಂಬುದು ಮಾರ್ಕ್ಸ್‌ನ ತಿಳುವಳಿಕೆ.

ಹೆಗೆಲ್‌ನ ಕೃತಿಯಾದ ''ಕಾನೂನಿನ ತತ್ತ್ವಶಾಸ್ತ್ರ''ದ ಬಗ್ಗೆ ಬರೆಯುವಾಗ ಮಾರ್ಕ್ಸ್ ಹೀಗೆಂದ: ''ಪುರೋಗಾಮಿತನದ ಸರಪಳಿಯುಳ್ಳ ವರ್ಗವು ನಾಗರಿಕ ಸಮಾಜದಲ್ಲಿ ಅಗತ್ಯ, ಆದರೆ ಅದು ವರ್ಗಗಳನ್ನು ಅಳಿಸಿ ಹಾಕಲು ಬಂದಿರುವ ವರ್ಗ. ಸಮಾಜದಲ್ಲಿ ಆ ವರ್ಗದ ನೋವು ಸಾರ್ವತ್ರಿಕವಾದ್ದು; ಆದ್ದರಿಂದ ವೈಯಕ್ತಿಕ ನೆಲೆಯಲ್ಲಿ ಪರಿಹಾರ ದೊರೆಯಲಾರದು. ಏಕೆಂದರೆ, ಅನ್ಯಾಯವೆಸಗಲಾಗಿರುವುದು ಕೇವಲ ವ್ಯಕ್ತಿಗೆ ಅಲ್ಲ, ಅದು ಸಾಮಾನ್ಯ ನೆಲೆಯಲ್ಲಿನ ಅನ್ಯಾಯ. ಈ ವರ್ಗಕ್ಕೆ ಪಾರಂಪರಿಕ ಸ್ಥಾನ ಬೇಕಿಲ್ಲ, ಬೇಕಾಗಿರುವುದು ಮಾನವಿಕ ಸ್ಥಾನ. ...ತನ್ನ ವಿಮುಕ್ತಿಯು ಇಡೀ ಮನುಕುಲದ ವಿಮುಕ್ತಿಯಿಂದ ಮಾತ್ರ ದೊರೆತೀತು. ಆದ್ದರಿಂದ ಸಮಾಜದಲ್ಲಿನ ಪ್ರತ್ಯೇಕ ವರ್ಗಗಳನ್ನು ಇಲ್ಲವಾಗಿಸುವುದು ದುಡಿಯುವ ವರ್ಗ.''

ಆ ಅರ್ಥದಲ್ಲಿ ಮಾರ್ಕ್ಸ್‌ಗೆ ದುಡಿಯುವ ವರ್ಗವು ಒಂದು ವಿಶೇಷ ವರ್ಗ. ಅದಕ್ಕೆ ತನ್ನ ಸ್ವಕೀಯ ಹಿತವನ್ನು ಮೀರಿದ ಒಂದು ಹಿತದ ಬಗ್ಗೆ ಆಸಕ್ತಿ ಇದೆ. ಅದರಲ್ಲಿ ಬಂಡವಾಳಶಾಹಿಯು ಹುಟ್ಟುಹಾಕುವ ಯುದ್ಧಗಳು, ವಸಾಹತುಗಳು, ಕ್ಷಾಮ, ಜನಾಂಗ ಹತ್ಯೆ, ಪರಿಸರದ ಹಾನಿ, ಪಿತೃಪ್ರಾಧಾನ್ಯ, ವರ್ಣವಿಭಜನೆ, ಎಲ್ಲಾ ಸೇರಿವೆ. ಈ ರೀತಿಯಲ್ಲಿ ದುಡಿಯುವ ವರ್ಗವು ಒಂದು ''ಪಾಪದ ಬಲಿ.'' ಹಿಂದಿನ ಕಾಲದಲ್ಲಿ ಗ್ರಾಮದ ಪಿಡುಗಿಗೆ ಕಾರಣ ವೆಂದು ಒಂದು ಮೇಕೆಯನ್ನು ಗುರುತಿಸಿ ಅದನ್ನು ಊರಿನಿಂದ ಹೊರಹಾಕುತ್ತಿದ್ದರಂತೆ; ಹಾಗೆ ಸಾರ್ವತ್ರಿಕ ಪಿಡುಗಿಗೆ ಬಲಿಯಾದ್ದು ದುಡಿಯುವ ವರ್ಗ. ಆ ಕಾರಣದಿಂದಲೇ ಅದು ಹೊಸ ಸಮಾಜ ವ್ಯವಸ್ಥೆಯನ್ನು ನಿರ್ಮಿಸಲು ಅಡಿಪಾಯವಾಗಬೇಕಾಗಿದೆ. ಬಂಡವಾಳಶಾಹಿಗೆ ಆ ವರ್ಗವು ಬೇಕಿದ್ದೂ ಬೇಕಾಗಿಲ್ಲ; ಒಂದು ವಿಧದಲ್ಲಿ ''ವರ್ಗವಲ್ಲದ ವರ್ಗ'' ಅದು. ಇದೊಂದು ಒಗಟು: ಅದು ಸಾಮಾಜಿಕ ವ್ಯವಸ್ಥೆಗೆ ಅಗತ್ಯವಾದುದನ್ನೆಲ್ಲಾ ಸೃಷ್ಟಿಸಿದೆ, ಆದರೆ ಅದರಿಂದ ಹೊರಗಿಡಲ್ಪಟ್ಟಿದೆ, ಅದಕ್ಕೆ ಪ್ರಾತಿನಿಧ್ಯವಿಲ್ಲ. ಕೆಲಸಕ್ಕೆ ಯೋಗ್ಯವಾದ ವರ್ಗ, ಆದರೆ ನೆಲೆಯಿಲ್ಲದ್ದು! ಹೀಗಾಗಿ, ಬಂಡವಾಳಶಾಹಿಯ ಅಡಿಪಾಯವು ಸ್ವಯಂ-ವಿರೋಧಿ ರೂಪದ್ದು. ಅದರ ಹುಟ್ಟು-ಬೆಳವಣಿಗೆ ಎಲ್ಲಾ ದುಡಿಯುವ ವರ್ಗದ ಕೊಡುಗೆ, ಅದರ ಅವಸಾನವೂ ಆ ವರ್ಗದಿಂದಲೇ ನೆರವೇರಬೇಕು. ಇಸ್ಪೀಟು ಎಲೆಗಳಲ್ಲಿನ ಜೋಕರ್ ಇದ್ದಂತೆ ಈ ವರ್ಗ; ನಾಗರಿಕತೆಯ ಚರಿತ್ರೆಯಲ್ಲಿ ಇದರದು ಅಂತಹ ಪಾತ್ರ. ಒಳಗೂ ಇಲ್ಲ, ಹೊರಗೂ ಇಲ್ಲ: ಇದಲ್ಲವೆ ವಿರೋಧ! ಬಂಡವಾಳಶಾಹಿಯ ಇಂದಿನ ಸ್ಥಿತಿಯನ್ನು ಉಳಿಸಬೇಕಾದ ದರದು ಈ ವರ್ಗಕ್ಕಿರಬೇಕಾಗಿಲ್ಲ; ಅದರ ವ್ಯವಸ್ಥೆಯಲ್ಲಿ ಈ ವರ್ಗ ಅದೃಶ್ಯ. ಆದ್ದರಿಂದಲೇ ಪರ್ಯಾಯವಾದ ಭವಿಷ್ಯವನ್ನು ಅದು ರೂಪಿಸಿಕೊಳ್ಳ ಬೇಕು. ಈಗಿನ ವ್ಯವಸ್ಥೆಯ ನಿರಾಕರಣ, ಅಂದರೆ ಅದರ ''ವಿಸರ್ಜನೆ'' ಅಗತ್ಯ, ಏಕೆಂದರೆ ಸಾಮಾಜಿಕ ವ್ಯವಸ್ಥೆಯಲ್ಲಿ ಅದು ತ್ಯಾಜ್ಯ ವಸ್ತುವಾಗಿದೆ. ಈ ವಿಸರ್ಜನೆಯ ಇತ್ಯಾತ್ಮಕ ಅರ್ಥವುಳ್ಳದ್ದು, ಏಕೆಂದರೆ ಈ ವರ್ಗವು ಅಧಿಕಾರ ಗ್ರಹಿಸಿದಾಗ ವರ್ಗಗಳಿಗೆ ಇತಿಶ್ರೀ ಹಾಡಲಿದೆ. ಆಗ ''ಸಾಮಾಜಿಕ ವರ್ಗ'' ಎಂಬ ಬಿಗಿ ದಿರಸನ್ನು ಯಾವ ವ್ಯಕ್ತಿಯೂ ತೊಡುವುದಿಲ್ಲ; ಪ್ರತಿಯೊಬ್ಬರೂ ತಾವು ತಾವಾಗಿರುತ್ತಾರೆ, ಅಷ್ಟೆ. ಅಂದರೆ, ದುಡಿಯುವ ವರ್ಗವು ಸಾರ್ವತ್ರಿಕ ಲಕ್ಷಣ ಉಳ್ಳದ್ದು; ತನ್ನನ್ನು ಬದಲಾಯಿಸಿ ಕೊಳ್ಳುತ್ತಾ ಅದು ವರ್ಗ ವಿಭಜಿತ ಸಮಾಜದ ರಾಡಿಯನ್ನು ತೆಗೆದು ಸಮಾಜವನ್ನು ಸ್ವಚ್ಛಗೊಳಿಸುತ್ತದೆ.

ಇದರಲ್ಲಿನ ವ್ಯಂಗ್ಯ ಗಮನಾರ್ಹ: ಒಂದು ವರ್ಗದಿಂದ ಮಾತ್ರವೇ ವರ್ಗಗಳ ಅಂತ್ಯ ಸಾಧ್ಯವಾಗುವುದು. ಮಾರ್ಕ್ಸ್‌ವಾದಕ್ಕೆ ವರ್ಗದ ಕಾಳಜಿ ಇರುವುದು ಅದಿಲ್ಲದಂತಾಗು ತ್ತದೆಯೆಂಬ ಕಾರಣಕ್ಕೆ. ಮಾರ್ಕ್ಸ್‌ಗೆ ವ್ಯಕ್ತಿಯ ಅನಾಥಪ್ರಜ್ಞೆ ಅಥವಾ ಅರ್ಥವತ್ತಾಗಿ ಹೊಂದಿಕೊಳ್ಳದ ಸನ್ನಿವೇಶವು ''ಸಾಮಾಜಿಕ ವರ್ಗ'' ಎಂಬುದರಲ್ಲೇ ಇದೆ, ಏಕೆಂದರೆ ಮಾನವನಾಗಿರುವ ಬದಲು ಅವನು 'ದುಡಿಮೆಗಾರ' ನಾಗಿರುತ್ತಾನೆ, 'ಬಂಡವಳಿಗ'ನಾಗಿರುತ್ತಾನೆ. ಅವನ ನಿಜವಾದ ಮುಖ ಕಳೆದುಹೋಗಿದೆ. ಅದನ್ನು ಒಳಗಿನಿಂದಲೇ ಮತ್ತೆ ಪಡೆದುಕೊಳ್ಳಬೇಕು. ಅದು ''ವರ್ಗಗಳಿಲ್ಲ'' ಎಂದು ಘೋಷಿಸಿಬಿಟ್ಟು ಪಡೆಯಲಾಗದು; ಸಾಮಾಜಿಕ ವಾಸ್ತವ ವನ್ನು ಒಪ್ಪಿ ಅದನ್ನು ಬದಲಿಸಿದಾಗ ಮಾತ್ರ ಅದು ಲಭ್ಯ. ಜನಾಂಗೀಯ ವಾಸ್ತವ ಮತ್ತು ಲಿಂಗ ವಾಸ್ತವಗಳಿದ್ದಂತೆ ಅದು. ಮಂತ್ರದ ಕೋಲನ್ನು ತಿರುಗಿಸಿ ಅವನ್ನು ಇಲ್ಲವಾಗಿಸುವ ಸಾಧ್ಯತೆ ಸೊನ್ನೆ. ಒಬ್ಬೊಬ್ಬ ವ್ಯಕ್ತಿಯನ್ನೂ ಅನನ್ಯವೆಂದು ಗುರುತಿಸಿ ವರ್ಗವನ್ನು ತೊಡೆದು ಹಾಕುತ್ತೀರಾ? ಬೃಹತ್ ಸಮಾಜದಲ್ಲಿ ವ್ಯಕ್ತಿಯು ಅನಾಮಧೇಯನಾಗಿರುವುದೇ ಒಂದು 'ಸರಿಹೊಂದದ ಸನ್ನಿವೇಶ.' ಅದೇ ಆ ಸನ್ನಿವೇಶದಿಂದ ಪಾರಾಗಲು ಸಾಧನ ಸಹ. ಮಾರ್ಕ್ಸ್‌ವಾದವು ದುಡಿಯುವ ವರ್ಗದಾಚೆಗೆ ದೃಷ್ಟಿ ಹರಿಸುವ ಇನ್ನೊಂದು ಪರಿ ಇದೆ. ಯಾವ ಸಮಾಜ ವಾದಿಯೂ ದುಡಿಯುವ ವರ್ಗವು ತನ್ನಷ್ಟಕ್ಕೆ ತಾನೆ ಬಂಡವಾಳಶಾಹಿಯನ್ನು ಉತ್ಪಾಟಿಸಬಲ್ಲುದೆಂದು ಬಗೆಯ ಲಾರ. ಅದಕ್ಕೆ ರಾಜಕೀಯ ಸಂಧಾನಗಳಿಂದ ವಿಪುಲವಾಗಿ ಮೈತ್ರಿಕೂಟಗಳ ರಚನೆ ಅಗತ್ಯ. ಸ್ವತಃ ಮಾರ್ಕ್ಸ್ ಹೇಳಿದ್ದು ದುಡಿಯುವ ವರ್ಗವು ಸಣ್ಣ ಹಿಡುವಳಿಗಳನ್ನುಳ್ಳ ರೈತರನ್ನು ಬೆಂಬಲಿಸಬೇಕೆಂದು. ಫ್ರಾನ್ಸ್, ರಷ್ಯ ಮತ್ತು ಜರ್ಮನಿ ಗಳಲ್ಲಿ ಇದನ್ನು ಕಾರ್ಯಗತಗೊಳಿಸಲಾಗಿತ್ತು. ರಷ್ಯದಲ್ಲಿ ನಂತರ ದುಡಿಯುವ ವರ್ಗದ ಕಾರ್ಮಿಕರು ಬೋಲ್ಶೆವಿಕ್ ಪಕ್ಷದ ನೇತೃತ್ವದಲ್ಲಿ ಬಡ ರೈತರು, ಸೈನಿಕರು, ನೌಕಾದಳ, ನಗರಕೇಂದ್ರಿತ ಬುದ್ಧಿಜೀವಿಗಳು, ಹೀಗೆ ವಿವಿಧ ಬಣಗಳೊಡನೆ ಸಖ್ಯ ಬೆಳೆಸಿದ್ದು ಇತಿಹಾಸ.

ಮಾರ್ಕ್ಸ್ ಎಲ್ಲೆಡೆಯ ದುಡಿಯುವ ವರ್ಗವನ್ನು 'ಪ್ರೋಲಿಟೇರಿಯಟ್' ಎಂದು ಕರೆದ. ಹಾಗೆಂದರೆ ದುಡಿಯುವ ವರ್ಗದ ಗಂಡಸಲ್ಲ. ಪ್ರಾಚೀನ ಸಮಾಜದಲ್ಲಿ ಕೆಳವರ್ಗದ ಮಹಿಳೆಯರಿಗೆ ಆ ಹೆಸರಿತ್ತು. ಅದರ ಮೂಲ ಲ್ಯಾಟಿನ್ ಭಾಷೆಯದು, ಹಾಗೆಂದರೆ ''ಸಂತತಿ'' ಎಂದು. ಅಂದರೆ, ಆ ಮಹಿಳೆಯರು ಪ್ರಭುತ್ವಕ್ಕೆ ಸೇವೆ ಸಲ್ಲಿಸುವು ದೆಂದರೆ ಕೇವಲ ಮಕ್ಕಳನ್ನು ಹೆರುವುದರ ಮೂಲಕ, ಎಂದರ್ಥ. ಆರ್ಥಿಕ ಜೀವನಕ್ಕೆ ತಮ್ಮ ಕೊಡುಗೆ ನೀಡಲು ಯಾವ ಸಾಮರ್ಥ್ಯವೂ ಇಲ್ಲದಿದ್ದ ಮಹಿಳೆಯರು ಅವರು. ಸಮಾಜ ಅವರಿಂದ ನಿರೀಕ್ಷಿಸುತ್ತಿದ್ದುದು ಉತ್ಪಾದನೆಯನ್ನಲ್ಲ, ಸಂತಾನೋತ್ಪತ್ತಿಯನ್ನು ಮಾತ್ರ. ಅವರು ದುಡಿಮೆಯ ಪ್ರಕ್ರಿಯೆಯಿಂದ ಹೊರಗಿಡಲ್ಪಟ್ಟಿದ್ದವರು; ಆದರೆ ಅವರು ಸಹಿಸಿದ ನೋವು ಬೃಹತ್ ಬಂಡೆಗಳನ್ನು ಎತ್ತುವುದಕ್ಕಿಂತ ಹೆಚ್ಚಿನದು. ಇಂದಿನ ಕೆಲವು ಉತ್ಪಾದನಾ ಘಟಕಗಳನ್ನು ಗಮನಿಸಿ: ಮಕ್ಕಳು ಹತ್ತು-ಹನ್ನೆರಡು ಗಂಟೆ ದುಡಿದು ಪುಡಿಕಾಸು ಪಡೆಯುತ್ತಾರೆ; ಬಟ್ಟೆ ಹೊಲಿಗೆಯ ಉದ್ಯಮದಲ್ಲಿ ಮಹಿಳೆಯರು ಹತ್ತು ಗಂಟೆ ದುಡಿಯುತ್ತಾರೆ, ಆದರೂ ದಂಡಿಸಿಕೊಳ್ಳುತ್ತಾರೆ, ನಿಕೃಷ್ಟ ಮಟ್ಟದ ಕೂಲಿ ಪಡೆಯುತ್ತಾರೆ. ಅವರ ದುಡಿಮೆಯ ಫಲದಿಂದ ದೊರಕುವ ಲಾಭ ಹೇರಳವಾಗಿದೆ, ಅದೆಲ್ಲಾ ಮಾಲೀಕನಿಗೆ ಸೇರುತ್ತದೆ. ಪ್ರಾಚೀನ ಕಾಲದ ಮಹಿಳೆಯರಂತೆ ಇವರೂ ''ಪ್ರೋಲಿಟೇರಿಯಟ್''ಗಳೇ, ಆದರೆ ಸ್ವಲ್ಪ ಕೂಲಿ ಪಡೆಯುತ್ತಾರೆ; ಪುರುಷರು ಪಡೆಯುವುದಕ್ಕಿಂತಲೂ ಕಡಿಮೆ. ಅಂತೂ ''ದುಡಿಯುವ ವರ್ಗ'' ಎಂದರೆ ಕೇವಲ ಪುರುಷರಲ್ಲ, ಬೇರೆಯವರ ಮನೆಗಳಲ್ಲಿ ಕೆಲಸ ಮಾಡಿ ಕೂಲಿ ಪಡೆಯುವ ಮಹಿಳೆಯರ ಸಂಖ್ಯೆ ಏನು

ಕಡಿಮೆಯೆ ? ಅವರ ಕೈಲಿ ಸುತ್ತಿಗೆ ಇಲ್ಲ, ಆದರೆ ದುಡಿಮೆ ಬೇಕಾದಷ್ಟಿದೆ. ವಿಶ್ವದಲ್ಲಿ ಅಂತಹ ಮಹಿಳೆಯರ ಸಂಖ್ಯೆ ಪುರುಷರದಕ್ಕಿಂತ ಹೆಚ್ಚು. ಬಂಡವಾಳಶಾಹಿ ದೇಶಗಳಲ್ಲಿ ಕಳೆದ ಶತಮಾನಗಳಲ್ಲಿದ್ದಂತೆ ನೀಲಿ ಬಟ್ಟೆಯ ದುಡಿಯುವ ಕಾರ್ಮಿಕರ ಸಂಖ್ಯೆ ಹೆಚ್ಚಾಗಿಲ್ಲ. ಈಗ ಬಿಳಿ ಬಟ್ಟೆ ಮತ್ತು ಕುತ್ತಿಗೆಗೆ ಜೋತುಬಿದ್ದ ಉದ್ದನೆಯ ಬಟ್ಟೆಯವರೇ ಜಾಸ್ತಿ. ನೀಲಿ ಬಟ್ಟೆ ಧರಿಸಿದವರ ಕೆಲಸಗಳನ್ನು ಬಡ ರಾಷ್ಟ್ರಗಳಿಗೆ ವರ್ಗಾಯಿಸಲಾಗಿದೆ. ಔದ್ಯಮಿಕ ಸ್ಥಾವರಗಳಲ್ಲಿ ದುಡಿಯುವವರ ಸಂಖ್ಯೆ ಕುಸಿದಿರುವುದಕ್ಕೆ ತಂತ್ರಜ್ಞಾನದ ಬೆಳವಣಿಗೆಯೂ ಒಂದು ಕಾರಣ.

ದೈಹಿಕ ದುಡಿಮೆಯಲ್ಲಿ ತೊಡಗಿದವರನ್ನು ಮಾತ್ರವೇ ಮಾರ್ಕ್ಸ್ ''ದುಡಿಯುವ ವರ್ಗ'' ಎನ್ನಲಿಲ್ಲ. ತನ್ನ ''ಬಂಡವಾಳ'' ಎಂಬ ಗ್ರಂಥದಲ್ಲಿ ಲೆಕ್ಕ ಬರೆಯುವವರನ್ನು ಸಹ ಮಾರ್ಕ್ಸ್ ಈ ಗುಂಪಿಗೆ ಸೇರಿಸಿದ್ದಾನೆ. ಸರಕು ಉತ್ಪಾದನೆ ಮಾಡುವವರಷ್ಟೇ ''ದುಡಿಯುವ ವರ್ಗ''ವಲ್ಲ, ಯಾರೆಲ್ಲಾ ತಮ್ಮ ದುಡಿಮೆಯ ಶಕ್ತಿಯನ್ನು ಬಂಡವಾಳಕ್ಕೆ (ಅಥವಾ ಬಂಡವಾಳಿಗರಿಗೆ) ಮಾರಿಕೊಂಡು ಜೀವನ ಹೊರೆಯುತ್ತಾರೋ ಅವರೆಲ್ಲಾ ದುಡಿಯುವ ವರ್ಗದವರೇ. ಅವರ ದುಡಿಮೆಯ ಸನ್ನಿವೇಶ ಮತ್ತು ಷರತ್ತುಗಳ ಮೇಲೆ ಅವರ ಹಿಡಿತ ಅಷ್ಟಕ್ಕಷ್ಟೇ. ಬಂಡವಾಳಶಾಹಿಯ ಪತನ ಉಂಟಾದಾಗ ಅತಿಹೆಚ್ಚಿನ ಲಾಭ ದಕ್ಕುವುದು ಇವರಿಗೇ. ಕಾರಕೂನರು, ಕಡಿಮೆ ಕೌಶಲ್ಯದ ಕೆಲಸಗಾರರು, ಉದ್ಯೋಗದ ಭದ್ರತೆ ಇಲ್ಲದವರು, ಎಲ್ಲರೂ ದುಡಿಯುವ ವರ್ಗಕ್ಕೆ ಸೇರುತ್ತಾರೆ. ಆದ್ದರಿಂದ ದುಡಿಯುವ ವರ್ಗದಲ್ಲಿ ಔದ್ಯಮಿಕ ಕೆಲಸಗಾರರಿರುವಂತೆ ಬಿಳಿ ಬಟ್ಟೆಯ ಕೆಲಸದವರೂ ಇದ್ದಾರೆ. ತಾಂತ್ರಿಕ, ಆಡಳಿತಾತ್ಮಕ ಕೆಲಸಗಾರರು ಈ ಬಣದವರು. ಅಂದರೆ, ''ವರ್ಗ'' ಎಂಬುದು ಅಮೂರ್ತ ಕಾನೂನುಬದ್ಧ ಮಾಲಿಕತ್ವ ಮಾತ್ರವಲ್ಲ; ಅಧಿಕಾರದಿಂದ ಬೇರೆಯವರ ದುಡಿಮೆ ಮತ್ತು ಅದರ ಲಾಭವನ್ನು ಸೆಳೆದುಕೊಳ್ಳಬಲ್ಲವರೆಲ್ಲಾ ಒಂದು ವರ್ಗವಾಗುತ್ತಾರೆ.

ಈ ವಿಚಾರವು ಇಂದಿನ ಸಂದರ್ಭದಲ್ಲಿ ಪ್ರಸ್ತುತವಾದ್ದು. ದುಡಿಯುವ ವರ್ಗವನ್ನು ಹೂತು ಅದರ ಶ್ರಾದ್ಧ ಕಾರ್ಯ ನೆರವೇರಿಸಲು ಕಾತುರರಾಗಿರುವ ಬಂಡವಾಳಶಾಹಿ ಚಿಂತಕರು ಹೂಡಿರುವ ವಾದವಾದರೂ ಏನು ? ಸೇವಾ ಕ್ಷೇತ್ರ ಬೆಳೆದಿದೆ, ಮಾಹಿತಿ ತಂತ್ರಜ್ಞಾನದ ಆಕ್ರಮಣ ನಡೆದಿದೆ, ಸಂಪರ್ಕ ಸಾಧನಗಳು ನೂರ್ಮಡಿಯಾಗಿ ಹೆಚ್ಚಿವೆ; ಆದ್ದರಿಂದ ಸಾಂಪ್ರದಾಯಿಕವಾಗಿ 'ದುಡಿಯುವ ವರ್ಗ' ಎನಿಸಿಕೊಂಡಿದ್ದ ವರ್ಗ ಈಗ ಉಳಿದಿಲ್ಲ, ಎಂದು. 'ಆಧುನಿಕೋತ್ತರ ಕೊಳ್ಳುಬಾಕ ಸಂಸ್ಕೃತಿ' ನೆಲೆಗೊಳ್ಳುತ್ತಿದೆ, ನಿಜ. ಅದರಲ್ಲಿ ಬಂಡವಾಳಶಾಹಿಯ ಲಕ್ಷಣಗಳು ಸ್ವಲ್ಪ ಬದಲಾಗಿರುವುದೂ ಉಂಟು. ಆದರೆ ಇದಾವುದೂ ಉತ್ಪಾದನಾ ಸಂಬಂಧಗಳನ್ನು ಮೂಲಭೂತವಾಗಿ, ಗುಣಾತ್ಮಕವಾಗಿ, ಬದಲಿಸಿಲ್ಲ. ಬದಲಾಗಿ, ಆ ಹಳೆಯ ಆಸ್ತಿ ಸಂಬಂಧಗಳನ್ನು ಇನ್ನೂ ಹೆಚ್ಚಾಗಿ ಗಟ್ಟಿಗೊಳಿಸುತ್ತಿರುವ, ವಿಶಾಲಗೊಳಿಸುತ್ತಿರುವ, ಸನ್ನಿವೇಶವನ್ನು ಕಾಣುತ್ತಿದ್ದೇವೆ. ಸೇವಾ ಕ್ಷೇತ್ರದ ದುಡಿಮೆಯು ಸಾಂಪ್ರದಾಯಿಕ ಔದ್ಯಮಿಕ ದುಡಿಮೆಯಷ್ಟೇ ಕಷ್ಟದ್ದು, ಘೋರವಾದ್ದು ಮತ್ತು ಅಪ್ರಿಯವಾದ್ದು. ಇನ್‌ಫೋಸಿಸ್‌ನ ಸ್ವಾಗತಾಧ್ಯಕ್ಷರನ್ನು ಕಂಡು ಸೇವಾ ಕ್ಷೇತ್ರದ ದುಡಿಮೆಯ ಮಾಪನ ಮಾಡಲಾಗದು ಅಥವಾ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟಿನ ನಿರ್ದೇಶಕರ ದುಡಿಮೆಯನ್ನು ಆಧರಿಸಿ ಸೇವಾ ಕ್ಷೇತ್ರದ ದುಡಿಮೆಯ ಲಕ್ಷಣವನ್ನು ನಿರ್ಧರಿಸಲಾಗದು. ಹೋಗಿ ನೋಡಿ, ಬಂದರಿನಲ್ಲಿ ದಾಸ್ತಾನು ಲೆಕ್ಕ ಇಡುವವನಿದ್ದಾನೆ, ಆಸ್ಪತ್ರೆಯ ದಾದಿ ಇದ್ದಾಳೆ, ಅಂಚೆಯ ಬಟವಾಡೆ ಮಾಡುವವರಿದ್ದಾರೆ, ಪೊಲೀಸ್ ಪೇದೆಗಳಿದ್ದಾರೆ, ಊರು ಸ್ವಚ್ಛಗೊಳಿಸುವ ವಾಹನಗಳ ಚಾಲಕರಿದ್ದಾರೆ, ಅಂತೆಯೇ ಬೇರೆ ಲಕ್ಷ ಸೇವೆಗಳಿವೆ. ಉತ್ಪಾದನಾ ದುಡಿಮೆಗಳಲ್ಲದ ಇವು ಕೂಲಿ-ಶ್ರಮ-ಷರತ್ತುಗಳ ದೃಷ್ಟಿಯಿಂದ ಉತ್ಪಾದನಾ ದುಡಿಮೆಗಿಂತ ಭಿನ್ನವೆ ? ಕಾಲ್ ಸೆಂಟರ್ ಸೇವೆ ಮತ್ತು ಕಲ್ಲಿದ್ದಲು ಗಣಿಯ ಕೆಲಸ ಬೇರೆಬೇರೆ ತೆರನಾದವು; ಆದರೆ ಉತ್ಪಾದನಾ ಸಂಬಂಧಗಳ ದೃಷ್ಟಿಯಿಂದ ಒಂದೇ ತೆರನಾದವು. ಇಬ್ಬರೂ ಶೋಷಿತರೇ, ಇಬ್ಬರೂ ದುಡಿಮೆ ಮಾರಿಕೊಳ್ಳುವವರೇ. ವಿಮಾನ ಚಾಲಕ ಮತ್ತು ರೈಲು ನಿಲ್ದಾಣದ ಕೂಲಿಕೆಲಸಗಾರ ಇಬ್ಬರೂ ಒಂದೇ ಅಲ್ಲ: ಯಾವ ದೃಷ್ಟಿಯಿಂದ ? ಕೂಲಿಯ ಪರಿಮಾಣದ ದೃಷ್ಟಿಯಿಂದ, ಅಷ್ಟೆ. ಜೂಲ್ಸ್ ಟೌನ್‌ಶೆಂಡ್ ಎಂಬುವವನು ಇದನ್ನು ಸೂತ್ರೀಕರಿಸುತ್ತಾ ಹೇಳಿದ್ದಾನೆ : ''ಕೆಳಹಂತದ 'ಬಿಳಿ ಬಟ್ಟೆ ಕೆಲಸಗಾರರು' ತಮ್ಮ ದುಡಿಮೆ, ಸೇವಾ ಸುಭದ್ರತೆ, ಕಡಿಮೆ ಕೂಲಿ, ಇತ್ಯಾದಿಗಳ ಮೇಲೆ ಹತೋಟಿಯನ್ನೇನೂ ಹೊಂದಿಲ್ಲ; ಅವರನ್ನು ದುಡಿಯುವ ವರ್ಗದಿಂದ ಹೊರಗಿಡುವುದು ಪ್ರಶ್ನಾರ್ಹವಾಗಿರುತ್ತದೆ.''

ಇನ್ನೊಂದಂಶವನ್ನು ಗಮನವಿಟ್ಟು ನೋಡಿ : 'ಸೇವೆ' ಎನಿಸಿಕೊಂಡದ್ದರಲ್ಲಿ ಸಹ ಸಾಕಷ್ಟು 'ಉತ್ಪಾದನೆ' ಇದೆ. ಔದ್ಯಮಿಕ ದುಡಿಮೆಗಾರನ ಜಾಗದಲ್ಲಿ ಕಂಪ್ಯೂಟರ್ ತಂತ್ರಜ್ಞ ಬಂದಿದ್ದಾನೆಂದು ಹೇಳುತ್ತಾರಲ್ಲವೆ ? ಸರಿ, ಕಂಪ್ಯೂಟರ್ ಎಲ್ಲಿಂದ ಬಂತು ? ಕಂಪ್ಯೂಟರ್ ಪರಿಣತನ ವಾಹನ ಚಾಲಕನಿದ್ದಾನಲ್ಲ, ಅವನನ್ನೆಲ್ಲಿಗೆ ಸೇರಿಸುತ್ತೀರಿ ? ಅವರೆಲ್ಲ ''ಉತ್ಪಾದನೆ'' ಮಾಡುತ್ತಿಲ್ಲ, ಆದ್ದರಿಂದ ಅವರು ದುಡಿಮೆಗಾರರಲ್ಲ ಎನ್ನಬಹುದೇನು ? ಅವರಲ್ಲಿ ಕೆಲವರನ್ನು ''ಮಧ್ಯಮ ವರ್ಗ''ದವರೆಂದು ಭಿನ್ನೈಸಿ ಬಿಟ್ಟರೆ ಪ್ರಶ್ನೆ ಪರಿಹಾರವಾಗುತ್ತದೆಯೆ ? ಅವರೆಲ್ಲರ ಭೌತಿಕ ಆಸಕ್ತಿಗಳನ್ನು ಮರೆತುಬಿಡಲು ಸಾಧ್ಯವಿಲ್ಲ, ಅವರಿಗೂ ಸಮಾನತೆಯ ಸಾಮಾಜಿಕ ವ್ಯವಸ್ಥೆಯ ಅವಶ್ಯಕತೆ ಇದೆ. ಇಲ್ಲವೆನ್ನುತ್ತೀರೇನು ? ಜೊತೆಗೆ, ನಿವೃತ್ತರು-ನಿರುದ್ಯೋಗಿಗಳು-ರೋಗಿಗಳು, ಇವರನ್ನೆಲ್ಲಾ ಎಲ್ಲಿಗೆ ಸೇರಿಸುವುದು ? ಹ್ಞೂಂ, ''ಕಾಂಟ್ರಾಕ್ಟ್'' ಕೆಲಸಗಾರರು, ''ಕ್ಯಾಶುಯಲ್'' ಕೆಲಸಗಾರರು, ಅರೆ-ಸೇವೆ ಕೆಲಸಗಾರರು, ಅಂಥವರೆಲ್ಲರ ಕತೆ ಏನು ? ಅವರೆಲ್ಲ ''ಅಧಿಕೃತ'' ದುಡಿಮೆ ಪ್ರಕ್ರಿಯೆಯಲ್ಲಿ ''ದುಡಿಯುವವರಲ್ಲ'', ಆದ್ದರಿಂದ ಅವರು ''ದುಡಿಯುವ ವರ್ಗ''ದವರಲ್ಲ, ಎಂದೇನಾದರೂ ತೀರ್ಮಾನಿಸಿದರೆ ಅದು ಆಭಾಸವಾಗುತ್ತದೆ.

ತಾಂತ್ರಿಕ ಜ್ಞಾನವು ವೃದ್ಧಿಯಾದಂತೆ ಬಂಡವಾಳಶಾಹಿಯ ಆಡಳಿತಾತ್ಮಕ ಮತ್ತು ವ್ಯವಸ್ಥಾಪಕ ಸೂತ್ರಗಳು ಬದಲಾಗುತ್ತವೆ. ತಂತ್ರಜ್ಞಾನವು ಸಹ ಬಂಡವಾಳಶಾಹಿಯ ಸಾಧನ : ಅದರಿಂದ, ಕಡಿಮೆ ಕೆಲಸಗಾರರಿಂದ ಹೆಚ್ಚು ಉತ್ಪಾದನೆ ಪಡೆಯಲು ಸಾಧ್ಯ. ಹಾಗೆಂದ ಮಾತ್ರಕ್ಕೆ ಮಾರ್ಕ್ಸ್‌ವಾದ ಅನೂರ್ಜಿತವಾಗಿ ಇಲ್ಲವಾಗಿ ಬಿಡುವುದಿಲ್ಲ. ಹತ್ತೊಂಬತ್ತನೆಯ ಶತಮಾನದ ಮಧ್ಯಭಾಗದಲ್ಲಿ ಆಗಲೇ ಮಾರ್ಕ್ಸ್ ''ಸತತವಾಗಿ ಹೆಚ್ಚುತ್ತಿರುವ ಮಧ್ಯಮ ವರ್ಗ''ಗಳ ಬಗ್ಗೆ ಬರೆದಿದ್ದಾನೆ. ಅದನ್ನು ಪರಿಗಣನೆಗೆ ತೆಗೆದುಕೊಳ್ಳದ ಮಡಿವಂತ ರಾಜಕೀಯ ಅರ್ಥಶಾಸ್ತ್ರವನ್ನು ಅವನು ನಿಂದಿಸಿದ್ದಾನೆ. ಅವರನ್ನು ಕುರಿತ ಅವನ ವ್ಯಾಖ್ಯಾನ ಇದು : ''ಈ ಮಧ್ಯಮ ವರ್ಗವು ದುಡಿಮೆಗಾರರ ಮತ್ತು ಬಂಡವಾಳಿಗರ ನಡುವೆ ಸ್ಥಾನ ಪಡೆದುಕೊಂಡಿದೆ.'' ಹೀಗೆ ಹೇಳಿದ ಮಾರ್ಕ್ಸ್ ಆಧುನಿಕ ಸಮಾಜದ ಸಂಕೀರ್ಣ ರಚನೆಯನ್ನು ಅವಲೋಕಿಸದೆ ''ಕಡ್ಡಿ ಮುರಿದಂತೆ ಸಮಾಜವನ್ನು ಎರಡೇ ವರ್ಗಗಳಾಗಿ ಭಿನ್ನೈಸಿದ'' ಎಂದು ಭಾವಿಸುವುದು ಕೇವಲ ದಡ್ಡತನವಲ್ಲ, ಅದು ಜಾಣ ದಡ್ಡತನ. ಯಾರೋ ಒಬ್ಬ ವ್ಯಾಖ್ಯಾನಕಾರ ಬರೆದಿದ್ದಾನೆ, ತನ್ನ ಕಾಲದಲ್ಲೇ ದುಡಿಯುವ ವರ್ಗವು ಅದೃಶ್ಯವಾಗಿ ಬಿಡುತ್ತದೆಂದು ಮಾರ್ಕ್ಸ್ ನಿರೀಕ್ಷಿಸಿದ್ದ, ಎಂದು. ಮುಂದುವರಿದು, ಮಾರ್ಕ್ಸ್ ಹೇಳಿದ್ದನೆಂದು ಈ ವಿದ್ವಾಂಸ ಒಂದು ಅಭಿಪ್ರಾಯವನ್ನು ಸೂಚಿಸಿದ್ದಾನೆ : ''ಬಂಡವಾಳಶಾಹಿಯನ್ನು ಹಸಿದವರು, ನಿರ್ಗತಿಕರು, ಬುಡಮೇಲು ಮಾಡುವುದಿಲ್ಲ; ಆದರೆ ಅಭಿವೃದ್ಧಿ

ಹೊಂದಿದ ವೈಜ್ಞಾನಿಕ ತಂತ್ರಗಳು ಅದನ್ನು ಇಳಿಸುತ್ತವೆ. ಉತ್ಪಾದನಾ ಪ್ರಕ್ರಿಯೆಯಲ್ಲಿ ಈ ಆಧುನಿಕ ತಂತ್ರಜ್ಞಾನದ ಅಳವಡಿಕೆಯಿಂದಾಗಿ ಸ್ವತಂತ್ರ ಮತ್ತು ಸಮಾನರಾದ ವ್ಯಕ್ತಿಗಳ ಸಮಾಜವು ಆವಿರ್ಭವಿಸುತ್ತದೆ.'' ಅದಾವ ಮಾರ್ಕ್ಸ್ ಹೀಗೆ ಹೇಳಿದ್ದನೋ ಆ ವಿದ್ವಾಂಸನೊಬ್ಬನೇ ಬಲ್ಲ! ಖಂಡಿತವಾಗಿಯೂ ಮಾರ್ಕ್ಸ್‌ಗೆ ತಿಳಿದಿತ್ತು, ಬಂಡವಾಳಶಾಹಿ ಉತ್ಪಾದನಾ ಪ್ರಕ್ರಿಯೆಯಲ್ಲಿ ತಂತ್ರಜ್ಞಾನ ಮತ್ತು ವಿಜ್ಞಾನ ವಿಶೇಷ ಸ್ಥಾನ ಪಡೆಯುತ್ತಿದ್ದಿತೆಂದು; ಅಂದರೆ, ದುಡಿಮೆಯು ಅದರಿಂದ ಪ್ರಭಾವಿತವಾಗುತ್ತದೆ, ಎಂದು. ''ಯಾವುದೇ ಸಾಮಾನ್ಯ ಜ್ಞಾನದ ಹೆಚ್ಚಳವು ನೇರವಾಗಿ ಉತ್ಪಾದಕ ಶಕ್ತಿಯಾಗುತ್ತದೆ'' ಎಂಬ ಮಾತನ್ನು ''ಗ್ರುಂಡ್ರಿಸ್''ನಲ್ಲಿ ಅವನು ಹೇಳಿದ್ದಾನೆ. ಇಂದಿನ ಮಾಹಿತಿ ತಂತ್ರಜ್ಞಾನ ಎಂಬುದು ಅದೇ ಅಲ್ಲವೆ? ತಾಂತ್ರಿಕ ಮತ್ತು ಆಡಳಿತಾತ್ಮಕ ವಿಭಾಗಗಳು ವಿಶಾಲವಾಗಿ ಹರಡಿದಾಗ ದುಡಿಯುವ ವರ್ಗ ಮತ್ತು ಮಧ್ಯಮ ವರ್ಗದ ನಡುವಿನ ರೇಖೆ ಮಂಕಾಗುತ್ತಾ ಹೋಗುತ್ತದೆ. ಹೊಸ ಮಾಹಿತಿ ತಂತ್ರಜ್ಞಾನದ ಅಂಶಗಳು ಎಷ್ಟೋ ಸಾಂಪ್ರದಾಯಿಕ ಉದ್ಯೋಗಗಳನ್ನು ಇಲ್ಲವಾಗಿಸಿವೆ; ಅದರೊಟ್ಟಿಗೆ ಆರ್ಥಿಕ ಸ್ಥಿರತೆಯೂ ಕುಸಿಯುತ್ತಿದೆ. ಉದ್ಯೋಗಿಗಳು ಮುಂದೇನು ಎಂದು ಸದಾ ತವಕಿಸುತ್ತಾರೆ. ಕಡೆಗೆ ತಮ್ಮ ಉದ್ಯೋಗ ಎಂಥದೆಂದು ಸಹ ತಿಳಿಯದೆ ವಿಹ್ವಲರಾಗುತ್ತಾರೆ. ಇದರಿಂದಾಗಿ ಆ ರೀತಿಯ ಉದ್ಯೋಗಗಳಲ್ಲಿರುವವರು ಹೆಚ್ಚು ಹೆಚ್ಚು ದುಡಿಮೆಯ ಕಕ್ಷೆಗೆ ಸೇರಿಕೊಳ್ಳುತ್ತಿದ್ದಾರೆ ಮತ್ತು ಔದ್ಯಮಿಕ ವಿಭಾಗದ ದುಡಿಯುವ ವರ್ಗ ಹೊಸ ರೀತಿಯಲ್ಲಿ ರೂಪುಗೊಳ್ಳುತ್ತಿದೆ. ''ಹತ್ತೊಂಬತ್ತನೆಯ ಶತಮಾನದ ದುಡಿಯುವ ವರ್ಗದ ಆರ್ಥಿಕ ತಲ್ಲಣಗಳು ಇಂದು ಮಧ್ಯಮ ವರ್ಗದಲ್ಲಿ ಕಾಣಬರುತ್ತಿದೆ,'' ಎಂದು ಜಾನ್ ಗ್ರೇ ಹೇಳಿರುವುದು ಸಮಂಜಸ. ಅಂದು ಆಸ್ತಿ ಇಲ್ಲದೆ ಅಭದ್ರತೆ, ಇಂದು ಸ್ವಲ್ಪ ಆಸ್ತಿ ಇದ್ದರೂ ಅಭದ್ರತೆ! ಉಪಾಧ್ಯಾಯರು, ಸಾಮಾಜಿಕ ಕಾರ್ಯಕರ್ತರು, ಪತ್ರಕರ್ತರು, ಕಾರಕೂನರು, ಆಡಳಿತಾಧಿಕಾರಿಗಳು, ಎಲ್ಲರೂ ಇದನ್ನು ಅನುಭವಿಸುತ್ತಿದ್ದಾರೆ. ಹೊಸ ಆಡಳಿತಾತ್ಮಕ ಶಿಸ್ತು ಬೇರೆ ಹೇರಿಕೊಂಡಿದೆ ಮತ್ತು ಎಂಟು ಗಂಟೆಯ ದುಡಿಮೆ ಎಂಬ ಸೂತ್ರ ಎಲ್ಲೋ ಮಾಯವಾಗಿ ಹೋಗಿದೆ, ಇದು ಈ ಗುಂಪಿನ ಜನರನ್ನು ದುಡಿಯುವ ವರ್ಗದ ಸಾಲಿಗೆ ಎಳೆದುತರುತ್ತಿದೆ. ರಾಜಕೀಯ ಬಿಕ್ಕಟ್ಟು ತಲೆದೋರಿದಾಗ ಇವರೆಲ್ಲಾ ನೈಜ ದುಡಿಯುವ ವರ್ಗದೊಡನೆ ಕೈಜೋಡಿಸುತ್ತಾರೆ.

ಮೇಲಂತಸ್ತಿನ ವ್ಯವಸ್ಥಾಪಕರು, ಆಡಳಿತಗಾರರು, ಉದ್ದಿಮೆ ಕಾರ್ಯನಿರ್ವಾಹಕರು, ಮುಂತಾದವರೂ ಇವರೊಟ್ಟಿಗೆ ಸೇರಿದರೆ ಸಮಾಜವಾದಿಗಳಿಗೆ ಸಂತೋಷವೇ. ನ್ಯಾಯಮೂರ್ತಿಗಳು, ನಟ-ನಟಿಯರು, ಮಾಧ್ಯಮಗಳ ಮಾಲೀಕರು, ಸೈನ್ಯಾಧಿಕಾರಿಗಳು, ಇತ್ಯಾದಿ ಯಾರು ಸೇರಿದರೂ ಸಮಾಜವಾದಿಗಳ ಅಭ್ಯಂತರವೇನೂ ಇಲ್ಲ. ನಾರಾಯಣಮೂರ್ತಿ, ಭೈರಪ್ಪ, ಟೆಂಡುಲ್ಕರ್, ಶೈಲೇಂದ್ರಕುಮಾರ್, ದೀಪಿಕಾ ಪಡುಕೋಣೆ, ಹೀಗೆ ಎಲ್ಲರಿಗೂ ಸ್ವಾಗತವಿದೆ. ಬಹುಶಃ ಅವರೆಲ್ಲಾ ತಮಗೆ ತಾವು ಸ್ವಲ್ಪ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕಾದೀತು, ಅಷ್ಟೆ. ಮೊದಲಿಗೆ ಅವರು ಹಂಗಾಮಿ ಸದಸ್ಯರಾಗಬೇಕೇನೋ, ಆದರೆ ಪ್ರವೇಶಕ್ಕೆ ಅಡ್ಡಿಯಿಲ್ಲ. ಸಮಾಜವಾದಿ ವ್ಯವಸ್ಥೆಯ ನಿರ್ಮಾಣಕ್ಕೆ ಎಲ್ಲ ಕೈಗಳದ್ದೂ ಪಾತ್ರವಿರುತ್ತದೆ. ಒಂದೇ ತೊಂದರೆಯೆಂದರೆ ಈ ಜನ ತಮ್ಮ ಪ್ರತಿಷ್ಠಿತ ಸಾಮಾಜಿಕ ಸ್ಥಾನಗಳನ್ನು ಬಿಟ್ಟುಕೊಡಲು ಸಿದ್ಧರಿಲ್ಲದಿರಬಹುದು ಮತ್ತು ಪ್ರಸ್ತುತ ಅವರನ್ನೆಲ್ಲಾ ಪೋಷಿಸುತ್ತಿರುವ ವ್ಯವಸ್ಥೆಗೆ ಅಡ್ಡಬಿದ್ದು ಅಂಟಿಕೊಂಡಾರು, ಅಷ್ಟೆ. ದುಡಿಯುವ ವರ್ಗದ ಬದಲು ಸಿನಿಮಾ ನಟರು ಮತ್ತು ಉಡುಪು ವಿನ್ಯಾಸಕಾರರೇ ಇಂದಿನ ವ್ಯವಸ್ಥೆಯನ್ನು ತೊಡೆದು ಹಾಕಲು ಆಸಕ್ತರು ಮತ್ತು ಸಮರ್ಥರು ಎಂದಾದರೆ ಉಡುಪು ಹೊಲೆಯುವ ಕಾರ್ಖಾನೆಯ ಹೆಂಗೆಳೆಯರನ್ನು ಹೋರಾಟಕ್ಕಿಳಿಸುವುದೇ ಬೇಡ, ನಮಗೇನಂತೆ ಇವರೇ ಹೋರಾಡಿ ಉನ್ನತ ಸಾಮಾಜಿಕ ಸ್ವರೂಪವಾದ ಸಮಾಜವಾದಿ ವ್ಯವಸ್ಥೆಗೆ ನಾಂದಿ ಹಾಡಲಿ! ಮಾರ್ಕ್ಸ್‌ವಾದಕ್ಕೆ ವರ್ಗಪ್ರಜ್ಞೆಯ ಬಗೆಗೆ ನಿರ್ದಿಷ್ಟ ನಿಲುವಿದೆ, ಆದರೆ ವರ್ಗ ವ್ಯಾಮೋಹವೇನೂ ಇಲ್ಲ. ಇದರ ಅರ್ಥ ಸರಳವಾಗಿದೆ : ''ದುಡಿಯುವ ವರ್ಗವೇ ಇಲ್ಲವಾಗಿದೆ'' ಎಂದು ಘೋಷಿಸುತ್ತಿರುವವರದು ಆರ್ತನಾದ. ನಮ್ಮ ಪ್ರಸ್ತುತ ಸನ್ನಿವೇಶ ಹಾಗೇನೂ ಮಾರ್ಪಟ್ಟಿಲ್ಲ. ನಮ್ಮ ಮೇಲೆ ಸವಾರಿ ಮಾಡುತ್ತಿರುವ ಆ ಆಳುವ ವರ್ಗ ಇನ್ನೂ ಹಾಗೇ ಇದೆ. ಅವರನ್ನೆಲ್ಲಾ ''ಬಂಡವಳಿಗ ಕೇಡಿಗಳು'' ಎಂದೇನೂ ಮೂದಲಿಸಿ ಸುಮ್ಮನಾಗುವ ಪರಿಸ್ಥಿತಿ ಇಲ್ಲ. ಆ ಆಳುವ ವರ್ಗದಲ್ಲಿ ಶ್ರೀಮಂತ ಬಂಡವಳಿಗರು, ನ್ಯಾಯಮೂರ್ತಿಗಳು, ಮಠಾಧೀಶರು, ಮುಲ್ಲಾಗಳು, ಮರಿ ಪೋಪ್‌ಗಳು, ಮಾಧ್ಯಮಗಳ ಮಾಲೀಕರು, ಪೊಲೀಸ್ ಮತ್ತು ಮಿಲಿಟರಿ ಉನ್ನತಾಧಿಕಾರಿಗಳು, ಬಂಡವಳಿಗರ ಭಂಟರಂತೆ ವರ್ತಿಸುವ ಪಾರ್ಲಿಮೆಂಟ್ ಮತ್ತು ಶಾಸನ ಸಭೆಗಳ ಸದಸ್ಯರು, ಕೆಲವು ಪ್ರತಿಷ್ಠಿತ ಪ್ರಾಧ್ಯಾಪಕರು, ಭಾರಿ ಭೂಮಾಲೀಕರು, ಸ್ಟಾಕ್ ಎಕ್ಸ್‌ಚೇಂಜ್ ಧೂರ್ತರು, ಉದ್ಯಮಪತಿಗಳು, ಅತ್ಯಂತ ಖಾಸಗಿಯಾದ ಆದರೆ ಹೆಸರಿಗೆ ಸಾರ್ವಜನಿಕವೆಂದು ಕರೆಯಲಾದ ಶಾಲೆಗಳ ಮಾಲೀಕರು, ಅಹ್ಲುವಾಲಿಯ, ಎಲ್ಲರೂ ಸೇರಿದ್ದಾರೆ. ಅವರೆಲ್ಲರೂ ಬಂಡವಳಿಗರಲ್ಲ, ಆದರೆ ಅವರು ಬಂಡವಾಳಶಾಹಿಯ ಕಾರ್ಯಭಾರ ಹೊತ್ತಿದ್ದಾರೆ. ಬಂಡವಾಳದಿಂದ ಬರುವ ಮಿಗುತಾಯ ಮೌಲ್ಯದಿಂದ ಬದುಕುತ್ತಾರೋ, ಸಂಬಳ ಪಡೆದು ಜೀವಿಸುತ್ತಾರೋ, ಹೇಗೂ ಇರಲಿ. ಅದು ಮುಖ್ಯವೇ ಅಲ್ಲ. ವೇತನ ಪಡೆದು ಬದುಕುವವರೆಲ್ಲಾ ದುಡಿಯುವ ವರ್ಗದವರಲ್ಲ. ಕ್ರಿಕೆಟ್ ಧಾಂಡಿಗರು ಕೋಟಿಗಟ್ಟಲೆ ''ವೇತನ'' ಪಡೆಯುತ್ತಾರೆ, ಆದರೆ ಅವರು ದುಡಿಯುವ ವರ್ಗದವರೇನು? ಅಂತೆಯೇ ಮಧ್ಯಸ್ತರದಲ್ಲಿ ಆಡಳಿತಗಾರರಿದ್ದಾರೆ, ಕಾಕೋಡ್ಕರ್-ಶ್ರೀನಿವಾಸನ್‌ರಂತಹ ವಿಜ್ಞಾನಿಗಳಿದ್ದಾರೆ, ಎನ್‌ಜಿಓಗಳನ್ನು ನಡೆಸುವ ದೊಡ್ಡ ಮನುಷ್ಯರಿದ್ದಾರೆ. ಅವರಿಗಿಂತ ಕೆಳಗಿನ ಹಂತದಲ್ಲಿ ನಿಜವಾದ ಮಧ್ಯಮ ವರ್ಗವಿದೆ: ಉಪಾಧ್ಯಾಯರು, ಬ್ಯಾಂಕ್ ನೌಕರರು, ಸಾಧಾರಣ ವ್ಯಾಪಾರಿಗಳು, ಇತ್ಯಾದಿ. ಈ ವರ್ಗ ಮತ್ತು ಸಾಂಪ್ರದಾಯಿಕ ದುಡಿಯುವ ವರ್ಗ ಸೇರಿ ''ಇಂದಿನ ದುಡಿಯುವ ವರ್ಗ'' ಎಂಬ ತಾಂತ್ರಿಕ ನಾಮಧೇಯಕ್ಕೆ ಅರ್ಹವಾಗುತ್ತದೆ. ಪ್ರಪಂಚದ ಬಹುಪಾಲು ಜನ ಇದಕ್ಕೆ ಸೇರಿರುವವರೇ ಆಗಿದ್ದಾರೆ. ಹೀಗಿರುವಾಗ ''ದುಡಿಯುವ ವರ್ಗ'' ಇಲ್ಲವಾಗಿದೆ ಯೆಂದರೆ ಏನರ್ಥ? ಅವರೇನು ರಾಜ-ಮಹಾರಾಜರಂತೆ ನಿಷ್ಕ್ರಮಿಸಿದ್ದಾರೆಯೆ?

ಇನ್ನು ಪ್ರಪಂಚದ ಕೊಳೆಗೇರಿಗಳ ನಿವಾಸಿಗಳು. ಅವರ ಸಂಖ್ಯೆ ಸದಾ ಹೆಚ್ಚುತ್ತಿರುವುದು ಬಂಡವಾಳಶಾಹಿಯ ಕ್ಷುದ್ರ ವರ್ತನೆಯಿಂದ. ಪಾಸ್ಕೊ, ನಾರಾಯಣಮೂರ್ತಿ, ರವಿಶಂಕರ ಗುರೂಜಿ, ರಾಬರ್ಟ್ ವದ್ರಾ, ಎಲ್ಲರೂ ಭೂಮಿ ಕಿತ್ತುಕೊಂಡು ರೈತರನ್ನು ಕೊಳೆಗೇರಿಗಳಿಗೆ ನೂಕುತ್ತಾರೆ. ಅವರು ಅಭಿಜಾತ ಅರ್ಥದಲ್ಲಿ ''ದುಡಿಯುವ ವರ್ಗ'' ದವರಲ್ಲ, ಆದರೆ ಉತ್ಪಾದನಾ ಪ್ರಕ್ರಿಯೆಗೆ ಹೊರತಾದವರೂ ಅಲ್ಲ. ಅತಂತ್ರದ ದುಡಿಮೆಯಲ್ಲಿರುವ ದುಡಿಯುವ ಜನ ಅವರು. ಅವರಿಗೆ ರಕ್ಷಣೆ ನೀಡುವ ''ಟ್ರಿಬ್ಯೂನಲ್'' ಮತ್ತು ನ್ಯಾಯಾಲಯ ಯಾವುದೂ ಇಲ್ಲ, ಏಕೆಂದರೆ ಅವರಿಗಾಗಿ ಕಾನೂನೆಂಬುದೇನೂ ಇಲ್ಲ! ಬಾಲ ಕಾರ್ಮಿಕರಿಗೆ ಎಂತಹ ರಕ್ಷಣೆ ಇದೆ? ಕಾನೂನು ರೀತ್ಯಾ ಅವರು ದುಡಿಯುವಂತೆಯೇ ಇಲ್ಲವಲ್ಲ, ಆದರೆ ಸಹಸ್ರಾರು ಮಕ್ಕಳು ತಮ್ಮದೇ ಜೀವನದ ಕಾನೂನಿನಡಿ ಕೆಲಸ ಮಾಡಿ ಜೀವಿಸುತ್ತಿದ್ದಾರೆ. ಬಂಡವಾಳಶಾಹಿಗೆ ಕನಿಕರವೂ ಇಲ್ಲ, ನಾಚಿಕೆಯೂ ಇಲ್ಲ; ಅವರು ಇಲ್ಲವೇ ಇಲ್ಲವೆಂಬಂತೆ ನಟಿಸುತ್ತದೆ, ಅದಕ್ಕೆ ಮೊಂಟೆಕ್ ಸಿಂಗ್ ಅಹ್ಲುವಾಲಿಯ ತಲೆದೂಗುತ್ತಾರೆ! ಪ್ರಪಂಚದ ಕೊಳೆಗೇರಿಗಳ ನಿವಾಸಿಗಳೆಲ್ಲರ ಸಾಮಾಜಿಕ ಬಣ ಬಹು ದೊಡ್ಡದು, ಅತಿವೇಗವಾಗಿ ಬೆಳೆಯುತ್ತಿದೆ ಕೂಡ. ಬಾಳ ಠಾಕ್ರೆ, ತೊಗಾಡಿಯಾ, ಮುಂತಾದವರಿಗೆ ಈ ಜನರು ಮದ್ದು-ಗುಂಡುಗಳಾಗಿ ಬಿಡುವ ಸಂಭವವೂ ಇದೆ. ಅವರೆಲ್ಲಾ ಸಂಘಟಿತರಾಗಿ ದುಡಿಯುವ ವರ್ಗದ ಜೊತೆ ಹೋರಾಟಕ್ಕಿಳಿಯುವ ಸಾಧ್ಯತೆ ಮತ್ತು ಅವಶ್ಯಕತೆ ಇದ್ದೇ ಇದೆ.

ದುಡಿಯುವ ಜನ ಉದ್ದಿಮೆಯ ಕೇಂದ್ರಗಳಲ್ಲಿ ಹೆಚ್ಚು ಹೆಚ್ಚು ಸೇರಿ, ಸಂಘಟಿತರಾಗಿ, ರಾಜಕೀಯ ವಿಮುಕ್ತಿಗಾಗಿ ಹೋರಾಡಲು ಸಮರ್ಥರಾಗುತ್ತಾರೆಂದು ಮಾರ್ಕ್ಸ್ ಭಾವಿಸಿದ್ದ. ದುಡಿಯುವವರನ್ನು ಬಂಡವಾಳಶಾಹಿಯು ಒಟ್ಟಾಗಿಸಿತು, ಅದಕ್ಕೆ ತನ್ನ ಹಿತವೇ ಕಾರಣವಾಗಿತ್ತು. ಬಂಡವಾಳಶಾಹಿಯು ನಿರೀಕ್ಷಿಸಿರದಿದ್ದ ರೀತಿಯಲ್ಲಿ ದುಡಿಯುವ ಜನ ಸಂಘಟಿತರಾಗಿ ಒಂದು ರಾಜಕೀಯ ಶಕ್ತಿಯಾದರು. ದುಡಿಯುವ ಜನರಿಲ್ಲದೆ ಬಂಡವಾಳಶಾಹಿಯು ಬಾಳಲಾರದು, ಆದರೆ ಬಂಡವಾಳಶಾಹಿ ಇಲ್ಲದೆ ದುಡಿಯುವ ಜನ ಬಾಳಬಲ್ಲರು, ಇನ್ನೂ ಉತ್ತಮವಾದ ಜೀವನ ನಡೆಸಬಲ್ಲರು, ಪರ್ಯಾಯ ಸಂಸ್ಕೃತಿಗೆ ಬುನಾದಿ ರಚಿಸಿಕೊಡಬಲ್ಲರು. ಮಾರ್ಕ್ಸ್ ನಿರೀಕ್ಷಿಸಿರದಿದ್ದ ನೂರಾರು ತಾಣಗಳಲ್ಲಿ ಅಸಂಘಟಿತ ದುಡಿಮೆಗಾರರಿದ್ದಾರೆಂಬುದು ಇಂದಿನ ವಿಶೇಷ ಸನ್ನಿವೇಶ. ಅವರದೂ ಒಂದು ಸಮೂಹ ಅಥವಾ ಸಮುದಾಯ ರಚನೆಗೊಂಡಿದೆ. ಇಂದಿನ ವ್ಯವಸ್ಥೆ ಕುಸಿಯಬೇಕೆಂಬ ಆಶಯ ಅವರದೂ ಹೌದು. ಅದು ನಾಶಗೊಂಡರೆ ಅವರ ಬಂಧನದ ಸರಪಳಿಗಳಲ್ಲದೆ ಬೇರೇನನ್ನೂ ಅವರು ಕಳೆದುಕೊಳ್ಳುವುದಿಲ್ಲ. ದುಡಿಯುವ ವರ್ಗ ಮತ್ತು ಅಸಂಘಟಿತ ದುಡಿಯುವ ಜನ, ಇವರ ಸಂಘಟಿತ ಹೋರಾಟವು ಸಮಾಜವಾದದತ್ತ ಸಮಾಜವನ್ನು ಕೊಂಡೊಯ್ಯುತ್ತದೆ.

ಈಗ ಹೇಳಿ, ವರ್ಗಗಳು ಇಲ್ಲವಾಗಿಬಿಟ್ಟಿವೆಯೆ? ದುಡಿಯುವ ವರ್ಗ ಮಾಯವಾಗಿದೆಯೆ? ಬಂಡವಾಳಶಾಹಿ ನೂರ್ಕಾಲ ಬಾಳುತ್ತದೆಯೆ ಮತ್ತು ಬಾಳಬೇಕೆ? ವರ್ಗಗಳು ಅಪ್ರಸ್ತುತ; ಈಗೇನಿದ್ದರೂ ಜನಾಂಗ, ಲಿಂಗ, ವಸಾಹತೋತ್ತರ, ಎಂಬ ಕಲ್ಪನೆಗಳೇ ಇರುವುದು, ಎನ್ನುವವರಿದ್ದಾರೆ. ಅವೆಲ್ಲಾ ಇವೆ, ಅವು ಬಹುಮುಖ್ಯ; ಆದರೆ ಅವಷ್ಟೇ ಸಮಾಜದ ಘಟಕಗಳಲ್ಲ, ವಿಶಾಲವಾದ ಘಟಕಗಳೆಂದರೆ ದುಡಿಯುವ ವರ್ಗ ಮತ್ತು ಆಳುವ ವರ್ಗ. ಇಂದಿನ ದುಡಿಯುವ ವರ್ಗವು ನಾಳಿನ ಆಳುವ ವರ್ಗ. ಮಾರ್ಕ್ಸ್ ನಿರೂಪಿಸಿದ್ದು ಅದನ್ನೇ. ●

# ವಿಜಾಪುರ ಸಾಹಿತ್ಯ ಸಮ್ಮೇಳನದಲ್ಲಿ ನವಕರ್ನಾಟಕ, ಹೊಸತು ಮಳಿಗೆಗಳು









ಐತಿಹಾಸಿಕ ನಗರ ವಿಜಾಪುರದಲ್ಲಿ
ಕಳೆದ ತಿಂಗಳು ನಡೆದ
೭೯ನೇ ಅಖಿಲ ಭಾರತ
ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ
ನವಕರ್ನಾಟಕ ಪುಸ್ತಕ ಹಾಗೂ
ಹೊಸತು ಪತ್ರಿಕೆ ಮಳಿಗೆಗಳ
ಮುಂದೆ ನೆರೆದ ಪುಸ್ತಕ ಪ್ರೇಮಿಗಳು

ಛಾಯಾಚಿತ್ರಗಳು : ಸುನೀಲಕುಮಾರ ಸುಧಾಕರ

## ಸುದ್ದಿ ಚಿತ್ರ




ಮೈಸೂರಿನ ಜೆ.ಎಸ್.ಎಸ್. ಕಾನೂನು ಕಾಲೇಜಿನ ಸಭಾಂಗಣದಲ್ಲಿ ಶ್ರೀ ವೈ. ಜಿ. ಮುರಳೀಧರನ್ ಅವರು ಕನ್ನಡ ಹಾಗೂ ಇಂಗ್ಲಿಷ್‌ನಲ್ಲಿ ರಚಿಸಿ ನವಕರ್ನಾಟಕ ಪ್ರಕಟಿಸಿದ 'ಭ್ರಷ್ಟಾಚಾರದ ಸುಳಿಯಲ್ಲಿ ಭಾರತ' ಮತ್ತು 'Corruption - the rot within' ಎಂಬ ಎರಡು ಕೃತಿಗಳನ್ನು ಅನಾವರಣ ಮಾಡಲಾಯಿತು. ಜೆ.ಎಸ್.ಎಸ್. ಕಾಲೇಜಿನ ಪ್ರಾಂಶುಪಾಲ ಪ್ರೊ|| ಕೆ. ಎಸ್. ಸುರೇಶ್ ಅಧ್ಯಕ್ಷತೆಯಲ್ಲಿ ಪ್ರೊ|| (ಡಾ|) ಆರ್. ವೆಂಕಟರಾವ್ ಕೃತಿ ಬಿಡುಗಡೆ ಮಾಡಿದರು. ಸಭಿಕರೊಂದಿಗೆ ಈ ಪುಸ್ತಕದಲ್ಲಿನ ವಿಷಯವಾದ ಭ್ರಷ್ಟಾಚಾರದ ಬಗ್ಗೆ ಸಂವಾದವನ್ನೂ ಈ ಸಂದರ್ಭದಲ್ಲಿ ನಡೆಸಿ ಕೊಡಲಾಯಿತು.

# ಕೊಡಗಿನ ಗೌರಮ್ಮ - ನೂರರ ನೆನಪು

**ಡಾ॥ ಎನ್. ಗಾಯತ್ರಿ**

ನವೋದಯ ಸಾಹಿತ್ಯ ಸಂದರ್ಭದಲ್ಲಿ ಮೂಡಿಬಂದ ಕೊಡಗಿನ ಗೌರಮ್ಮ ಕನ್ನಡದ ಬರಹಗಾರ್ತಿಯರಲ್ಲೇ ವಿಶಿಷ್ಟರಾದವರು. ಅವರು ಕಲಾತ್ಮಕ ಸೃಜನಶೀಲತೆ ಮತ್ತು ಸಾಮಾಜಿಕ ಕ್ರಿಯಾಶೀಲತೆಯ ಅಪೂರ್ವ ಸಂಗಮ. ಮಾರ್ಚ್ 5ರಂದು ನೂರು ವರ್ಷಗಳ ಹಿಂದೆ ಜನಿಸಿದ ಗೌರಮ್ಮನವರು ಇಂದಿಗೂ ಕನ್ನಡ ಮನಸ್ಸಿನಲ್ಲಿ ಚಿರಸ್ಥಾಯಿಯಾಗಿ ಉಳಿದಿದ್ದಾರೆ. ಅಂತರರಾಷ್ಟ್ರೀಯ ಮಹಿಳಾ ದಿನಾಚರಣೆಯ ಸಂದರ್ಭದಲ್ಲಿ ಲೇಖಕಿಯ ಬದುಕು-ಬರಹಗಳನ್ನು ಇಲ್ಲಿ ನೀಡುತ್ತಿದ್ದೇವೆ. ಜೊತೆಗೆ ಅವರ ನೆನಪಿನ ಜಾಡು ಹಿಡಿದು ಹೊರಟ ಲೇಖಕಿಯರು ಸಂಗ್ರಹಿಸಿರುವ ಅವರ ಒಡನಾಟದ ಕೆಲವು ಚಿತ್ರಪಟಗಳು ಇಲ್ಲಿವೆ.



ಇಪ್ಪತ್ತನೆಯ ಶತಮಾನದ ಆದಿ ಭಾಗ. ಸುಮಾರು ನೂರು ವರ್ಷಗಳ ಹಿಂದಿನ ಮಾತು. ಹೊಸ ಕನ್ನಡ ನವೋದಯ ಸಾಹಿತ್ಯದ ಪರ್ವಕಾಲ. ಸ್ವಾತಂತ್ರ್ಯ ಚಳುವಳಿಯ ಕಾವು, ಸಮಾಜ ಸುಧಾರಣೆಯ ಹುರುಪು, ಆಧುನಿಕ ವಿಚಾರಗಳ ಸೆಳೆತ – ಎಲ್ಲವನ್ನೂ ತನ್ನಲ್ಲಿ ಹುದುಗಿಸಿಕೊಂಡು ಸಾಹಿತ್ಯ ಕೃಷಿಗೆ ತೊಡಗಿದ ಎಳೆಯ ಜೀವವೊಂದು ಬೆಳೆದ ಫಸಲು ಸ್ವಲ್ಪವೇ ಆದರೂ, ಸತ್ವದಲ್ಲಿ ಗಟ್ಟಿಯಾಗಿತ್ತು. ಈ ಕೃಷಿಕಳು ಮತ್ತಾರೂ ಅಲ್ಲ, ಅವರೇ ಕೊಡಗಿನ ಗೌರಮ್ಮ. ಅವರ ಸಾಹಿತ್ಯದ ಚಿಗುರು ವೃಕ್ಷವಾಗುವ ಮೊದಲೇ, ಅದು ಕಂಬನಿಯ ಕಡಲ ಪಾಲಾಗಿತ್ತು. ಅಂದು ಅವರು ಮೂಡಿಸಿದ ಹೆಜ್ಜೆ ಗುರುತುಗಳು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಮಾಸದಂತಹವು. ಈ ಬರಹಗಾರ್ತಿಯು ಹುಟ್ಟಿ ಇದೇ ಮಾರ್ಚ್ ೫ಕ್ಕೆ ನೂರು ವರ್ಷಗಳು ತುಂಬಿ ನೂರೊಂದಕ್ಕೆ ಕಾಲಿಡುತ್ತದೆ.

ಕೊಡಗಿನ ಹೆಸರಿನೊಂದಿಗೆ ತಳುಕು ಹಾಕಿಕೊಂಡ ಗೌರಮ್ಮ ಬದುಕಿದ್ದು ಇಪ್ಪತ್ತೇಳು ವರ್ಷ. ಬರೆದದ್ದು ಕೇವಲ ಇಪ್ಪತ್ತೊಂದು ಕಥೆಗಳು. ಅವರ ಸಾಹಿತ್ಯ ಕೃಷಿಯ ಆಯಸ್ಸು ಕೂಡ ಕೇವಲ ಏಳು ವರ್ಷ. ಇಂಥ ಅಲ್ಪಾಯುವನ್ನು ಸಾರಸ್ವತ ಲೋಕ ನೂರು ವರ್ಷಗಳ ನಂತರವೂ ನೆನೆಸಿ ಕೊಳ್ಳುತ್ತಿದೆಯೆಂದರೆ ಈ ಜೀವಿಯ ಸತ್ವ ಅದೆಷ್ಟು ಗಟ್ಟಿಯಿರ ಬಹುದು! ಗೌರಮ್ಮನವರ ಬದುಕು ಬರಹಗಳೆರಡೂ ಗಮನಾರ್ಹವಾದುದು ಮತ್ತು ಕುತೂಹಲಕಾರಿಯಾದುದು. ಜೀವಿತದ ಅಲ್ಪಾವಧಿಯಲ್ಲಿ ಸಾಹಿತ್ಯಿಕವಾಗಿ ಮತ್ತು ಸಾಮಾಜಿಕವಾಗಿ ಎರಡೂ ರಂಗಗಳಲ್ಲೂ ಅಪಾರ ಸಾಧನೆ ಮಾಡಿದ ಈ ಚೈತನ್ಯದ ಪುಟ್ಟ ಹೆಜ್ಜೆಗಳು ಕರ್ನಾಟಕದ ಚರಿತ್ರೆಯಲ್ಲಿ ಮಾಸದಂತಹವು. ತಿರುಮಲಾಂಬ, ಕಲ್ಯಾಣಮ್ಮನವರ ಪರಂಪರೆಯ ಮುಂದುವರಿಕೆಯಾದ ಗೌರಮ್ಮನವರ ಸಾಹಿತ್ಯ ಅವರು ಕಾಣಿಸಿದ ಸಾಮಾಜಿಕ ಕಳಕಳಿಗೆ ಕಲೆಯ ಹೊದಿಕೆಯನ್ನು ನೇಯ್ದರು. ಸ್ತ್ರೀಕೇಂದ್ರಿತ ಸಮಸ್ಯೆಗಳನ್ನು ಕುರಿತೇ ಗೌರಮ್ಮನವರೂ ಬರೆದರೂ ಅವರುಗಳಿಗಿಂತ ಹೆಚ್ಚು ಪ್ರಗತಿಪರವೂ, ಕಲಾತ್ಮಕವೂ, ಸ್ಪಷ್ಟ ಸ್ತ್ರೀಪರ ನೆಲೆಯ ಬರವಣಿಗೆಯನ್ನು ಕೊಟ್ಟದ್ದು ಗೌರಮ್ಮನವರ ಹೆಗ್ಗಳಿಕೆ.

ಬ್ರಿಟಿಷರ ಆಳ್ವಿಕೆಯ ಕಾರಣದಿಂದಾಗಿ ಕೆಲವು ವಿಷಯಗಳಲ್ಲಿ ಆಧುನಿಕತೆಯ ಸ್ಪರ್ಶವು ಇತರ ಭಾಗಗಳಿಗಿಂತ ಹೆಚ್ಚಾಗಿ ಕೊಡಗಿನ ನೆಲದಲ್ಲಿ ಆಶ್ಚರ್ಯಕರವಾಗಿ ಕಾಣಿಸಿತು. ೧೯೧೨ರ ಮಾರ್ಚ್ ೫ರಂದು ಜನಿಸಿದ ಗೌರಮ್ಮ ಮಡಿಕೇರಿಯ ಕಾನ್ವೆಂಟಿನಲ್ಲಿ ಎಸ್.ಎಸ್.ಎಲ್.ಸಿ. ಯವರೆಗೆ ಓದಿದ್ದರು. ಆಧುನಿಕ ಮನೋಭಾವದ ಗೌರಮ್ಮನವರು ಈಜುತ್ತಿದ್ದರು ಮತ್ತು ಟೆನ್ನಿಸ್ ಆಡುತ್ತಿದ್ದರು. ಅವರಿಗೆ ಆ ಕಾಲದ ಹಲವಾರು ಹಿರಿಯ, ಕಿರಿಯ ಸಾಹಿತಿಗಳೊಂದಿಗೆ ಒಡನಾಟವಿತ್ತು. ಹಿಂದಿ, ಇಂಗ್ಲಿಷ್ ಮತ್ತು ಕನ್ನಡದಲ್ಲಿ ಬರೆಯುತ್ತಿದ್ದ ಪದ್ಮಾವತಿ ರಸ್ತೋಗಿ, ಸಾಮಾಜಿಕ ಕಾರ್ಯಕರ್ತೆ ಹಾಗೂ ಲೇಖಕಿ ಆರ್. ಕಲ್ಯಾಣಮ್ಮ, ಮಾಸ್ತಿ, ಬೇಂದ್ರೆ, ಶಿವರಾಮ ಕಾರಂತರ ಪರಿಚಯ ಈಕೆಗಿತ್ತು. ಭಾರತಿಸುತ, ಮುಳಿಯ ತಿಮ್ಮಪ್ಪಯ್ಯ ಹಾಗೂ ದಬಾ ಕುಲಕರ್ಣಿಯವರು ಇವರ ಕೆಲವು ಕಥೆಗಳನ್ನು ಮೆಚ್ಚಿದ್ದರು. ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ವಲಯದ ಚರ್ಚೆಗಳೊಂದಿಗೆ ಈಕೆ ಹೊಂದಿದ್ದ ಸಂಪರ್ಕ ಅವರ ಬರವಣಿಗೆಗೆ ಹೆಚ್ಚು ಕಸುವನ್ನು ತುಂಬಿತು. ದೂರದ ಜಮಖಂಡಿಯಲ್ಲಿ ನಡೆದ ಸಾಹಿತ್ಯ ಸಮ್ಮೇಳನದಲ್ಲಿ ಭಾಗವಹಿಸಿದ್ದರು. ಮಡಿಕೇರಿಯಲ್ಲಿ ನಡೆದ ಐತಿಹಾಸಿಕ ಸಾಹಿತ್ಯ ಸಮ್ಮೇಳನದಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದ ಮಹಿಳೆ ಈಕೆ.

ಗಾಂಧಿಯ ಧೀರ ವ್ಯಕ್ತಿತ್ವದಿಂದ ಆಕರ್ಷಿತರಾಗಿದ್ದ ಗೌರಮ್ಮ ಗಾಂಧಿಯ ವಿಚಾರಗಳನ್ನು ತಮ್ಮ ಜೀವನದಲ್ಲೂ ಅಳವಡಿಸಿಕೊಂಡದ್ದಲ್ಲದೇ, ಅವನ್ನು ಬರಹದ ವಲಯದೊಳಗೂ ಎಳೆದು ತಂದರು. ಗಾಂಧಿ ಭಕ್ತೆಯಾಗಿದ್ದ ಈಕೆ ಖಾದಿ ಬಟ್ಟೆ ತೊಡುತ್ತಿದ್ದರು. ಅವರಿದ್ದ ಮಡಿಕೇರಿಗೆ ಗಾಂಧಿ ಬರುವರೆಂದು ತಿಳಿದು ಅವರನ್ನು ತನ್ನ ಮನೆಗೆ ಕರೆಸಿಕೊಳ್ಳಬೇಕೆಂದೇ ಉಪವಾಸ ಕುಳಿತ ಛಲವಂತೆ ಈಕೆ. ಗಾಂಧೀಜಿಯವರ ‘ಹರಿಜನ’ ಪತ್ರಿಕೆಯಲ್ಲಿ ದಾಖಲಾದ ಮೊದಲ ಮಹಿಳೆಯಾದ ಗೌರಮ್ಮ ಗಾಂಧಿಯ ಪ್ರೀತಿಯನ್ನು ಗೆದ್ದವರು. ಉಪವಾಸ ಕೂತು, ಗಾಂಧಿಯನ್ನು ತನ್ನ ಮನೆಗೆ ಬರುವಂತೆ ಮಾಡಿಕೊಂಡ ಗೌರಮ್ಮ ಮಂಗಳಸೂತ್ರ ಮತ್ತು ಮೂಗುತಿಯೊಂದನ್ನು ಬಿಟ್ಟು, ತನ್ನೆಲ್ಲ ಒಡವೆಗಳನ್ನು ಸ್ವಾತಂತ್ರ್ಯ ಚಳುವಳಿಗೆ ದೇಣಿಗೆಯಾಗಿ ಕೊಟ್ಟುಬಿಟ್ಟರು. ಅವರ ಬದುಕಿನ ಸರಳತೆಯಷ್ಟೇ ನಮಗೆ ಅತ್ಯಂತ ಪ್ರಿಯವಾಗುವುದು ಅವರ ಸಾಮಾಜಿಕ ಕ್ರಿಯಾಶೀಲತೆ. ಪಕ್ಷಕ್ಕೆ ಸದಸ್ಯರನ್ನು ಮಾಡುವುದರ ಜೊತೆಗೆ ಕಾಂಗ್ರೆಸ್ ಪಕ್ಷದ ಪರವಾಗಿ ಕೊಡಗಿನ ಸುತ್ತೆಲ್ಲ ಓಡಾಡಿದರು. ರಾಜಕೀಯ ಕ್ರಿಯಾಶೀಲತೆಯ ಜೊತೆಗೆ ಸಾಹಿತ್ಯಿಕ ಚಟುವಟಿಕೆಯಲ್ಲೂ ಮುಂದಿದ್ದರು.

ಚಾರಿತ್ರಿಕವಾಗಿ ಮತ್ತು ವ್ಯಕ್ತಿಗತ ಪ್ರತಿಭೆಯಿಂದಾಗಿ ಕನ್ನಡದ ಕಥಾಸಾಹಿತ್ಯದಲ್ಲಿ ಪ್ರಮುಖ ಸ್ಥಾನ ಪಡೆಯಬಲ್ಲ ಅರ್ಹ ಲೇಖಕಿ ಕೊಡಗಿನ ಗೌರಮ್ಮ. ಅವರು ಬರೆಯ ತೊಡಗಿದಾಗ ಆಗಿನ್ನೂ ಸಣ್ಣ ಕಥೆಗಳ ಆರಂಭದ ಕಾಲ. ಕಲಿತ, ವಿದ್ಯಾವಂತೆಯಾದ, ಎಳೆಯ ವಯಸ್ಸಿನ ಗೌರಮ್ಮ ತಮ್ಮ ಸಾಹಿತ್ಯಾಭಿವ್ಯಕ್ತಿಗೆ ಸಣ್ಣ ಕಥೆಗಳ ರೂಪವನ್ನು ಆರಿಸಿಕೊಂಡರು. ಅವರ ಕಥೆಗಳ ಉಸಿರೆಂದರೆ, ಅವರ ಸುತ್ತಲಿನ ಸಮಾಜದ, ಅವರ ಅನುಭವಕ್ಕೆ ಹತ್ತಿರವಾದ ಜಾತಿಯ ತರುಣ-ತರುಣಿಯರ ಮುಗ್ಧಪ್ರೇಮ, ವಿವಾಹದ ಹಲವಾರು ಕನಸುಗಳು, ಪ್ರೇಮದ ಹೆಸರಿನಲ್ಲಿ ಎದುರಿಸಬೇಕಾದ ನಿರಾಸೆ ಹಾಗೂ ಮಾನಭಂಗಗಳು, ಮಧ್ಯಮವರ್ಗದ, ವಿಶೇಷವಾಗಿ ಬ್ರಾಹ್ಮಣ ತರುಣಿಯರ ವಿವಾಹ ಸಂಸ್ಥೆಗೆ ಸಂಬಂಧಪಟ್ಟ ಹತ್ತು ಹಲವಾರು ಮುಖಗಳು ಮತ್ತು ಸುಖದ ಅನುಭವಗಳು – ಇವುಗಳ ಸುತ್ತ ಹರಡಿಕೊಂಡಿವೆ. ಈ ಎಲ್ಲ ಕಥೆಗಳಲ್ಲೂ ಒಂದು ರೀತಿಯ ಸ್ತ್ರೀಪರವಾದ ವೈಚಾರಿಕ ನೆಲೆಗಟ್ಟಿದೆ. ಈ ಕಥೆಗಳು ಎತ್ತುವ ಸಮಸ್ಯೆಗಳು ಮತ್ತು ಪ್ರಶ್ನೆಗಳು

ಹೊಸದಲ್ಲವಾದರೂ ಗೌರಮ್ಮ ಅನ್ವೇಷಿಸಿಕೊಂಡ ಕಲಾತ್ಮಕ ರೂಪಗಳಿಂದಾಗಿ ಇವು ವಿಶಿಷ್ಟ ಒಳನೋಟವನ್ನು ತೋರುತ್ತವೆ.

**ಗೌರಮ್ಮನವರ ಸ್ಮೃತಿ ಚಿತ್ರಗಳು**

ಕನ್ನಡಿಗರೆಲ್ಲರ ಪ್ರೀತಿಯ ಆಸ್ತಿಯಾದ ಗೌರಮ್ಮನವರ ನೆನಪು, ಚೈತನ್ಯವನ್ನು ನಮ್ಮಲ್ಲಿ ತುಂಬಿಕೊಳ್ಳಲು ಅವರು ಬದುಕಿದ ಸ್ಥಳಗಳಲ್ಲಿ, ನಡೆದಾಡಿದ, ಉಸಿರಾಡಿದ ಜಾಗಗಳಲ್ಲಿ ಅವರೊಡನೆ ಬಾಂಧವ್ಯ ಹೊಂದಿದ್ದ ಆತ್ಮೀಯರನ್ನು ಕಾಣುವ ಹಂಬಲದಿಂದ ನಾವು ಜಾಗೃತಿಯ ಗೆಳತಿಯರು (ಬಿ. ಎನ್. ಸುಮಿತ್ರಾಬಾಯಿ, ನೇಮಿಚಂದ್ರ ಮತ್ತು ಎನ್. ಗಾಯತ್ರಿ) ಕೆಲವು ತಿಂಗಳ ಹಿಂದೆ ಮಡಿಕೇರಿಗೆ ಪಯಣ ಬೆಳೆಸಿದೆವು.

ಮೊದಲಿಗೆ ಗೌರಮ್ಮನವರ ಮೊಮ್ಮಗ ವಸಂತರಾವ್ ರವರ ಪುತ್ರ ಅಶೋಕ್ ಕೃಷ್ಣ ನಮ್ಮನ್ನು ಬರಮಾಡಿಕೊಂಡು ಅವರ ಮನೆಗೆ ಕರೆದೊಯ್ದರು. ಗೌರಮ್ಮನ ಮಗ ವಸಂತ ತಾಯಿ ತೀರಿದಾಗ ಎಂಟರ ವಯಸ್ಸಿನ ಬಾಲಕ. ಎಪ್ಪತ್ತೆಂಟರ ಹರೆಯದ ಈ ಮಗ ತಾಯಿಯ ಬಗ್ಗೆ ಉತ್ಸಾಹದಿಂದ ಮಾತನಾಡುವಾಗ ಪುಟ್ಟ ಬಾಲಕನಾದರು. ಅವರ ಮನೆಗೆ ಕೋಲು ಹಿಡಿದು ಬಂದ ಗಾಂಧಿಯ ಸ್ಮೃತಿ ಚಿತ್ರವನ್ನು ನೆನಪಿಸಿಕೊಳ್ಳುವಾಗ ಬಾಲ್ಯಕ್ಕೆ ಹಿಂತಿರುಗಿದ್ದರು. ಅವರ ಮನೆಯಲ್ಲಿದ್ದ ಫೋಟೋ ಆಲ್ಬಂಗಳನ್ನು ಅತ್ಯಂತ ಸಂಭ್ರಮದಿಂದ ಒಳಗಿಂದ ತಂದು ನಮ್ಮ ಮುಂದಿರಿಸಿದ್ದಲ್ಲದೆ, ಅವನ್ನೆಲ್ಲ ಕ್ಲಿಕ್ಕಿಸಿಕೊಳ್ಳಲು ಅನುಮತಿಯಿತ್ತರು. ಗತಕಾಲದ ಹಲವಾರು ಎಳೆಗಳು ನಮ್ಮ ಮುಂದೆ ಬಿಚ್ಚಿಕೊಂಡವು. ಗೌರಮ್ಮ, ಅವರ ಪತಿ ಶ್ರೀ ಗೋಪಾಲಕೃಷ್ಣ, ಅವರ ಕುಟುಂಬದ ಚಿತ್ರಗಳು, ಕಾಂಗ್ರೆಸ್ ಕಾರ್ಯಕರ್ತರ ನಡುವೆ, ಅವರು ಕಲ್ಯಾಣಮ್ಮನವರೊಂದಿಗಿನ ಫೋಟೋ, ಅವರ ಸಮಕಾಲೀನ ಸಾಮಾಜಿಕ ಕಾರ್ಯಕರ್ತೆಯರೊಂದಿಗಿನ ಚಿತ್ರಗಳನ್ನು ಕಂಡೆವು. ಗೌರಮ್ಮನವರು ಆರ್. ಕಲ್ಯಾಣಮ್ಮ ನವರ ಮೆಚ್ಚುಗೆಗೆ ಪಾತ್ರರಾಗಿದ್ದರೆಂಬುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು.



ತಂದೆ-ಮಗ (ಗೌರಮ್ಮನವರ ಮಗ ಮತ್ತು ಮೊಮ್ಮಗ ಶ್ರೀ ವಸಂತರಾವ್ ಮತ್ತು ಶ್ರೀ ಅಶೋಕಕೃಷ್ಣ)



*ಗಾಂಧಿ ಭೇಟಿ ಮಾಡಿದ, ಉಪವಾಸ ಕುಳಿತ ಗೌರಮ್ಮನವರಿದ್ದ ಮನೆ*

ಮಡಿಕೇರಿಯಲ್ಲಿ ಎನ್. ಎಸ್. ರಾಮಯ್ಯ ಮತ್ತು ತಾಯಿ ನಂಜಕ್ಕನವರ ಕೊನೆಯ ಮಗಳಾಗಿ ಹುಟ್ಟಿದ ಗೌರಮ್ಮನವರು ಅವರ ಪ್ರೀತಿಯ ಬಹುಭಾಗವನ್ನು ಸೂರೆಗೊಂಡವಳು. ತಾನು ಓದಿದರೆ ಕಾನ್ವೆಂಟ್ ಶಾಲೆಯಲ್ಲೇ ಓದುವುದು ಎಂದು ಹಠ ಮಾಡಿದ ಗೌರಮ್ಮ ಕೊನೆಗೆ ಸೇರಿದ್ದು ಮಡಿಕೇರಿಯ ಕಾನ್ವೆಂಟ್ ಶಾಲೆಯನ್ನೇ. ೧೯೦೯ರಲ್ಲಿ ಸ್ಥಾಪಿತವಾದ ಈ ಕಾನ್ವೆಂಟ್ ಶಾಲೆ ಇಂದಿಗೂ ತನ್ನ ಸ್ವರೂಪವನ್ನು ನೆನೆಪಿಸುವಂತೆ ಕಣ್ಣ ಮುಂದಿದೆ.

ಗೌರಮ್ಮನವರ ಪತಿ ಬಿ. ಟಿ. ಗೋಪಾಲಕೃಷ್ಣಯ್ಯನವರು ಕೆಲಸ ಮಾಡುತ್ತಿದ್ದ ಹರದೂರು ಎಸ್ಟೇಟ್ ಮಾಲೀಕರಾಗಿದ್ದ ಗುಂಡುಕುಟ್ಟಿ ಮಂಜುನಾಥಯ್ಯನವರ ಹರದೂರು ಎಸ್ಟೇಟ್ ಹಲವಾರು ಮಹತ್ವದ ಘಟನೆಗಳಿಗೆ ಸಾಕ್ಷೀಭೂತವಾದ ತಾಣ. ಮಂಜುನಾಥಯ್ಯನವರು ಸಾಹಿತ್ಯಾಸಕ್ತರೂ, ಸಾಂಸ್ಕೃತಿಕವಾಗಿ ಮತ್ತು ರಾಜಕೀಯವಾಗಿ ಕ್ರಿಯಾಶಾಲಿಗಳೂ ಆಗಿದ್ದರು. ಪ್ರಕೃತಿಯ ಉಪಾಸನೆಗಾಗಿ ಈ ಎಸ್ಟೇಟ್‌ಗೆ ಬರುತ್ತಿದ್ದ ಶಿವರಾಮ ಕಾರಂತ, ಮಾಸ್ತಿ, ಬೇಂದ್ರೆ, ಮುಳಿಯ ತಿಮ್ಮಪ್ಪಯ್ಯ ಮುಂತಾದ ಸಾಹಿತಿಗಳ ಒಡನಾಟ ಮತ್ತು ಮಾರ್ಗದರ್ಶನ ಗೌರಮ್ಮನವರಿಗೆ ಅನಾಯಾಸವಾಗಿ ಸಿಕ್ಕುತ್ತಿತ್ತು. ಗಾಂಧೀಜಿಯವರು ಸ್ವಾತಂತ್ರ್ಯ ಚಳುವಳಿಯ ಪ್ರಚಾರಕ್ಕೆ ಬಂದಾಗ ತಂಗಿದ್ದು ಈ ಮನೆಯಲ್ಲೇ. ಅಂದು ಯೂರೋಪಿಯನ್ ಬಂಗ್ಲೆಯೆಂದೇ ಕರೆಯಲ್ಪಡುತ್ತಿದ್ದ ಈ ಬೃಹತ್ ಸೌಧ ಇಂದಿಗೂ ತನ್ನ ಭವ್ಯತೆಯನ್ನು ಹಾಗೆಯೇ ಉಳಿಸಿಕೊಂಡಿದೆ. ಮುಂದೆ ವಿಶಾಲವಾದ ತೋಟ, ಇಟಾಲಿಯನ್ ಕಲ್ಲುಗಳ ನೆಲಹಾಸು, ಕಬ್ಬಿಣದ ಆಲಂಕಾರಿಕ ಮೆಟ್ಟಿಲುಗಳ ಏಣಿ, ರೇಷ್ಮೆಯ ಬಟ್ಟೆಯಿಂದ ಅಲಂಕೃತವಾದ ಕುರ್ಚಿ, ಸೋಫಾಗಳು ಗತಕಾಲದ ಕಥೆಯನ್ನು ಹೇಳುತ್ತೇವೆ (ಅಲ್ಲಿ ಯಾರೂ ಈಗ ವಾಸವಾಗಿಲ್ಲ)

ಮಂಜುನಾಥಯ್ಯನವರ ಎಸ್ಟೇಟಿಗೆ ಒಂದೆರಡು ಫರ್ಲಾಂಗ್ ದೂರದ್ದ ತಮ್ಮ ಮನೆಗೆ ಗಾಂಧಿಯವರು ಬರಬೇಕೆಂಬುದು ಗೌರಮ್ಮನವರ ಬಯಕೆಯಾಗಿತ್ತು. ಆದರೆ ಅವರ ಮಾತಿಗೆ ಕಾರ್ಯಕ್ರಮ ವ್ಯವಸ್ಥಾಪಕರು ಬೆಲೆ ಕೊಡದಾಗ ಉಪವಾಸ ಕುಳಿತ ಗೌರಮ್ಮ ಗಾಂಧಿಯನ್ನು ತಮ್ಮ ಮನೆಗೆ ಬರಮಾಡಿಕೊಂಡು ತನ್ನಲ್ಲಿದ್ದ ಚಿನ್ನದ ಒಡವೆಗಳನ್ನು ಸ್ವಾತಂತ್ರ್ಯ ಚಳುವಳಿಗೆಂದು ಗಾಂಧಿಗೆ ಕೊಟ್ಟುಬಿಟ್ಟರು. ಈಗಲೂ ಸುಂದರವಾದ ಹೂತೋಟದಿಂದ ಕಂಗೊಳಿಸುತ್ತಿರುವ ಗಾಂಧಿಯವರನ್ನು ಬರಮಾಡಿಕೊಂಡ ಆ ಮನೆಯ ಮುಂದೆ ನಿಂತಾಗ ಗೌರಮ್ಮನವರೊಂದಿಗೆ ಗಾಂಧಿಯನ್ನು ಕಂಡಂತೆ ಮನಸ್ಸು ರೋಮಾಂಚಿತವಾಗುತ್ತದೆ.

ಹೂತೋಟ ಬೆಳೆಸುವುದು, ಕಸೂತಿ ಹಾಕುವುದು, ಟೆನಿಸ್ ಆಡುವುದರಲ್ಲೆಲ್ಲಾ ಪ್ರವೀಣೆಯಾಗಿದ್ದ ಗೌರಮ್ಮ ಈಜು ಕಲಿತು ಮೀನಿನಂತೆ ಈಜುತ್ತಿದ್ದರು. ಮನೆ ಮಂದಿಯೆಲ್ಲಾ ಈಜುತ್ತಿದ್ದರಾದ್ದರಿಂದ ಅವರಿಗೆ ಈಜಲು ಸಾಂಗತ್ಯವಿರುತ್ತಿತ್ತು. ಅವರು ಸಾಮಾನ್ಯವಾಗಿ ಗಂಡ ಗೋಪಾಲಕೃಷ್ಣಯ್ಯ ಮತ್ತು ಅವರಿಗೆ ಈಜು ಕಲಿಸಿದ ಮೈದುನ ಗೋವಿಂದಯ್ಯನವರೊಂದಿಗೆ ಈಜಲು ಹೋಗುತ್ತಿದ್ದರು. ಬಿಡುವಾದಾಗಲೆಲ್ಲಾ ಅವರು ಈಜಲು ಹಾರುತ್ತಿದ್ದುದು ಹರದೂರಿನ ಹಟ್ಟಿಹೊಳೆಗೆ. ಅದೆಂತಹ ದುರಾದೃಷ್ಟ! ಅಂದು ೧೯೩೯ರ ಏಪ್ರಿಲ್ ೧೩, ತನ್ನ ಹಿರಿಯಣ್ಣ ಸುಬ್ರಾಯರ ಮಗ ಹರೆಯದ ಗೋವಿಂದ ಶರ್ಮನ ಜೊತೆ ಹೊಳೆಗೆ ಈಜಲು ಹೋಗಿದ್ದರು. ಉತ್ಸಾಹದಿಂದ ಮಡುವಿಗೆ ಬಿದ್ದದ್ದಷ್ಟೇ, ಅಲ್ಲಿಂದ ಹಿಂತಿರುಗಿ ಬರಲಿಲ್ಲ. ಆ ಎಳೆಯ ತರುಣಿಯನ್ನು ಹೊಳೆಯ ಮಡುವು ತನ್ನೆಡೆಗೆ ಸೆಳೆದುಕೊಂಡಿತು.

ಈಜು ಈ ಕುಟುಂಬದ ಅತ್ಯಂತ ಪ್ರಿಯವಾದ ಹವ್ಯಾಸವಿರಬಹುದು. ಗೌರಮ್ಮನವರ ಮೈದುನ ಬಿ. ಟಿ. ಗೋವಿಂದಯ್ಯ ಅವರಿಗೆ ಈಜು ಕಲಿಸಿದ್ದಲ್ಲದೆ ಅವರಿಗೆ ಈಜುಡುಗೆಯನ್ನು ತಂದುಕೊಟ್ಟಿದ್ದರಂತೆ. ಅವರ ಕುಟುಂಬವೆಲ್ಲ ಈಜು ಪ್ರವೀಣರೇ. ಗೋವಿಂದಯ್ಯನವರ ಪತ್ನಿ ಶ್ರೀಮತಿ ಹೊನ್ನಮ್ಮ ಗೌರಮ್ಮನವರಿಗೆ ಸೋದರ ಸಂಬಂಧಿ ಕೂಡ. ಅವರನ್ನು ಚೆನ್ನಾಗಿ ಬಲ್ಲವರು. ಈಕೆ ಆರ್. ಕಲ್ಯಾಣಮ್ಮನವರ ನಿಕಟವರ್ತಿಯೂ ಆಗಿದ್ದವರು. ಈಗಲೂ ಬೆಂಗಳೂರಿನ ಜಯನಗರದಲ್ಲಿ ವಾಸವಾಗಿರುವ ಚಟುವಟಿಕೆಯಿಂದ ಜೀವನ ಪ್ರೀತಿಯನ್ನು ಉಳಿಸಿಕೊಂಡಿರುವ ಎಂಭತ್ತೇಳರ ವಯಸ್ಸಿನ ಹೊನ್ನಮ್ಮ ತನ್ನ ಗೌರಕ್ಕನ ಬಗ್ಗೆ ಅಭಿಮಾನದಿಂದ ಮಾತನಾಡುತ್ತಾ ಅವರ ತುಂಟಾಟವನ್ನು ವರ್ಣಿಸಲು ಪ್ರಾರಂಭಿಸಿದರೆ ನಾವು ಗತಕಾಲದ ನೆನಪಿಗೆ ಜಾರಲೇಬೇಕು. ನಮ್ಮ ಕಣ್ಣಮುಂದೆ ತುಂಟ ಬಾಲಕಿ ಗೌರಮ್ಮ ಪ್ರತ್ಯಕ್ಷಳಾಗುತ್ತಾಳೆ. ಅಕ್ಕನ ಈಜಿನ ಪ್ರೇಮ ಮತ್ತು ಸಾಮಾಜಿಕ ಕ್ರಿಯಾಶಾಲಿತ್ವ ತಂಗಿಗೂ ಹರಿದುಬಂದಿದೆ. ಜೀವನ ಸಂಧ್ಯೆಯಲ್ಲಿ ಈಜು ಕಲಿತು, ವೆಟರನ್ ಚಾಂಪಿಯನ್ ಆಗಿರುವ ಹೊನ್ನಮ್ಮನನ್ನು ಅವರ ಪದಕಗಳ ಗರಿಯೊಂದಿಗೆ ನೋಡುವುದೇ ಚೆನ್ನ. ಈಕೆಯ ಮಗಳು ಸುಮನಾ ಮತ್ತು ಮೊಮ್ಮಗಳು ಸುಪ್ರಿಯಾ ಕೂಡ ಈಜು ಪರಿಣಿತರು. ರಾಜ್ಯ, ರಾಷ್ಟ್ರದ ಮಟ್ಟದಲ್ಲಿ ಗುರುತಿಸಲ್ಪಟ್ಟವರು.




**ಮಂಜುನಾಥಯ್ಯನವರ ಬಂಗ್ಲೆ**

ಗೌರಮ್ಮನವರು ರಚಿಸಿರುವ ಬಹುಪಾಲು ಕಥೆಗಳು ಪತ್ರಗಳ ರೂಪದಲ್ಲಿವೆ. ಇಲ್ಲವೆ, ಕೆಲವು ಪತ್ರಗಳು ಕಥೆಯ ಒಡಲಲ್ಲಿ ತೂರಿಕೊಂಡು ಬಂದಿವೆ. ಅಕ್ಷರ ಸಂಸ್ಕೃತಿಗೆ ಹೊಸದಾಗಿ ತಮ್ಮನ್ನು ತೆರೆದುಕೊಳ್ಳುತ್ತಿದ್ದ ಬಹುಪಾಲು ಸ್ತ್ರೀಪುರುಷರು ಈ ತಲೆಮಾರಿನವರಾದ್ದರಿಂದ ಪತ್ರಗಳ ರಚನೆ ಅವರ ಭಾವನಾತ್ಮಕ ಸಂಬಂಧಗಳಿಗೆ ಉತ್ತಮ ಸಂವಹನವಾಗಿದ್ದಂತೆ ಕಂಡುಬರುತ್ತದೆ. ಲಿಂಗ ಅಸಮಾನತೆಯನ್ನು ಹೆಚ್ಚು ನಿಖರವಾಗಿ ಮತ್ತು ಕಲಾತ್ಮಕವಾಗಿ ಅಭಿವ್ಯಕ್ತಿಸಿದ ಲೇಖಕಿಯರಲ್ಲಿ ಗೌರಮ್ಮ ವಿಶಿಷ್ಟ ಸ್ಥಾನ ಪಡೆಯುತ್ತಾರೆ. ಅಂತಹ ಒಂದು ಕತೆ 'ಅಪರಾಧಿ ಯಾರು ?' ಎನ್ನುವುದನ್ನು ಇಲ್ಲಿ ಹೊಸತು ಓದುಗರಿಗಾಗಿ ನೀಡಲಾಗಿದೆ :

# ಅಪರಾಧಿ ಯಾರು ?

- ೧ -

ಅಣ್ಣ,

ನಾನು ಬರೆದ ಹಿಂದಿನ ಕಾಗದವು ನಿನಗೆ ತಲುಪಿರಬಹುದು. ಅದಕ್ಕೆ ನೀನು ಪ್ರತ್ಯುತ್ತರವನ್ನು ಬರೆಯುವ ಮೊದಲೇ ಈ ಕಾಗದವನ್ನು ನೋಡಿ ನಿನಗೆ ಆಶ್ಚರ್ಯವಾಗಲೂಬಹುದು. ಆಶ್ಚರ್ಯದ ವಿಷಯವೇ ಇರುವುದರಿಂದ ನಿನಗಿದನ್ನು ಬರೆಯುತ್ತಿರುವೆನು.

ನಮ್ಮ ಮನೆಗೆ ಪಕ್ಕದ ಮನೆಯಲ್ಲಿದ್ದ ನಾಗೇಶರಾಯರದು ನಿನಗೆ ಗೊತ್ತಿದೆ. ಗೊತ್ತಿದೆ ಎಂದರೆ ನಿನಗವರ ಗುಣಗಳೆಲ್ಲಾ ಗೊತ್ತಿರಲಾರದು, ಈ ಮನೆಗೆ ನಾವು ಮೊದಲು ಬಂದ ಸುರುವಿನಲ್ಲಿ ಅವರನ್ನು ನೋಡಿ 'ಕ್ರೂರಿಯ ಕಣ್ಣುಗಳಂತಿವೆ ರಾಯರ ಕಣ್ಣುಗಳು' ಎಂದು ಹೇಳಿಕೊಂಡು ನಗುತ್ತಿದ್ದುದು ನಿನಗೆ ಮರೆತು ಹೋಗಿರಲಾರದು. ಚಿಕ್ಕತನದ ತಂಟೆಯಲ್ಲಿ ತಮಾಷೆಯಾಗಿ ನಾವಾಡಿದ ಮಾತುಗಳು ಈಗ ನಿಜವಾಗಿ ಪರಿಣಮಿಸಿವೆ. ನಾವು ಊಹಿಸಿದುದಕ್ಕಿಂತಲೂ ಹೆಚ್ಚಿನ ನೀಚರವರು. ನಾನೇಕೆ ಅವರ ಗುಣ ವರ್ಣನೆ ಮಾಡುತ್ತಿರುವೆನೆಂದು ನೀನು ಹುಬ್ಬುಗಂಟಿಕ್ಕಬಹುದು. ಸ್ವಲ್ಪ ಸಮಾಧಾನ ತಾಳಿಕೋ; ನಾನೀ ಕಾಗದ ಬರೆಯುತ್ತಿರುವುದೇ ಅವರ ನೀಚತನಕ್ಕೆ ಬಲಿಯಾಗಿ ಜಾತಿಯಿಂದ ಬಹಿಷ್ಕರಿಸಲ್ಪಟ್ಟಿರುವ ಪಾರ್ವತಿಗಾಗಿ. ಪಾರ್ವತಿ ಯಾರೆಂದು ಗೊತ್ತೇ ? ನಮಗೆ ಕನ್ನಡವನ್ನು ಕಲಿಸುತ್ತಿದ್ದರಲ್ಲ ಆ ಪಂಡಿತರ ಮಗಳು. ಪಂಡಿತರು ಪಾರ್ವತಿಯನ್ನು ಮದುವೆ ಮಾಡಿದ ವರ್ಷವೇ ಸತ್ತುಹೋದದ್ದು ನಿನಗೆ ತಿಳಿದಿದೆ. ಕಳೆದ ವರ್ಷ ಅವಳ ಪತಿಯೂ ಬೇಕಾದಷ್ಟು ಸಾಲ ಮಾಡಿಟ್ಟು ಅವರ ದಾರಿ ಹಿಡಿದ. ಅಂದಿನಿಂದ ಅನಾಥೆ ಪಾರ್ವತಿ ಅವಳ ಚಿಕ್ಕ ಮಗುವನ್ನು ಸಾಕುವುದಕ್ಕೆ ಬೇರೇನೂ ಉಪಾಯ ತೋರದೆ ನಾಗೇಶರಾಯರ ಮನೆಯಲ್ಲಿ ಅಡಿಗೆಯ ಕೆಲಸಕ್ಕೆ ನಿಂತಳು. ಇದು ಒಂದು ವರ್ಷದ ಹಿಂದಿನ ಮಾತು.

ಮಗುವಿಗೋಸ್ಕರವಾಗಿ ರಾಯರ ಅತ್ಯಾಚಾರವನ್ನು ಸಹಿಸಿಕೊಂಡಿದ್ದ ಪಾರ್ವತಿಯನ್ನು ರಾಯರು ಅಪವಾದದ ಹೊರೆಯೊಡನೆ ಬಹಿಷ್ಕಾರವನ್ನೂ ಹಾಕಿಸಿ ಮೊನ್ನೆ ಮನೆಯಿಂದ ಹೊರದೂಡಿರುವರು. ನಿನ್ನೆ ರಾತ್ರಿ ಆತ್ಮಹತ್ಯೆಯನ್ನು ಮಾಡಿಕೊಳ್ಳುವ ಉದ್ದೇಶದಿಂದ ಮಗುವಿನೊಂದಿಗೆ ಬಾವಿಯ ಹತ್ತಿರ ನಿಂತಿದ್ದಳಂತೆ. ಗೈಬಿ ರಾತ್ರಿ ತಪ್ಪಿಸಿಕೊಂಡು ಹೋದ ದನವನ್ನು ಹಿಡಿದುಕೊಂಡು ಬರುವುದಕ್ಕೆ ಹೋಗಿದ್ದಾಗ ಅವಳನ್ನು ಕಂಡು ಬಲಾತ್ಕಾರದಿಂದ ಇಲ್ಲಿಗೆ ಕರೆದುಕೊಂಡು ಬಂದಿದ್ದಾಳೆ. ಬಲಾತ್ಕಾರದಿಂದ ಗೈಬಿ ಅವಳನ್ನು ಕರೆದುಕೊಂಡು ಬಾರದಿದ್ದರೆ ಈ ದಿನ ತಾಯಿ-ಮಗುವಿನ ಶವಗಳನ್ನು ಬಾವಿಯಿಂದ ತೆಗೆಯಬೇಕಾಗುತ್ತಿತ್ತು. ನೋಡಿದೊಡನೆಯೇ ನನಗವಳ ಗುರುತು ಸಿಕ್ಕಿತು.

ನನ್ನನ್ನು ನೋಡಿ ಪಾಪ – ಮುಖವನ್ನು ಮುಚ್ಚಿಕೊಂಡು ಅಳತೊಡಗಿದಳು. ರಾತ್ರಿ ನಿದ್ದೆಯೇ ಮಾಡಲಿಲ್ಲ, ಹಸಿದಿದ್ದ ಸ್ವಲ್ಪ ಹಾಲು ಕುಡಿಸಿದ್ದಾಳೆ. ಎಷ್ಟು ಹೇಳಿದರೂ ತಾನೇನೂ ಮುಟ್ಟುವುದಿಲ್ಲ, ನಿನ್ನೆಯಿಂದಲೂ ಉಪವಾಸ. ನಿನಗಿದೆಲ್ಲಾ ಏಕೆ ಬರೆಯುತ್ತಿರುವೆನೆಂದರೆ ಈ ವಿಷಯದಲ್ಲಿ ನಿನ್ನ ಸಹಾಯವು ಅತ್ಯಗತ್ಯವಾದುದರಿಂದ. ಎಲ್ಲಿ ಹೋಗುವುದು, ಏನು ಮಾಡುವುದು ಎಂದು ಅವಳಿಗೆ ತಿಳಿಯದಾಗಿದೆ. ಜಾತಿಯವರು ಸೇರಿಸುವಂತಿಲ್ಲ, ಇಲ್ಲಿಂದ ನಾವು ಹೊರಗೆ ಕಳುಹಿಸಿದರೆ ಬಾವಿಯೇ ಅವಳಿಗೆ ಗತಿಯಾಗುವುದು. ಏನು ಮಾಡುವಿ ಎಂದು ಕೇಳಿದರೆ 'ಇಲ್ಲೇ ಇದ್ದು ಬಿಡುತ್ತೇನೆ; ಈ ಮಗುವಿನ ಸಲುವಾಗಿ ನೀವಾದರೂ ಆಶ್ರಯ ಕೊಡಿ' ಎಂದು ಅಳುತ್ತಾಳೆ. ಆದುದರಿಂದ ನೀನು ಇಲ್ಲಿಗೆ ಬಂದರೆ ಅವಳನ್ನು ಶಾಸ್ತ್ರೋಕ್ತವಾಗಿ ನಮ್ಮ ಜಾತಿಗೆ ಸೇರಿಸಿ ಅವಳ ಮುಂದಿನ ಜೀವನಕ್ಕೆ ದಾರಿ ಮಾಡಬಹುದು.

ಅಣ್ಣ, ಅವಳ ತಂದೆ ಪಂಡಿತರು ತಮ್ಮ ಜಾತಿಯನ್ನು ಹೊಗಳಿಕೊಳ್ಳುತ್ತಿದ್ದುದು ನಿನಗೆ ಜ್ಞಾಪಕವಿರಬಹುದು. ಅನಾಥ ಅಬಲೆಯರು ಅತ್ಯಾಚಾರಿಯ ಅತ್ಯಾಚಾರಕ್ಕೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವುದೇ ಅವರ ಜಾತಿಯ ನೀತಿಯಾದರೆ ನಮಗಾ ಜಾತಿಯಲ್ಲಿ ಜನ್ಮಕೊಡದಿದ್ದುದಕ್ಕಾಗಿ ದೇವರನ್ನು ಎಷ್ಟು ವಂದಿಸಿದರು ಸ್ವಲ್ಪವೇ. ಇದನ್ನು ನೋಡುವುದಕ್ಕೆ ಪಂಡಿತರು ಇದ್ದಿದ್ದರೆ ತಮ್ಮ ಜಾತಿಯ ವಿಷಯದಲ್ಲಿದ್ದ ಭಾವನೆಯನ್ನವರು ಬದಲು ಮಾಡಬೇಕಾಗಿ ಬರುತ್ತಿತ್ತು. ಇರಲಿ; ಈ ಕಾಗದವನ್ನು ನೋಡಿದೊಡನೆಯೇ ನೀನು ಬರುವಿಯಾಗಿ ಆಶಿಸುವ,

ನಿನ್ನ ಪ್ರೀತಿಯ ತಂಗಿ,

ಉನ್ನೀಸಾ

- ೨ -

ಸೀತಮ್ಮನವರೇ,

ಬಹಳ ದಿನಗಳಿಂದಲೂ ನಿಮಗೆ ಕಾಗದ ಬರೆಯ ಬೇಕೆಂದು ಆಲೋಚಿಸಿಕೊಂಡಿದ್ದೇನೆ. ಬರೆಯುವುದಕ್ಕೆ ಮಾತ್ರ ಸ್ವಲ್ಪವೂ ಸಮಯವಾಗುವುದಿಲ್ಲ ನೋಡಿ; ಈಗಲಾದರೂ ಸಮಯ ಸಿಕ್ಕಿತೇ ಎಂದು ನೀವು ಕೇಳ ಬಹುದು. ನಿಜವನ್ನು ಹೇಳುವುದಾದರೆ ಈಗಲೂ ಇಲ್ಲ, ಕಮಲೆಗೆ ಜ್ವರ; ಅವಳಿಗೆ ಔಷಧಿ ಕುಡಿಸಿಲ್ಲ, ರಘುವನ್ನೂ ಇನ್ನೂ ಸ್ನಾನ ಮಾಡಿಸಿಲ್ಲ, ಅಡಿಗೆಯೂ ಆಗಿಲ್ಲ, ಆದರೂ ನಿಮಗೊಂದು ವಿಶೇಷದ ಸುದ್ದಿ ತಿಳಿಸಿಬಿಡಬೇಕೆಂದು ಕೆಲಸಗಳನ್ನೆಲ್ಲಾ ಬಿಟ್ಟು ಬರೆಯುವುದಕ್ಕೆ ಕೂತಿದ್ದೇನೆ.

ಆ ಪಾರ್ವತಿ ನೋಡಿ - ಬೊಂಬೆಯ ಹಾಗೆ ಅಲಂಕಾರ ಮಾಡಿಕೊಂಡು ಶಾಲೆಗೆ ಹೋಗುತ್ತಿದ್ದಳಲ್ಲ - ಆ ಪಂಡಿತರ ಮಗಳು ಅವಳು ಜಾತಿಕೆಟ್ಟು ತುರುಕರ ಜಾತಿಗೆ ಸೇರಿದ್ದಾಳೆ ನೋಡಿ! ಅವಳನ್ನು ಅವಳಪ್ಪ ಮುದ್ದು ಮುದ್ದು ಎಂತ ಶಾಲೆಗೆ ಕಳುಹಿಸುವಾಗಲೇ ನನಗೆ ಗೊತ್ತಿತ್ತು - ಅವಳು ಹೀಗಾಗುವಳೆಂದು! ಇದು ಬೇರೆ ತಮಾಷೆ ನೋಡಿ ಪಕ್ಕದ ಮನೆ ಲಕ್ಷ್ಮಿ ಇದ್ದಾಳಲ್ಲ - ಈ ಜಾತಿಗೇಡಿಯ ಜೊತೆಯಲ್ಲೇ ಶಾಲೆಗೆ ಹೋಗುತ್ತಿದ್ದವಳು - ಅವಳನ್ನುತ್ತಾಳೆ ಕೇಳಿ: ''ಸೇರದೆ ಅವಳೇನು ಮಾಡುವುದು? ಸೇರದಂತೆ ಪ್ರಯತ್ನ ಮಾಡುವುದರ ಬದಲು ಬಹಿಷ್ಕರಿಸಿ ಅವಳ ಮುಖಕ್ಕೆ ಬಾಗಿಲನ್ನು ಹಾಕಿ ಬಾವಿಯ ದಾರಿ ತೋರಿಸಿದ ನಿಮಗೆ ಅವಳೇನಾದರೇನು?'' ಎಂತ. ಬಹಿಷ್ಕಾರ ಹಾಕಿದ್ದು ತಪ್ಪಂತೆ! ಜಾತಿಕೆಟ್ಟವಳನ್ನು ಮನೆಯಲ್ಲಿರಿಸಿಕೊಳ್ಳ ಬೇಕಾಗಿತ್ತಂತೆ! ನೋಡಿದಿರಾ ಹೇಗಿದೆ ಎಂತ!!

ಹೊತ್ತಾಗಿ ಹೋಯಿತು; ಅಡಿಗೆ ಮಾಡಬೇಕು ಇನ್ನೊಮ್ಮೆ ಬಿಡುವಿದ್ದಾಗ ಬರೆಯುತ್ತೇನೆ.

ನಿಮ್ಮ

............................

-೩-

ನಲಿನಿ,

ಬಹಳ ದಿನಗಳಾದವು ನಿನ್ನ ಕಾಗದಗಳೊಂದೂ ಬಾರದೆ. ಏಕೆ ಬರೆಯುವುದಿಲ್ಲ? ಕಣ್ಮರೆಯಾದೊಡನೆಯೇ ಮರೆತುಹೋಯಿತೇನು? ಸಹಜ; ಬೇಕಾದಷ್ಟು ಹೊಸ ಗೆಳತಿಯರು ಸಿಕ್ಕಿರುವಾಗ ಹಳೆಯ ಹಳ್ಳಿಯ ಸ್ನೇಹಿತೆ ಯೊಬ್ಬಳನ್ನು ಜ್ಞಾಪಿಸಿಕೊಳ್ಳುವುದು ಕಷ್ಟ. ಆದರೆ ನೀನೆಷ್ಟು ನನ್ನನ್ನು ಮರೆಯುವುದಕ್ಕೆ ಯತ್ನಿಸಿದರೂ ಯತ್ನದಲ್ಲಿ ಸಫಲತೆಯನ್ನು ಪಡೆದರೂ ನಾನು ಮಾತ್ರ ಆಗಾಗ ಕಾಗದಗಳನ್ನು ಬರೆದು 'ಈ ಪ್ರಪಂಚದಲ್ಲಿ ನಾನೊಬ್ಬಳಿದ್ದೇನೆ' ಎಂಬುದನ್ನು ನಿನಗೆ ಜ್ಞಾಪಿಸದೆ ಬಿಡುವುದಿಲ್ಲ, ನನ್ನ ಹತ್ತು ಕಾಗದಗಳಿಗೆ ನೀನು ಒಂದೇ ಒಂದು ಕಾಗದವನ್ನಾದರೂ ಬರೆಯದಿದ್ದರೆ ನಾನೇ ಅಲ್ಲಿಗೆ ಬಂದು ನಿನ್ನ ಅತ್ಯಮೂಲ್ಯವಾದ ಸಮಯವನ್ನು ನನ್ನೊಡನೆ ಮಾತಿಗಾಗಿ ಉಪಯೋಗಿಸಿಕೊಳ್ಳುತ್ತೇನೆ. ಈ ಬೆದರಿಕೆಗೆ ನೀನು ಹೆದರದಿರಲಾರೆ. ಏಕೆಂದರೆ ಚಿಕ್ಕವರಾಗಿರುವಾಗ ನಾನು ಕೀಟಲೆ ಮಾಡತೊಡಗಿದರೆ ನೀನೂ ಪಾರ್ವತಿಯೂ ಹೆದರಿ ಕೇಳಿದುದನ್ನು ಕೊಡುತ್ತಿದ್ದಿರಿ.

ನೆನಪಿದೆಯೇ ನಲಿನಿ! – ಆಗಿನ ಆಟ, ತಮಾಷೆ, ಜಗಳ, ನಗು ಎಲ್ಲಾ! ಆಗ ನಾವು ಶಾಲೆಯ ಹಿಂದಿನ



ದಿನ್ನೆಯ ಮೇಲೆ ಕುಳಿತು ನಮ್ಮ ಮುಂದಿನ ಜೀವನವನ್ನು ಚಿತ್ರಿಸಿಕೊಳ್ಳುತ್ತಿದ್ದುದು! ನಾವು ಕಲ್ಪಿಸಿ, ನೋಡಿ ನಲಿಯುತ್ತಿದ್ದ ಹಗಲು ಕನಸುಗಳ ಸ್ಮೃತಿ! ಆಗ ನಾವು ಜೀವನವು ಸುಖ-ಸಂತೋಷಮಯ ಎಂದು ತಿಳಿದಿದ್ದೆವಲ್ಲ ನಲಿನಾ! ಈಗ ನಮ್ಮಲ್ಲೆಷ್ಟು ಜನರು ಆ ಭಾವನೆಯನ್ನು ಬದಲಾಯಿಸಬೇಕಾಗಿ ಬಂದಿದೆ ನೋಡು. ನಮ್ಮ ಗೆಳತಿ ಸೀತೆಯನ್ನು ನೋಡು - ಅವಳು ಬಯಸುತ್ತಿದ್ದ ಬಯಕೆ ಗಳೆಲ್ಲಿ? ಈಗವಳನುಭವಿಸುತ್ತಿರುವ ಯಾತನೆಗಳೆಲ್ಲಿ! ನಾವೆಂದಾದರೂ ಅವಳ ಗತಿ ಹೀಗಾಗಬಹುದೆಂದು ಎಣಿಸಿದ್ದೆವೇ? ಕ್ಲಾಸಿನಲ್ಲಿ ಹುಚ್ಚಿ ಎಂದು ನಾವು ಹಾಸ್ಯ ಮಾಡುತ್ತಿದ್ದ ಉಮಾ ಈಗ ನೋಡು ದೊಡ್ಡ ಸಮಾಜ ಸುಧಾರಕಳಾಗಿಬಿಟ್ಟಿದ್ದಾಳೆ. ಅವಳ ಮಾತುಗಳನ್ನು ಕೇಳಲು ಜನರು ಹಾತೊರೆಯುವುದನ್ನು ನೋಡಿದರೆ 'ಅಂದಿನ ಉಮಾ ಇವಳೇನು?' ಎನ್ನಿಸುತ್ತದೆ. 'ಮದುವೆ ಯಾಗುವುದೇ ಇಲ್ಲ' ಎನ್ನುತ್ತಿದ್ದ ಶಾಂತೆಗೆ ಈಗ ಇಬ್ಬರು ಮಕ್ಕಳಿದ್ದಾರೆ. ಕ್ಲಾಸಿನಲ್ಲಿ ಮೊದಲನೆಯವಳಾಗಿ ಬುದ್ಧಿವಂತೆ ಎನ್ನಿಸಿಕೊಳ್ಳುತ್ತಿದ್ದ ಕಮಲೆಗೆ ಅತ್ತೆಯ ಮನೆಯಲ್ಲಿ ದಡ್ಡೆ, ಮೂದೇವಿ ಎಂದು ಬಿರುದುಗಳು ಬಂದಿವೆ.

ಇವುಗಳೆಲ್ಲವುಗಳಿಗಿಂತಲೂ ವಿಷಾದಕರವಾದ ಇನ್ನೊಂದು ಸುದ್ದಿ ಇದೆ ನಲಿನಾ – ಅದೂ ನಮ್ಮ ಪ್ರೀತಿಯ ಪಾರ್ವತಿಯ ವಿಷಯ – ಹೇಗದನ್ನು ಬರೆಯಲಿ ಹೇಳು?

ಸೌಂದರ್ಯ, ಗುಣ ನಡತೆಗಳಲ್ಲಿ ನಮ್ಮೆಲ್ಲರ ಮೆಚ್ಚಿಕೆಯನ್ನು ಪಡೆದಿದ್ದ ಪಾರ್ವತಿ ವಿಧವೆಯಾದದ್ದೂ, ನಾಗೇಶರಾಯರ ಮನೆಯಲ್ಲಿ ಕೆಲಸಮಾಡಿ ಕೊಂಡಿದ್ದುದೂ ನಿನಗೆ ಗೊತ್ತಿದೆ. ಅವಳ ಭವಿಷ್ಯವನ್ನು ನಾವು ಚಿತ್ರಿಸಿದಂತೆ ಇನ್ನಾರದನ್ನು ಚಿತ್ರಿಸಿದ್ದೆವು. ನಲಿನಾ! 'ನಮ್ಮ ಸುಂದರಿ, ರಾಜನ ರಾಣಿ ಕಿರೀಟ ಧಾರಿಣಿ' ಯಾಗುವಳೆಂದು ಹೇಳಿಕೊಂಡು ನಾವು ನಲಿಯುತ್ತಿದ್ದೆವಲ್ಲ! ಅವಳೀಗ ಜಾತಿಯಿಂದ ಬಹಿಷ್ಕರಿಸಲ್ಪಟ್ಟಿರುವಳು ನಲಿನಾ - ರಾಯರ ಪಾಪದ ಪ್ರತಿಫಲವಾಗಿ. ಇದೇ ನೋಡು - ನಮ್ಮ ಸಮಾಜದ ನ್ಯಾಯ! ನಮ್ಮ ಜಾತಿ, ನೀತಿ, ಸಮಾಜ ಉತ್ತಮವೆಂದು ಹೇಳಿಕೊಂಡು ನಾವೆಷ್ಟು ಸಲ ಉನ್ನೀಸಳೊಡನೆ ಜಗಳವಾಡಿಲ್ಲ! ಮುಸಲ್ಮಾನ ಜಾತಿಯವಳೆಂದು ಎಷ್ಟು ಸಾರಿ ಉನ್ನೀಸಳನ್ನು ತಿರಸ್ಕರಿಸಿಲ್ಲ! ಊರು ತುಂಬ ನಮ್ಮವರ ಮನೆಗಳಿದ್ದೂ ಪಾರ್ವತಿಗೆ ಬಾಗಿಲನ್ನು ತೆರೆಯುವವರಿರಲಿಲ್ಲ, ನಮ್ಮವರ ಹೃದಯದಲ್ಲಿ ಜಾತಿಗಲ್ಲದೆ ದಯೆಗೆ ಎಡೆಯಿಲ್ಲ, ಅದೂ ಜಾತಿ ನಿಯಮಗಳು ಹೆಂಗಸರಿಗೆ ಮಾತ್ರ. ಗಂಡಸರು ಆ ನಿಯಮಕ್ಕೆ ಒಳಪಡಬೇಕಾಗಿಲ್ಲ, ಇದೇ ನೋಡು, ನಮ್ಮ ಜಾತಿಯ ದೊಡ್ಡತನದ ಕುರುಹು.

ಉತ್ತಮ, ಅತ್ಯುತ್ತಮ ಜಾತಿಯ ನಮ್ಮವರು ಪಾರ್ವತಿಗೆ ಅವಳ ಮುದ್ದು ಮಗುವಿನೊಡನೆ ಬಾವಿಯ ದಾರಿಯನ್ನು ತೋರಿಸಿಕೊಟ್ಟಾಗ ಕೈಹಿಡಿದು ಆದರದಿಂದ ಆಶ್ರಯವಿತ್ತವಳು ಯಾರು ಗೊತ್ತೇ? ಉನ್ನೀಸ! ಮ್ಲೇಂಛಳೆಂದು ನಾವು ನಕ್ಕು ತಿರಸ್ಕರಿಸುತ್ತಿದ್ದ ಉನ್ನೀಸ! ಈಗ ಹೇಳು ನಲಿನಾ, ಉತ್ತಮರು ಯಾರೆಂದು?

ಊರವರೆಲ್ಲರೂ ಪಾರ್ವತಿಯನ್ನು ಮುಸಲ್ಮಾನ ಜಾತಿಗೆ ಸೇರಿದವಳೆಂದು ತಿರಸ್ಕರಿಸುತ್ತಿರುವರು. ಮೊದಲೇ ನಮಗೆ ಅವಳು ಹಾಗಾಗುವಳೆಂದು ಗೊತ್ತಿತ್ತು ಎನ್ನುವರು. ಇಷ್ಟೆಲ್ಲಾ ತಿಳಿದವರು ಅವಳು ಹಾಗಾಗದಿರುವಂತೆ ಮಾಡಲು ಯಾವ ಯತ್ನವನ್ನೂ ಮಾಡಲಿಲ್ಲವೇಕೆ? ಎಂದು ನಾನು ಕೇಳಿದೆ. ಅದಕ್ಕಾಗಿ ಪಾರ್ವತಿಯ ಪಕ್ಷವೆಂದು ನೀರಿಗೆ ಹೋದಲ್ಲಿ ಎಂದಿನಂತೆ ನೆರೆಕರೆಯವರು ನನ್ನೊಡನೆ ಮಾತಾಡುವುದಿಲ್ಲ.

ಅಪರಾಧಿ ಯಾರು ನಲಿನಾ? ಪಾರ್ವತಿ ರಜಿಯಾ ಆಗುವುದಕ್ಕೆ ಹೊಣೆ ಯಾರು? ಅವಳೇ? ರಾಯರೇ? ಅಥವಾ ನಮ್ಮ ಕ್ರೂರ ಕಠೋರ ಸಮಾಜವೇ?

ಯಾರಾದರೇನು? ಆದುದಾಗಿಬಿಟ್ಟಿತು. ಪಾರ್ವತಿ ಯಾಗಿ ಅವಳು ಸುಖದಲ್ಲಿರಲಿಲ್ಲ, ರಜಿಯಾ ಆಗಿಯಾದರೂ ಅವಳ ಜೀವನವು ಸುಖಮಯ ವಾಗಲೆಂದು ದೇವರಲ್ಲಿ ನನ್ನ ಬೇಡಿಕೆ.

ಸಾಕು; ಇನ್ನೇನು ಬರೆಯಲಿ .....

ನಿನ್ನ,
ಲಕ್ಷ್ಮಿ

೪

ತಾರೀಖು ೮ರ ಸ್ಥಳಿಕ ಪತ್ರಿಕೆಯೊಂದರಲ್ಲಿ ಹೀಗಿತ್ತು:

ಮೊನ್ನೆ ದಿನ ಹಿಂದೂ-ರಮಣಿಯೊಬ್ಬಳು ಮುಸಲ್ಮಾನ ಧರ್ಮ ಸ್ವೀಕರಿಸಿದುದು ಊರಿನ ಹಿಂದೂಗಳಿಗೆಲ್ಲಾ ಬಹಳ ವಿಷಾದವನ್ನುಂಟು ಮಾಡಿದೆ. ಇನ್ನು ಮುಂದೆ ಈ ರೀತಿ ಸಂಭವಿಸದಂತೆ ನೋಡಿಕೊಳ್ಳುವುದಕ್ಕಾಗಿ ಊರಿನ ಪ್ರಮುಖ ಹಿಂದೂಗಳ ಸಭೆಯೊಂದು ಶ್ರೀಮಾನ್ ನಾಗೇಶರಾಯರ ಅಧ್ಯಕ್ಷತೆಯಲ್ಲಿ ನಡೆಯಿತು. ಸಭೆಯಲ್ಲಿ ಸರ್ವಾನುಮತದಿಂದ ಹಿಂದೂ ಧರ್ಮರಕ್ಷಣೆ ಮಾಡಬೇಕೆಂದು ತೀರ್ಮಾನವಾಯಿತು.

*ನವೆಂಬರ್ ೧೯೩೪*

*(ಈ ಸಂದರ್ಭದಲ್ಲಿ ತಮ್ಮ ಅಮೂಲ್ಯ ಸಮಯವನ್ನು ನೀಡಿ ಗೌರಮ್ಮನವರ ನೆನಪುಗಳನ್ನು ಹಂಚಿಕೊಂಡುದಲ್ಲದೆ, ಗೌರಮ್ಮನವರು ಒಡನಾಡಿದ ಜಾಗಗಳಿಗೆಲ್ಲಾ ನಮ್ಮನ್ನು ಕರೆದೊಯ್ದ ಶ್ರೀ ವಸಂತರಾವ್ ಮತ್ತು ಅವರ ಮಗ ಶ್ರೀ ಅಶೋಕ ಕೃಷ್ಣ ಅವರಿಗೆ ನಮ್ಮ ಕೃತಜ್ಞತೆಗಳು. ಹಾಗೆಯೇ ಇವರನ್ನು ನಮಗೆ ಪರಿಚಯಿಸಿದ ಮತ್ತು ಇಡೀ ಕಾರ್ಯಕ್ರಮದ ರೂಪುರೇಷೆಯನ್ನು ಸಿದ್ಧಪಡಿಸಿಕೊಟ್ಟ ಹೊನ್ನಮ್ಮನವರ ಪುತ್ರಿ ಶ್ರೀಮತಿ ಸುಮನಾ ಮತ್ತು ಅವರ ಪತಿ ಶ್ರೀ ಶ್ರೀಧರಮೂರ್ತಿಯವರಿಗೆ ವಿಶೇಷ ನಮನಗಳು.)*

# ಗೌರಮ್ಮನವರ ಸ್ಮೃತಿ ಚಿತ್ರಗಳು




ಗೌರಮ್ಮನವರು ಓದಿದ ಶಾಲೆ



ಕಾಂಗ್ರೆಸ್ ಕಾರ್ಯಕರ್ತರೊಂದಿಗೆ



ಸಾಮಾಜಿಕ ಕಾರ್ಯಕರ್ತೆಯರೊಂದಿಗೆ (ಕುಳಿತವರಲ್ಲಿ ಎಡದಿಂದ ಮೊದಲನೆಯವರು ಆರ್. ಕಲ್ಯಾಣಮ್ಮ. ನಿಂತವರಲ್ಲಿ ಎರಡನೆಯವರು ಗೌರಮ್ಮ)



ಮಂಜುನಾಥಯ್ಯನವರ ಮನೆಯ ಬಾಲ್ಕನಿಯಲ್ಲಿ ನಿಂತ ಗಾಂಧಿಯವರ ಫೋಟೋ



ಗೌರಮ್ಮನವರ ಸೋದರ ಸಂಬಂಧಿ
ಶ್ರೀಮತಿ ಹೊನ್ನಮ್ಮ (ಪದಕಗಳೊಂದಿಗೆ)



ಗೌರಮ್ಮನವರು



ಗೌರಮ್ಮ ದಂಪತಿಗಳ ಫೋಟೋ

**ಡಾ|| ಎನ್. ಗಾಯತ್ರಿ,** ನಂ. ೨೦೧, 'ಸ್ಕೈಲೈನ್ ಗೋಲ್ಡನ್ ರೇಸ್', ಛತ್ರಂ ಬ್ಲಾಕ್, ಕೆಂಪೇಗೌಡ ನಗರ, ಗವೀಪುರಂ, ಬೆಂಗಳೂರು - ೫೬೦ ೦೧೯



# ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ





**ಶ್ರೀ ಜಗದೀಶ್ ಶೆಟ್ಟರ್**
ಸನ್ಮಾನ್ಯ ಮುಖ್ಯಮಂತ್ರಿಗಳು,
ಕರ್ನಾಟಕ ಸರ್ಕಾರ

### ವೈಶಿಷ್ಟ್ಯತೆ

* ಅಪಘಾತ, ಆರೋಗ್ಯ, ಭದ್ರತೆ ಹಾಗೂ ಸುರಕ್ಷತೆಯ ಕಾಳಜಿ
* ಸುಮಾರು 10,000 ಕ್ರೀಡಾಪಟುಗಳಿಗೆ ವಿಮಾ ಪಾಲಿಸಿ ಲಭ್ಯ
* ರಾಜ್ಯದ ಅಂತರ್ ರಾಜ್ಯ, ಅಂತರ್ ರಾಷ್ಟ್ರೀಯ ಹಾಗೂ ರಾಷ್ಟ್ರೀಯ ಕ್ರೀಡಾಪಟುಗಳಿಗೆ ಇದೊಂದು ವರದಾನ
* ಕ್ರೀಡಾ ಸಾಮಗ್ರಿ/ವಸ್ತುಗಳ (Sports Kit) ನಷ್ಟ ಪರಿಹಾರ
* ಕ್ರೀಡಾಪಟುಗಳ ಸನಿಹದ ಸಂಬಂಧಿಗಳಿಗೆ ಹಾಗೂ ಜೊತೆಗಿದ್ದ 3ನೇ ವ್ಯಕ್ತಿ (3rd Party) ಗಳಿಗೆ ಅಪಘಾತದ ನಷ್ಟ ಪರಿಹಾರ
* ಕ್ರೀಡಾಪಟುಗಳ ಅವಲಂಬಿತರಿಗೆ ಆಶ್ರಯ
* ಸರಳ ವಾರ್ಷಿಕ ನವೀಕರಣ ಸೌಲಭ್ಯ



**ಶ್ರೀ ಎಂ. ಪಿ. ಅಪ್ಪಚ್ಚು (ರಂಜನ್)**
ಸನ್ಮಾನ್ಯ ಯುವ ಸಬಲೀಕರಣ
ಮತ್ತು ಕ್ರೀಡಾ ಸಚಿವರು,
ಕರ್ನಾಟಕ ಸರ್ಕಾರ

### ಅರ್ಹತೆ ಹಾಗೂ ನಿಬಂಧನೆ

**ಅರ್ಹತೆ :** ರಾಜ್ಯ, ಅಂತರ್‌ರಾಜ್ಯ, ರಾಷ್ಟ್ರ, ಅಂತರ್ ರಾಷ್ಟ್ರ ಮಟ್ಟದ ಕ್ರೀಡಾಕೂಟಗಳಲ್ಲಿ ಕರ್ನಾಟಕವನ್ನು ಪ್ರತಿನಿಧಿಸುವ ಎಲ್ಲಾ ಕ್ರೀಡಾಪಟುಗಳು ಹಾಗೂ ಕ್ರೀಡಾ ಶಾಲೆ ಮತ್ತು ಕ್ರೀಡಾ ನಿಲಯಗಳಲ್ಲಿ ವ್ಯಾಸಂಗ ಮಾಡುತ್ತಿರುವ ಕ್ರೀಡಾ ವಿದ್ಯಾರ್ಥಿಗಳು ಅರ್ಹರು.

**ನಿಬಂಧನೆಗಳು :** ಯುವ ಕ್ರೀಡಾ ಸಂಜೀವಿನಿ ವಿಮಾ ಯೋಜನೆಯ ನಿಯಮ ಹಾಗೂ ಷರತ್ತುಗಳನ್ನು ವಿಮಾ ಯೋಜನೆ ಅಳವಡಿಕೆಯ ಸಂದರ್ಭದಲ್ಲಿ ಕ್ರೀಡಾಪಟುಗಳಿಗೆ ತಿಳಿಸಲಾಗುವುದು.

**ವಯೋಮಿತಿ :** ಕನಿಷ್ಠ 07 ವರ್ಷ ಹಾಗೂ ಗರಿಷ್ಠ 35 ವರ್ಷ

**ಅವಧಿ :** ವಿಮೆ ಅಳವಡಿಕೆಯ ದಿನದಿಂದ ಒಂದು ವರ್ಷದವರೆಗೆ ವಿಮೆ ಚಾಲ್ತಿಯಲ್ಲಿರುತ್ತದೆ.

**ಪ್ರೀಮಿಯಂ :** ಕ್ರೀಡಾಪಟುಗಳಿಗೆ ವಿಮಾ ಯೋಜನೆ ಸಂಪೂರ್ಣ ಉಚಿತ



### ವಿಮಾ ಯೋಜನೆಯ ಪ್ರೀಮಿಯಂ ದರ ಹಾಗೂ ವಿಮಾ ಸೌಲಭ್ಯಗಳ ವಿವರ :

| ಕ್ರಮ ಸಂ. | ವಿವರ | ಪ್ರೀಮಿಯಂ ದರ (ಇಲಾಖೆಯಿಂದ ಪಾವತಿಸಲಾಗುವುದು) | ಕ್ರೀಡಾಗಂಟು ಕಳೆದುಹೋದಲ್ಲಿ/ ನಷ್ಟವಾದಲ್ಲಿ ಹೆಚ್ಚುವರಿ ಅಳವಡಿಕೆ | ಮರಣ ವಿಮಾಮೊತ್ತ | ವೈದ್ಯಕೀಯ ವಿಮಾಮೊತ್ತ |
|---|---|---|---|---|---|
| 1 | ಅಂತರ್ ರಾಷ್ಟ್ರೀಯ ಮಟ್ಟದ ಕ್ರೀಡೆಗಳಲ್ಲಿ ಭಾಗವಹಿಸುವ ಕ್ರೀಡಾಪಟುಗಳಿಗೆ | 833/- | 5000/- | 5,00,000/- | 3,00,000/- |
| 2 | ರಾಷ್ಟ್ರಮಟ್ಟದ ಕ್ರೀಡೆಗಳಲ್ಲಿ ಭಾಗವಹಿಸುವ ಕ್ರೀಡಾಪಟುಗಳಿಗೆ | 507/- | 3,000/- | 2,00,000/- | 1,50,000/- |
| 3 | ರಾಜ್ಯಮಟ್ಟದಲ್ಲಿ ಭಾಗವಹಿಸುವ ಕರ್ನಾಟಕದ ಕ್ರೀಡಾಪಟುಗಳಿಗೆ | 331/- | | 1,00,000/- | 75,000/- |

**ಎಂ. ಕೆ. ಬಲದೇವಕೃಷ್ಣ, ಭಾ.ಆ.ಸೇ.**
ನಿರ್ದೇಶಕರು

**ಶಂಭು ದಯಾಳ್ ಮೀನ**
ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು
ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ



**ಸಂಪರ್ಕಿಸಿರಿ :**

ನಿರ್ದೇಶಕರು
**ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ**
ರಾಜ್ಯ ಯುವ ಕೇಂದ್ರ, ನೃಪತುಂಗ ರಸ್ತೆ, ಬೆಂಗಳೂರು – 560 001, ದೂರವಾಣಿ : 080–2221 5601

# ನನಗೂ ಜ್ಞಾನಪಿತ್ತ ಪ್ರಶಸ್ತಿ



ಸಾವು ಯಾರಿಗಿಲ್ಲ ಸ್ವಾಮಿ ? ಖ್ಯಾತ ಸಾಹಿತಿಯಾದ ನಾನೂ ಸತ್ತು ಹೋದೆ : ಮೊದಲನೆಯ ಬಾರಿಗೆ ಮತ್ತು ಕೊನೆಯ ಬಾರಿಗೆ.

ರಾಜ್ಯದ ಹಲವೆಡೆ ನನ್ನ ಸಾವಿನ ನೋವನ್ನು ಪ್ರಕಟಿಸುವ ಹಲವಾರು ಬೋರ್ಡುಗಳು, ಬ್ಯಾನರುಗಳು ಕಾಣಿಸಿಕೊಂಡವು. ಆಡುಗೋಡಿಯ ಸಂಘವೊಂದು ಪೂರ್ತಿ ಕಾಲುದಾರಿಯನ್ನೂ, ಅರ್ಧರಸ್ತೆಯನ್ನೂ ಆಕ್ರಮಿಸಿ ಬ್ಯಾನರೊಂದನ್ನು ನಿಲ್ಲಿಸಿತು. ಅದಕ್ಕೆ ತಲೆ ತಾಗಿ ಇಬ್ಬರು ದ್ವಿಚಕ್ರ ವಾಹನ ಚಾಲಕರು ಶಿವನ ಪಾದ ಸೇರಿದರೂ ಆ ಬ್ಯಾನರಿನಲ್ಲಿ ನನ್ನ ಸಾವಿನಿಂದ ಅವರಿಗೆ ಉಂಟಾದ ನೋವನ್ನು ಪ್ರಕಟಿಸಿ, ನನ್ನ ಆತ್ಮಕ್ಕೆ ಚಿರಶಾಂತಿ ದೊರಕಲೆಂದು ಬರೆದಿದ್ದರು. ಕೆಳಗೆ ಆ ಸಂಘದ ಎಲ್ಲಾ ನಲವತ್ತು ಪದಾಧಿಕಾರಿಗಳ ವಿವಿಧ ಗಾತ್ರದ ವರ್ಣದ ಚಿತ್ರಗಳಿದ್ದವು, ಎಲ್ಲರೂ ನಗುತ್ತಿದ್ದರು. ಅಷ್ಟಾಗಿಯೂ ಕೆಳಗೆ ಜಾಗವಿದ್ದುದರಿಂದ ಎಲ್ಲಾ 'ನಾಗರಿಕರಿಗೆ ಯುಗಾದಿಯ, ಗಣೇಶನ ಹಬ್ಬದ, ಸ್ವಾತಂತ್ರ್ಯೋತ್ಸವದ, ದೀಪಾವಳಿಯ, ಕ್ರಿಸ್‌ಮಸ್‌ನ ಮತ್ತು ಮಕರ ಸಂಕ್ರಮಣದ ಹಾರ್ದಿಕ ಶುಭಾಶಯ'ಗಳನ್ನು ಕೋರಲಾಗಿತ್ತು. ಸತ್ಯವಾಗಿ ಹೇಳಬೇಕೆಂದರೆ ಅದು 'ಆರ್ಥಿಕ ಶುಭಾಶಯಗಳು,' ಆಗಿತ್ತು. ಬೀದಿಯಲ್ಲಿ ಹೋಗುವ ಚಾಲಕರು ರಸ್ತೆ ತಡೆ ಮಾಡಿದ ಈ ಬ್ಯಾನರ್ ಬಗ್ಗೆ ಗೊಣಗಿದರೂ ತಮಗೆ 'ಶುಭಾಶಯ' ಇರುವುದಕ್ಕಾಗಿ ತಮಗಾದ ಕಷ್ಟವನ್ನು ತಡೆದುಕೊಂಡರು.

ಚುನಾವಣೆ ಹತ್ತಿರ ಬರುತ್ತಿದ್ದಂತೆಯೇ ಸರಕಾರವು ಜನರ ಬೇಡಿಕೆಗಳನ್ನು ಈಡೇರಿಸುವ ಭರವಸೆಗಳನ್ನು ಸುರಿಸುತ್ತವೆ. ಯಾರೋ ಒಬ್ಬ ಅನಾಮಧೇಯ ವ್ಯಕ್ತಿ ಪತ್ರಿಕೆಗಳಿಗೆ ಇ-ಮೈಲ್ ಕಳುಹಿಸಿ, ಸೂರಿ ಹಾರ್ದಳ್ಳಿಯವರಿಗೆ ಮರಣೋತ್ತರ 'ಜ್ಞಾನಪಿತ್ತ ಪ್ರಶಸ್ತಿ' ಕೊಡಬೇಕೆಂದು ಸರಕಾರವನ್ನು ಒತ್ತಾಯಿಸಿದರು. ಹೆಸರಾಂತ ವ್ಯಕ್ತಿಗಳಿಗೆ ಪ್ರಶಸ್ತಿಗಳ ಸಾಲೇ ಬರುತ್ತದೆ, ಆದರೆ ಅಷ್ಟೊಂದು ಪ್ರಖ್ಯಾತರಾಗಿರದವರಿಗೆ ಕೊಟ್ಟರೆ ಜನಸಾಮಾನ್ಯರು ಪುಳಕಿತಗೊಳ್ಳುತ್ತಾರೆ, ಆಡಳಿತದಲ್ಲಿರುವ ಸರಕಾರವನ್ನು ಬೆಂಬಲಿಸುತ್ತಾರೆ ಎಂಬುದು ಅವರ ವಾದಸರಣಿಯಾಗಿತ್ತು.

ಕೇಂದ್ರ ಸರಕಾರದ ಮಂತ್ರಿಯೊಬ್ಬರು ಈ ಮನವಿಯನ್ನು ಸರಿಯೆಂದು ಪರಿಗಣಿಸಿತು. ಅಮಿತಾಬ್ ಬಚ್ಚನ್‌ರಂಥವರಿಗೆ ಪ್ರಶಸ್ತಿ ಕೊಡುವುದೆಂದರೆ ಸಮುದ್ರಕ್ಕೆ ಕೊಡ ನೀರು ಸುರಿದಂತೆ : ಸುರಿದರೂ ಒಂದೇ, ಸುರಿಯದಿದ್ದರೂ ಒಂದೇ. ಸೂರಿ ಜನಸಾಮಾನ್ಯರನ್ನು ಪ್ರತಿನಿಧಿಸುತ್ತಾರೆ. ಅವರಿಗೆ ಪ್ರಶಸ್ತಿ ಕೊಟ್ಟರೆ ಶ್ರೀಸಾಮಾನ್ಯನಿಗೆ ಕೊಟ್ಟಂತೆ. ಆದರೂ ಶಿಷ್ಟಾಚಾರ ಅಥವಾ ಪ್ರೊಟೊಕಾಲ್ ಅಂಥ ಒಂದಿದೆಯಲ್ಲ, ಕೊಡಬಹುದೇ ಬೇಡವೇ ಎಂದು ತಿಳಿಸಿ ಎಂದು ಕರ್ನಾಟಕದ ರಾಜ್ಯ ಸರಕಾರಕ್ಕೆ ಪತ್ರ ಬರೆದರು. ರಾಜ್ಯ ಸರಕಾರವು ಈ ಕೆಲಸವನ್ನು ಕನ್ನಡ ಅಸಂಸ್ಕೃತಿ ಇಲಾಖೆಗೆ ಒಪ್ಪಿಸಿತು. ಇಲಾಖೆಯ ಅಧ್ಯಕ್ಷರು ತಮ್ಮ ಕಾರ್ಯದರ್ಶಿಯನ್ನು ಕರೆದು ಕೇಳಿದರು, 'ಏನ್ರೀ, ಕೊಡಬೈದೇನ್ರಿ?'

''ಸರ್, ಹಾಗೆಲ್ಲಾ ಕೊಟ್ಟರೆ ಸ್ವಜನಪಕ್ಷಪಾತ ಎಂದು ಜನ ಹೇಳಿಯಾರು. ಒಂದು ಕಮಿಟಿ ನೇಮಿಸಿ ಅದರ ವರದಿಯಂತೆ ಕೊಡುವ/ಕೊಡದಿರುವ ಕೆಲಸ ಮಾಡಿದರೆ ನಾವು ಸೇಫ್...'' ಎಂದರು ಅವರ ಆಪ್ತ ಕಾರ್ಯದರ್ಶಿ.

''ಪರವಾಗಿಲ್ಲ ಕಣ್ರೀ ನೀವು... ನಿಮಗೂ ತಲೆ ಐತೆ. ಅದಕ್ಕೇ ನಾನು ಬ್ರಾಹ್ಮಣರನ್ನೇ ಈ ಪೋಸ್ಟಿಗೆ ನೇಮಿಸ್ಕಳಾದು. ಸರಿ, ನಮ್ಮ ಚಿಕ್ಕಪ್ಪ ಅವ್ರೆ. ಅವರೇ ಕಮಿಟಿ ಅಧ್ಯಕ್ಷರಾಗಿರಲಿ,'' ಹೇಳಿದರು ಮುಖ್ಯಸ್ಥರು. ''ಈ ಸೂರಿಗೆ ಪ್ರಶಸ್ತಿ ಕೊಡಬೈದೊ ಬ್ಯಾಡವೋ ಅಂತ ಅವರು ತೀರ್ಮಾನಿಸ್ತವ್ರೆ.''

ಟಿಪ್ಪು ಸುಲ್ತಾನನ ಕಾಲದಿಂದಲೂ ಹೀಗೆ. ಅನರ್ಹರು ಅಧಿಕಾರ ಹಿಡಿಯುತ್ತಾರೆ, ಅರ್ಹರು ಅವರ ಸೇವೆ ಮಾಡುತ್ತಾರೆ.

''ಸರ್, ನಿಮಗೇ ಅರವತ್ತಾಗಿದೆ, ಅದರಲ್ಲಿಯೂ ನಿಮ್ಮ ಚಿಕ್ಕಪ್ಪ ಅಂದರೆ...'' ರಾಗ ಎಳೆದರು ಕಾರ್ಯದರ್ಶಿ.

''ಇರಲಿ ಬಿಡ್ರಿ... ಅವರಿಗೆ ತೊಂಬತ್ತಾಗೈತೆ. ಕಣ್ಣು ಕಾಣಿಸಾಕಿಲ್ಲ, ಕಿವಿ ಕೇಳಾಕಿಲ್ಲ, ಆದರೂ ಎರಡೆರಡು ಎಂಡ್ರನ್ನ ಮೇಂಟೈನ್ ಮಾಡ್ತವ್ರೆ...''

''ಸರ್, ಕಣ್ಣಿಲ್ಲ, ಕಿವಿಯಿಲ್ಲ ಅಂತೀರಿ. ಹಾಗಿರುವಾಗ ಸಾಹಿತ್ಯದ ಬಗ್ಗೆ...''

''ಏನ್ರೀ ನೀವು ಅನ್ನಾದು ? ಅವರು ಬಲ್ ಘಾಟಿ. ಎಬ್ಬೆಟ್ಟೇ ಆದರೂ ಆ ಕಾಲಕ್ಕೆ ಎರಡು ಕೋಟಿ ಸಂಪಾದನೆ ಮಾಡವ್ರೆ...''

ಸಾಹಿತ್ಯದ ಮೌಲ್ಯಮಾಪನಕ್ಕೆ ಕಣ್ಣು-ಕಿವಿ ಇಲ್ಲದ, ಓದಲು-ಬರೆಯಲು ಬಾರದ ವ್ಯಕ್ತಿಯ ನೇಮಕ. ಇದು ನಮ್ಮ ದೇಶದ ದುರಂತ.

ಅಧಿಕಾರಿಗಳು ಮುಂದುವರಿಸಿದರು... ''ಕಮಿಟಿನಾಗೆ ಇಂದುಳಿದವರಿರಬೇಕು, ಅಲ್ಪ ಸಂಖ್ಯಾತರಿರಬೇಕು, ನಮ್ಮ ಜಾತಿಯವರೂ ಇರಬೇಕು, ತಿಳಿತಾ ?''

''ಸರ್, ಸಾಹಿತ್ಯದ ಬಗ್ಗೆ ನಿರ್ಧಾರ ತೆಗೆದುಕೊಳ್ಳುವುದಕ್ಕೆ ಸಾಹಿತಿಯನ್ನು ನೇಮಿಸಬೇಕಲ್ಲವೇ ?'' ಕಾರ್ಯದರ್ಶಿ ಕೇಳಿದ.

''ಯಾವ ಕಾಲದಾಗೆ ಅದೀರ್ರೀ ನೀವು ? ಇದು ಜಾತಿ ಕಾಲ. ನಮ್ಮ ಜಾತಿಯವರಿಗೆ ಸೀಟು ಕೊಡಿ, ನಮ್ಮ ಜಾತಿಯವರಿಗೆ ಮಂತ್ರಿಗಿರಿ ಕೊಡಿ, ನಮ್ಮ ಜಾತಿಯವರಿಗೆ ಅಧಿಕಾರ ಕೊಡಿ ಎಂದು ಕೇಳೋ ಕಾಲ ಇದು.

> ನನಗೆ ಜ್ಞಾನಪಿತ್ತ ಪ್ರಶಸ್ತಿ ಬರುತ್ತಿದೆ ಎಂದು ತಿಳಿಯುತ್ತಲೇ ನನ್ನ ಮನೆಗೆ ದೂರವಾಣಿ ಕರೆಗಳು ಬರತೊಡಗಿದವು : ತಮಗೆ ಎರಡು ಲಕ್ಷ ರೂಪಾಯಿ ಕೊಡದಿದ್ದರೆ ನಿಮ್ಮ ಮನೆಯವರನ್ನ ಕಿಡ್‌ನ್ಯಾಪ್ ಮಾಡುತ್ತೇವೆ ಎಂದು. ಮತ್ತೆ ಯಾರೋ ಬಲು ವಿನಯದಿಂದ ಮಾತನಾಡಿ, ''ನಿಮಗೆ ಈ ಪ್ರಶಸ್ತಿ ಬರಲು ನಾವೇ ಕಾರಣ. ಹಾಗಾಗಿ ನಮ್ಮ ಫೀಸ್ ಕೊಡಬೇಕು'' ಎಂದು ಹಕ್ಕೊತ್ತಾಯ ಮಾಡಿದರು. ಹಾಗಾಗಿ ನನ್ನ ಹೆಂಡತಿ ತನ್ನ ಫೋನ್ ನಂಬರನ್ನೇ ಬದಲಿಸಬೇಕಾಗಿ ಬಂತು.

**ಸೂರಿ ಹಾರ್ದಳ್ಳಿ**

ಯಾವನಾದ್ರೂ ಅರ್ಹನಿಗೆ ಅಧಿಕಾರ ಕೊಡಿ, ಮಂತ್ರಿಗಿರಿ ಕೊಡಿ ಅಂತ ಕೇಳ್ತವ್ರಾ ? ನೀವು ಸುಮ್ಮನೆ ನಾನು ಏಳಿರಾದನ್ನ ಮಾಡಿ,'' ಎಂದರು ಅವರು.

ಯಾರ ದುರದೃಷ್ಟವೋ ಏನೋ, ಜ್ಞಾನಪಿತ್ತ ಪ್ರಶಸ್ತಿಗೆ ನನ್ನ ಹೆಸರನ್ನು ಸೂಚಿಸಲಾಯಿತು. ಸಾಹಿತ್ಯ ಸಮ್ಮೇಳನವೊಂದರಲ್ಲಿ ಮುಖ್ಯಮಂತ್ರಿಗಳು ಇದನ್ನು ಪ್ರಕಟಿಸಿಯೇಬಿಟ್ಟರು. ಕೊಡುವ ಹಣದ ಮೊತ್ತವೂ ದೊಡ್ಡದು. ಆ ದಿನವೂ ಬಂತು. ಪ್ರಶಸ್ತಿ ಫಲಕ, ಪ್ರಶಸ್ತಿ ಮೊತ್ತದ ಚೆಕ್‌ಅನ್ನು ನನ್ನ ಹೆಂಡತಿಗೆ ಕೊಡಬೇಕು.

ಅಷ್ಟರಲ್ಲಿ ಪರಿಸರ ಪ್ರೇಮಿಗಳು ಕ್ಯಾತೆ ತೆಗೆದರು. ಸಾಹಿತಿಗಳು ತುಂಬ ಬರೀತಾರೆ, ಪುಸ್ತಕ ಪ್ರಕಟಿಸ್ತಾರೆ, ಹೆಚ್ಚು ಕಾಗದಗಳನ್ನು ಬಳಸಿಕೊಳ್ತಾರೆ. ಹೀಗಾಗಿ ಹೆಚ್ಚು ಹೆಚ್ಚು ಮರಗಳನ್ನು ಕತ್ತರಿಸಬೇಕಾಗುತ್ತದೆ. ಮರಗಳನ್ನು ಕತ್ತರಿಸುವುದರಿಂದ ಪರಿಸರ ಹಾಳಾಗುತ್ತದೆ, ಪರಿಸರ ಹಾಳಾದರೆ ಹವಾಮಾನ ವೈಪರೀತ್ಯ ಉಂಟಾಗುತ್ತದೆ. ಹಾಗಾಗಿ ಸಾಹಿತಿಗಳು ಪರಿಸರ ನಾಶಕ್ಕೆ ಮುಖ್ಯ ಕಾರಣ. ಆದುದರಿಂದ ಸಾಹಿತಿಗಳನ್ನು ಉತ್ತೇಜಿಸುವ ಯಾವುದೇ ಕ್ರಮಗಳನ್ನು ಸರಕಾರ ತೆಗೆದುಕೊಳ್ಳಬಾರದು, ಎಂಬುದು ಅವರ ವಾದ.

ಇದಾಗಲೇ ಈ ಪ್ರಶಸ್ತಿಯನ್ನು ಪಡೆದವರ ಹೊರತಾಗಿ, ಇತರ ಎಲ್ಲಾ ಚಿಲ್ಲರೆ-ಪಲ್ಲರೆ ಸಾಹಿತಿಗಳು ಇದನ್ನು ವಿರೋಧಿಸಿದರು. ಹೋರಾಟ ಇನ್ನೂ ನಡೆಯುತ್ತಲೇ ಇದೆ. ಪತ್ರಿಕೆಗಳಿಗೆ ಪುಟಗಳನ್ನು ತುಂಬಲು ಸೆನ್ಸೇಶನ್ ವಿಷಯ ಸಿಕ್ಕಿತು. ಹೋರಾಟ, ಚೀರಾಟ, ಕಿರಿಚಾಟಗಳು ಮುಗಿಲು ಮುಟ್ಟಿದವು. ಕೆಲಸವಿಲ್ಲದವರಿಗೆ ದಿನದ ಸಂಪಾದನೆ, ಇದ್ದವರಿಗೆ ಪುಕ್ಕಟೆ ಮನರಂಜನೆ.

ಇರೋದ ಪಕ್ಷದ ಧುರೀಣರೊಬ್ಬರು ಎಂದರು: ''ಇದ್ ನಾನ್ ಏಳೋದು ಏನಪ್ಪಾ ಅಂದರೆ, ಇದರನ್ನಾಗೆ ಸೂರಿ-ಗೀರಿಗೆ ಗೌರವ ಕೊಡೋದ್ರಲ್ಲಿರೊದ್ರಲ್ಲಿ ತಕ್ಕಂಥ ಇಷಯ ಇದೇಂತನ್ನೋದ್ರಲ್ಲಿ ಒಂದಿಷ್ಟು ಇದು ಐತೆ ಅಂತನ್ನೋದನ್ನಂತಂಬೋದ್ರಲ್ಲಿ ತಿಳ್ಕಳ್ಳಾದಿದೇಂತ ಏಳಾಕೆ ಬಯಸ್ತೇನೆ...''

ಮತ್ತೆ ಮುಂದುವರಿಸಿದರು, ''ನಮ್ಮ ಕನ್ನಡದ ಎಮ್ಮೆಯ ಪುತ್ರರಾದ ಇವರಿಗೆ ಇದು ಬಂದಿತ್ತೆಂದು ಏಳತಕ್ಕದೆಂದರೆ ಎಂಬುದುದನ್ನು ನಾನು ಇಲ್ಲಿ ಹೇಳಲು ಇಚ್ಛಿಸುತ್ತೇನೆ. ಆದ್ದರಿಂದ...''

ಅಷ್ಟು ಹೊತ್ತಿಗೆ ಕಾಫಿ ಮತ್ತು ಬಿಸಿ ವಡೆಗಳ ವಾಸನೆ ಪತ್ರಕರ್ತರ ಮೂಗಿಗೆ ಅಡರಿದ್ದರಿಂದ ಅವರೆಲ್ಲರ ಕಿವಿ ಮುಚ್ಚಿಕೊಂಡು, ಕಾಲುಗಳು ಜಾಗ್ರತವಾದವು. ಇರೋದ ಪಕ್ಷದ ಧುರೀಣರು ಏನೆಂದರೆಂಬುದು ಯಾರಿಗೂ ಕೇಳಲಿಲ್ಲ.

ಹಲವಾರು ಪತ್ರಿಕೆಗಳ ವರದಿಗಾರರು ಇವರು ಏನು ಹೇಳಿದ್ದಾರೆಂಬುದನ್ನು ಅರ್ಥಮಾಡಿಕೊಳ್ಳಲಾಗದೆ, ತಲೆ ಕೆದರಿಕೊಂಡು, ಕೂದಲುದುರಿಸಿಕೊಂಡು, ಮಿದುಳು ಕೆರ ಆಗಿ ಕೊನೆಗೆ ಒಂದೊಂದು ರೀತಿಯಲ್ಲಿ ವರದಿಸಿದರು.

ಇದರ ಮಧ್ಯೆ ಇನ್ನೊಂದು ಕಿರಿಕಿರಿ ಶುರುವಾಯಿತು. ಅದನ್ನು ಕೆಲ ಪತ್ರಿಕೆಗಳವರೇ ಆರಂಭಿಸಿ ಮಜಾ ತೆಗೆದುಕೊಂಡರೆಂಬುದು ಸುದ್ದಿ. ಯಾರೋ ಒಬ್ಬರು ದಿನಪತ್ರಿಕೆಯ ಇಡೀ ಪುಟಕ್ಕಾಗುವಷ್ಟು ಬರೆದರು: ''ಸೂರಿ ಹಾರ್ದಳ್ಳಿಯವರು ಬಚ್ಚಾ ಸಾಯಿತಿ. ಅವರಿಗೆ ಜ್ಞಾನಪಿತ್ತ ಪ್ರಶಸ್ತಿ ಕೊಡುವ ಬದಲು ಸೇಲೂರು ಶ್ಯಾಮಮೂರ್ತಿಯವರಿಗೆ ಕೊಡಬೇಕಿತ್ತು. ಶ್ಯಾಮಮೂರ್ತಿಯವರು ಬುಡ್ಡಣ್ಣನ ಬಗ್ಗೆ ಸಂಶೋಧನಾತ್ಮಕ ಗ್ರಂಥ ರಚಿಸಿದ್ದಾರೆ. ಕತೆ, ಕಾದಂಬರಿ, ಹಾಸ್ಯ ಲೇಖನ, ಪ್ರಬಂಧಗಳಲ್ಲೂ ಸೈ ಎನಿಸಿಕೊಂಡಿದ್ದಾರೆ''... ಎಂದೆಲ್ಲಾ. ಇದರ ಪರ - ವಿರೋಧ ಬರೆಹಗಳು ಹಾರಾಡಿದವು, ರಾರಾಜಿಸಿದವು, ಗುದ್ದಿಕೊಂಡವು. ಪತ್ರಿಕೆಗಳಲ್ಲಿ ಪತ್ರಗಳ ಮಹಾಪೂರ. ಟಿವಿಗಳಲ್ಲಿ ಪರ-ವಿರೋಧಗಳ ಡಿಬೇಟುಗಳು. ಕೆಲವೇ ದಿನ ಅಷ್ಟೆ. ಆಮೇಲೆ ಜನ ಮರೆತರು, ಯಾಕೆಂದರೆ ಅದಕ್ಕಿಂತ ದೊಡ್ಡ ವಿಷಯ ಆ ಜಾಗವನ್ನು ಆಕ್ರಮಿಸಿತು.




ಫಲವಾಗಿ ಶ್ಯಾಮಮೂರ್ತಿ ಬರೆದ ಬುಡ್ಡಣ್ಣ ಪುಸ್ತಕಕ್ಕೆ ಸಕತ್ ಡಿಮಾಂಡು. ಒಂದೇ ತಿಂಗಳಿನಲ್ಲಿ ಮೂರು ಬಾರಿ ಮುದ್ರಣವಾಗಿತ್ತು. ಶ್ರೀಮಂತರೆಲ್ಲರೂ ಅದನ್ನು ಕೊಂಡು ಷೋಕೇಸಿನಲ್ಲಿ ಭದ್ರವಾಗಿಟ್ಟರು. ಬಡವರು ಕೊಳ್ಳಲಾರರು, ಅಂತೆಯೇ ಮಧ್ಯಮ ವರ್ಗದ ಜನ. ಮಧ್ಯಮ ವರ್ಗದವರು ಗ್ರಂಥಾಲಯಗಳನ್ನೆಲ್ಲಾ ಜಾಲಾಡಿ ಆ ಪುಸ್ತಕ ಸಿಗುವುದೇ ಎಂದು ಪರದಾಡಿದರು. ಅದು ದೀರ್ಘ ಕಾಲ ಸಾಗಿತು.

ಪರಿಸರ ಪ್ರೇಮಿಗಳ ಸಂಘವು ಒಂದು ಮೆರವಣಿಗೆಯನ್ನು ಏರ್ಪಡಿಸಿತು. ವಿಷಯ ಏನೆಂದರೆ ನೀವು ತಿಳಿದುಕೊಂಡಂತೆ ಸಾಹಿತಿಗಳಿಗೆ ಯಾವುದೇ ಪ್ರಶಸ್ತಿಗಳನ್ನು ಕೊಡಬಾರದು, ಹಾಗೆ ನೀಡುವ ಮೂಲಕ ಪರಿಸರ ನಾಶ ಖಂಡಿತ ಎಂಬುದು ಅವರ ಅಭಿಪ್ರಾಯ. ಮೆರವಣಿಗೆ ವಿಧಾನಸೌಧದಿಂದ ಮೈಸೂರು ಚೌಕದವರೆಗೆ ಇತ್ತು. ನೂರಾರು ಜನರು ಭಾಗವಹಿಸಿದ್ದರು, ಅವರ ಕೈಗಳಲ್ಲಿ ವಿವಿಧ ಘೋಷಣೆಗಳ ಬೋರ್ಡುಗಳಿದ್ದವು.

ಅಂದೇ ಪ್ರಶಸ್ತಿ ಪರ ಗುಂಪೊಂದು ಪ್ರತಿಭಟನೆ, ಮೆರವಣಿಗೆ ಏರ್ಪಡಿಸಿತ್ತು. ಅದರ ಉದ್ದೇಶ ಈ ಪರಿಸರ ಪ್ರೇಮಿಗಳ ಅಭಿಪ್ರಾಯಗಳನ್ನು ಖಡಾಖಂಡಿತವಾಗಿ ಖಂಡಿಸುವುದು. ಮೆರವಣಿಗೆಯು ಮೈಸೂರು ಬ್ಯಾಂಕ್ ಚೌಕದಿಂದ ವಿಧಾನಸೌಧದವರೆಗೆ ಇತ್ತು. ಮೊದಲಿನ ಮೆರವಣಿಗೆಯಲ್ಲಿ ಭಾಗವಹಿಸಿ ಮೈಸೂರು ಬ್ಯಾಂಕ್ ವೃತ್ತದವರೆಗೆ ಬಂದವರು ತಮ್ಮಲ್ಲಿದ್ದ ಹಳೆಯ ಬೋರ್ಡು, ಫಲಕಗಳನ್ನು ಅಲ್ಲೇ ಎಸೆದು ಹೊಸ ಫಲಕ, ಬೋರ್ಡುಗಳನ್ನು ಹಿಡಿದುಕೊಂಡು ವಿಧಾನಸೌಧದವರೆಗೆ ಹೊರಟರು. ಅದೇ ಮುಖಗಳು, ಘೋಷಣೆ ಬೇರೆ, ಅಷ್ಟೆ.

ಮೈಸೂರು ಬ್ಯಾಂಕ್ ವೃತ್ತದ ಹತ್ತಿರ ನೂರಾರು ಬೋರ್ಡುಗಳು ವಾರಗಳ ಕಾಲ ಹಾರಾಡುತ್ತಿದ್ದವು.

ನಮ್ಮ ದೇಶದಲ್ಲಿ ಪ್ರತಿಭಟನೆಯಿಂದ ಏನೂ ಆಗುವುದಿಲ್ಲ. ಪೆಟ್ರೋಲ್ ಬೆಲೆ ಏರಿಕೆಯನ್ನು ಖಂಡಿಸಿ ನಡೆಸಿದ 'ಭಾರತ ಬಂದ್'ನಿಂದ ಏನಾದರೂ ಆಯಿತೇ ? ಜೆಪಿಸಿ ನೇಮಿಸಿ ಎಂದು ವಿರೋಧ ಪಕ್ಷಗಳು ಪಾರ್ಲಿಮೆಂಟಿನ ಕಲಾಪಗಳನ್ನು ಬಹಿಷ್ಕರಿಸಿದವು, ಏನಾದರೂ ಆಯಿತೇ ? ಏನೂ ಆಗುವುದಿಲ್ಲ, ಬದಲಿಗೆ ನಡೆಯಬೇಕು, ವರ್ಷಕ್ಕೊಂದು ತಿಥಿ ಇರುವ ಹಾಗೆ. ಈಗಲೂ ಹಾಗೆಯೇ ಆಯಿತು. ಜನ ನೋಡಿದರು, ಓದಿದರು, ಮರೆತರು. ನನಗೂ ಜ್ಞಾನಪಿತ್ತ ಪ್ರಶಸ್ತಿಯ ಘೋಷಣೆಯಾಯಿತು. ಪ್ರದಾನದ ದಿನ ಮತ್ತು ಸ್ಥಳಗಳನ್ನೂ ಘೋಷಿಸಿಯಾಯಿತು.

ಅಷ್ಟರಲ್ಲಿ ಇನ್ನೊಂದು ಭಯಾನಕ ಸುದ್ದಿ ಪ್ರಕಟವಾಯಿತು. ದಾವೂದ್ ಇಬ್ರಾಹಿಂ ಜೊತೆಗೆ ನಾನಿರುವ ಫೋಟೋ ಒಂದನ್ನು ಎಲ್ಲೋ, ಎಲ್ಲಿಂದಲೋ ಸಂಗ್ರಹಿಸಿಬಿಟ್ಟರು. ದಾವೂದ್ ಜೊತೆಗೆ ಸೂರಿ ಇದ್ದಾನೆ (ರೆ) ಎಂದರೆ ಅವನೂ ದೇಶ ವಿದ್ರೋಹಿ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿದ್ದಾನೆ ಎಂದೇ ಅರ್ಥ ಎಂದು ಅನೇಕ ಸಂಘ-ಸಂಸ್ಥೆಗಳು ಘೋಷಿಸಿದವು. ಅದಕ್ಕೆ ವಿರೋಧ ಪಕ್ಷಗಳು ಸಹಮತ ವ್ಯಕ್ತಪಡಿಸಿದವು.

ಬರೀ ಸಹಮತವಾದರೆ ಪರವಾಗಿಲ್ಲ, ವಿಧಾನ ಸಭೆಗಳ ಅಧಿವೇಶನವನ್ನು ಬಹಿಷ್ಕರಿಸಲಾಯಿತು. ಸೂರಿಯವರು ಗೋದ್ರಾ ಹತ್ಯಾಕಾಂಡ, ಅಯೋಧ್ಯೆಯ ಮಸೀದಿ ಧ್ವಂಸ, ಮಾಲಗಾಂವ್ ಪ್ರಕರಣ, ೨೬/೧೧, ೯/೧೧, ೩೧/೩, ೨೫/೮, ೮/೦೮, ಮುಂತಾದವುಗಳಿಗೂ ಕಾರಣರು ಎಂಬುದು ಅವರ ವಾದವಾಗಿತ್ತು. ಈ ಪ್ರಕರಣಗಳ ಬಗ್ಗೆ ತನಿಖೆ ನಡೆಸಬೇಕು ಎಂದು ಖಡಾಖಂಡಿತವಾಗಿ ಒಕ್ಕೊರಲಿನಿಂದ, ಎಲ್ಲಾ ಮಾಧ್ಯಮಗಳ ಮೂಲಕ ಘೋಷಿಸಿದ್ದರಿಂದ ಸರಕಾರ ಪೇಚಿಗೆ ಸಿಕ್ಕಿಕೊಂಡಿತು. ಮುಖ್ಯಮಂತ್ರಿಗಳು ತುರ್ತು ಸಭೆಯೊಂದನ್ನು ಕರೆದು ಎಲ್ಲಾ ಸಚಿವರ ಮುಂದೆ ಈ ಸಮಸ್ಯೆಗೆ ಪರಿಹಾರವನ್ನು ನೀಡಿ, ಎಂದು ವಿನಂತಿಸಿಕೊಂಡರು.

ಒಬ್ಬ ಸಚಿವ, ಮು.ಮಂ.ಅವರಿಗೆ ಆಪ್ತರಾದವರು ತಮ್ಮ ಸಲಹೆಯನ್ನು ಕೊಟ್ಟರು. ''ಸರ್, ಇದಕ್ಕೆ ಒಂದು ಪರಿಹಾರ ಇದೆ.''

''ಔದೌದಾ? ಯೇನದು?'' ಮುಖ್ಯಮಂತ್ರಿಗಳ ಮುಖದಲ್ಲಿ ಸಂತೋಷದ ನರ್ತನ.

''ಸರ್, ಬಲು ಕಷ್ಟಪಟ್ಟು ಹುಡುಕಿದೆ ಸರ್. ಕೊನೆಗೂ ಕೇರಳದಲ್ಲಿ ನೀವು ಹೋಗದ, ಕೊಡುಗೆ-ದೇಣಿಗೆ ನೀಡದ ಒಂದು ದೇವಸ್ಥಾನ ಸಿಕ್ಕಿದೆ. ಅಲ್ಲಿಗೆ ಹೋಗಿ...''

''ಶ್ಯರಿ ಬಿಡಿ. ನಾನೂ, ಗೂಬಕ್ಕನೂ ಹೋಗ್ತೀವಿ. ಅಲ್ಲಿಗೆ ಏನು ಕೊಡಬೇಕ್ರೀ ?

ಆನೆನಾ ? ಆನೆಗಳು ಅವಾ ?'' ಕೇಳಿದರು ಮು.ಮಂ.

''ಇಲ್ಲ ಸರ್, ಅಲ್ಲಿಗೆ ಕತ್ತೆಗಳನ್ನ ಕೊಡಬೇಕು. ಕತ್ತೆಯನ್ನ ಕೊಟ್ಟು, ಅದರಿಂದ ಲತ್ತೆ ತಿಂದರೆ ವಿರೋಧ ಪಕ್ಷಗಳವರ ಬಾಯಿಗೆ ಸ್ಟಿಕರ್...''

ಮುಂದಿನ ಮಾತುಗಳನ್ನು ಆಡಿದ ಬಗ್ಗೆ ನನಗೆ ಡೌಟು ಇದೆ. ಹಾಗಾಗಿ ಅವನ್ನು ಕಂಸಗಳಲ್ಲಿ ಬರೆದಿದ್ದೇನೆ. ನೀವು ಬೇಕಿದ್ದರೆ ಓದಿಕೊಳ್ಳಬಹುದು.

(ಮು.ಮಂ. : ಕತ್ತೆಗಳಾದರೆ ಪರವಾಗಿಲ್ಲ. ನಮ್ಮ ರಾಜ್ಯದಲ್ಲಿ ೨೨೫ ಆಗಲೇ ಇವೆ. ಯಾವುದನ್ನಾದರೂ ಕೊಟ್ಟರಾಯಿತು.

ಕಾರ್ಯದರ್ಶಿ : ಹಿರಿಯ, ಮುಖಂಡ, ಮುದಿ ಕತ್ತೆ ಹೋದರೆ ರಾಜ್ಯಕ್ಕೆ ಲಾಭ. ಆದರೆ ಕೇರಳ ರಾಜ್ಯ ಹಾಳಾಗುತ್ತಲ್ಲ...)

ಕಾರ್ಯದರ್ಶಿ ಮುಂದುವರಿಸಿದ : ''ಒಂದೋ ಎರಡೋ, ಮೂರೋ ತನಿಖೆ ಸಮಿತಿ ನೇಮಿಸಿಬಿಡಿ. ವರದಿ ಬರಲು ಕೆಲವು ವರ್ಷಗಳಾದರೂ ಬೇಕು. ಆಗ ಯಾರಿರುತ್ತಾರೋ, ಯಾರು ಇರೋಲ್ಲವೋ ಯಾರಿಗೆ ಗೊತ್ತು. ಬೀಸೋ ದೊಣ್ಣೆ ತಪ್ಪಿಸಿಕೊಂಡರೆ ಸಾವಿರ ವರ್ಷ ಆಯಸ್ಸು. ಕೊನೆಗೂ ಬಂದ ವರದಿ ತಮ್ಮ ಪರವಾಗಿದ್ದರೆ ವಿರೋಧ ಪಕ್ಷಗಳು ಸುಮ್ಮನಾಗುತ್ತವೆ. ಇಲ್ಲವಾದರೆ ಇದು ಸರಕಾರದ ಪರವಾದ ವರದಿ, ತಿರಸ್ಕರಿಸಿ, ಎಂದು ಹೋರಾಡುತ್ತವೆ.''

ಮುಖ್ಯಮಂತ್ರಿಗಳಿಗೆ ಇದು ತಿಳಿಯದ್ದೇ ? ಹಾಡಿದ್ದೇ ಹಾಡು ಕಿಸಬಾಯಿ ದಾಸ ಎಂದು ಕಾರ್ಯದರ್ಶಿ ಹೇಳಬೇಕೇ ? ''ಅದು ನನಗೆ ಗೊತ್ತು ಕಣ್ರೀ. ಈಗ ಯಾವುದರಿಂದ ತನಿಖೆ ನಡೆಸಬೇಕು ಹೇಳಿ, ಸಿಓಡಿಯೋ, ಸಿಐಡಿಯೋ, ಸಿಬಿಐಯೋ..''

''ಎಲ್ಲಾದರಿಂದಲೂ ನಡೆಸಿಬಿಡಿ ಸರ್. ಎಫ್‌ಬಿಐ, ಕ್ಯುಎಎಲ್, ಆರ್‌ಟಿಪಿ, ಬಿಬಿಸಿ, ಸಿಬಿಸಿ, ಒಪಿಆರ್, ಎಲ್ಲರಿಂದಲೂ ನಡೆಸಿಬಿಡಿ,'' ಸಲಹಿಸಿದ ಆತ.

''ಇವ್ಯಾವುದೂರೀ... ನಾನು ಎಂದೂ ಕೇಳಿಲ್ಲ...'' ಗೊಣಗಿದರು ಮು.ಮಂ: ''ನನಗೂ ಗೊತ್ತಿಲ್ಲ, ವಿರೋಧ ಪಕ್ಷದವರಿಗೂ ಗೊತ್ತಿಲ್ಲ, ಆಡಳಿತ ಪಕ್ಷ ಯಾವುದಕ್ಕೂ ರೆಡಿ ಎಂದು ಹೇಳೋದಕ್ಕೆ ಇದು ಒಂದು ದಾರಿ. ನೀವು ಹಾಗಂದರೆ ಸರಕಾರ ತನಿಖೆಗೆ ಒಪ್ಪಿದೆ ಎಂದಮೇಲೆ ಅಲ್ಲೇನೂ ದೋಷ ಇರಲಿಕ್ಕಿಲ್ಲ ಎಂದು ಎರಡೂ ಕಡೆ ಮುಚ್ಚಿಕೊಂಡಿರುತ್ತವೆ.''

ನನ್ನ ಫೋಟೊ ದಾವುದ್ ಇಬ್ರಾಹಿಂ ಜೊತೆಗೆ ಹೇಗೆ ಬಂತು ಎಂಬುದು ನನಗೆ ಗೊತ್ತಿಲ್ಲ. ವಿಷಯ ಏನೆಂದರೆ 'ದಾವೂದ್ ಇಬ್ರಾಹಿಂ' ಎಂಬುದು ಒಂದು ಸಿಹಿ ತಿಂಡಿ, ಉತ್ತರ ಪ್ರದೇಶ ರಾಜ್ಯದ್ದು, ಎಂದೇ ನಾನು ಅಂದುಕೊಂಡಿದ್ದೆ.

ಆಗಲೇ ಹೇಳಿದಂತೆ ಪ್ರತಿಭಟನೆಯ ಕಾವು ಕ್ರಮೇಣ ಕಡಿಮೆಯಾಗತೊಡಗಿತು. ಅದಕ್ಕಿಂತ ದೊಡ್ಡ ವಿಷಯ ವೊಂದು ನಡೆಯಿತು. ಒಂದು ಗುಡ್ಡಕ್ಕಿಂತ ಇನ್ನೊಂದು ಗುಡ್ಡ ದೊಡ್ಡದು. ಜನರೂ ಸೂರಿಗೆ ಜ್ಞಾನಪಿತ್ತ ಪ್ರಶಸ್ತಿ ಕೊಡುವ ವಿಷಯವನ್ನು ಮರೆತರು.

ನನಗೆ ಜ್ಞಾನಪಿತ್ತ ಪ್ರಶಸ್ತಿ ಬರುತ್ತಿದೆ ಎಂದು ತಿಳಿಯುತ್ತಲೇ ನನ್ನ ಮನೆಗೆ ದೂರವಾಣಿ ಕರೆಗಳು ಬರತೊಡಗಿದವು : ತಮಗೆ ಎರಡು ಲಕ್ಷ ರೂಪಾಯಿ ಕೊಡದಿದ್ದರೆ ನಿಮ್ಮ ಮನೆಯವರನ್ನ ಕಿಡ್‌ನ್ಯಾಪ್ ಮಾಡುತ್ತೇವೆ ಎಂದು. ಮತ್ತೆ ಯಾರೋ ಬಲು ವಿನಯದಿಂದ ಮಾತನಾಡಿ, ''ನಿಮಗೆ ಈ ಪ್ರಶಸ್ತಿ ಬರಲು ನಾವೇ ಕಾರಣ. ಹಾಗಾಗಿ ನಮ್ಮ ಫೀಸ್ ಕೊಡಬೇಕು'' ಎಂದು ಹಕ್ಕೊತ್ತಾಯ ಮಾಡಿದರು. ಹಾಗಾಗಿ ನನ್ನ ಹೆಂಡತಿ ತನ್ನ ಫೋನ್ ನಂಬರನ್ನೇ ಬದಲಿಸಬೇಕಾಗಿ ಬಂತು.

ಅಂತೂ ನನಗೆ ಮರಣೋತ್ತರ ಜ್ಞಾನಪಿತ್ತ ಪ್ರಶಸ್ತಿ ಕೊಡುವುದಾಗಿ ಸರಕಾರ ಘೋಷಿಸಿತು.

ವರ್ಣರಂಜಿತ ಸಭೆಯನ್ನು ಸರಕಾರ ಏರ್ಪಡಿಸಿತ್ತು. ಇನ್ನೇನು ನನ್ನ ಹೆಂಡತಿಯು ಪ್ರಶಸ್ತಿ ಪಡೆಯಲು ವೇದಿಕೆ ಏರಬೇಕು, ಅಷ್ಟರಲ್ಲಿ ಇನ್ನೊಬ್ಬ ಹೆಂಗಸು ಸಭೆಯಿಂದ ಎದ್ದು ಬಂದು, ''ತಡೆಯಿರಿ'' ಎಂದು ಕೂಗಿದಳು. ಅವಳು ವೇದಿಕೆ ಏರಿ ತಾನೇ ಸೂರಿಯವರ ನಿಜವಾದ ಹೆಂಡತಿ, ಎಂದು ಘೋಷಿಸಿಕೊಂಡಳು. ಅವಳ ಕೆಲ ಹಿಂಬಾಲಕರು ಮತ್ತು ನನ್ನ ನಿಜವಾದ ಪತ್ನಿಯ ಕೆಲ ಸಂಬಂಧಿಕರು ಸಮಾರಂಭದಲ್ಲಿಯೇ ಹೊಡೆದಾಡಿಕೊಂಡರು. ರಕ್ತ ಹರಿಯಿತು. ಸುಮ್ಮನೆ ಸಮಯ ಕಳೆಯಲು, ಕೊನೆಗೊಂದು ಕಾಫಿಯಾದರೂ ಸಿಕ್ಕೀತು ಎಂದು ಬಂದ ಕೆಲವರನ್ನು ಪೊಲೀಸರು ಬಂಧಿಸಿ, ಸ್ಟೇಶನ್ನಿಗೆ ಕರೆದೊಯ್ದರು. ಹಾಗೆ ಮಾಡುವ ಮೂಲಕ ತಾವು ಶೀಘ್ರವೇ ಕ್ರಮ ತೆಗೆದುಕೊಂಡಿದ್ದೇವೆ ಎಂದು ಜನರಿಗೆ ತೋರಿಸಿಕೊಂಡರು. ಇತ್ತ ಸರಕಾರವು ಪ್ರಶಸ್ತಿಯನ್ನು ನೀಡುವ ಕಾರ್ಯಕ್ರಮವನ್ನು ನನ್ನ ನಿಜವಾದ ಉತ್ತರಾಧಿಕಾರಿ ಯಾರು ಎಂದು ತೀರ್ಮಾನವಾಗುವ ತನಕ ತಡೆಹಿಡಿಯಿತು. ಈಗ ವಿಷಯ ಕೋರ್ಟಿನ ಕಟಕಟೆಯಲ್ಲಿದೆ. ಇಬ್ಬರು ಲಾಯರುಗಳು ತಮ್ಮ ಹೊಸ ಮನೆಗಳಿಗೆ ಇನ್ನೆರಡು ಮಹಡಿಗಳನ್ನು ಕಟ್ಟುವ ಯೋಚನೆಯಲ್ಲಿದ್ದಾರೆ.

**ಸೂರಿ ಹಾರ್ದಳ್ಳಿ**
ನಂ. ೨೧೬, ೫ನೇ 'ಎ' ಮುಖ್ಯರಸ್ತೆ, ೧೬ನೇ ಅಡ್ಡರಸ್ತೆ
ಜೆ. ಪಿ. ನಗರ, ೪ನೇ ಫೇಸ್, ಬೆಂಗಳೂರು - ೫೬೦ ೦೭೮

## ಚಿತ್ರಮಾಲೆ

೧

ಚೆಲುವ ಕಣ್ಣು
ಕಾಣೋ ಜಗವು
ಹೇಗಾದೀತು ನಶ್ವರ ?

೨

ಹಾಲನು ಉಂಡ ಮಾರ್ಜಾಲ
ಮಹಡಿಗೆ ಹೋಗಿ
ಮುದುಡಿ ಮಲಗಿ
ಬೆಚ್ಚನೆ ಕನಸನ್ನೇ ಹೊದೆಯಿತು.

ಹಾಲುಗೆನ್ನೆಯ ಪುಟ್ಟಿ,
ಅರಳುಗಣ್ಣನು ಬಿಟ್ಟಿ,
ಪುಟುಪುಟು ಹೆಜ್ಜೆಯನಿಟ್ಟು
ದೌಡಾಯಿಸಿದಳು ಅಮ್ಮನ ಮಡಿಲಿಗೆ.

ಚಿಗರೆಕಂಗಳ ಒಡತಿ,
ಮೌನದಲ್ಲೇ ಮಾತಾಡಬಲ್ಲ
ಷೋಡಶಿ, ವೈಯಾರದಿಂದ
ಓಡಾಡಿ, ಬಿಂಕದಿಂದ ಬಚ್ಚಿಟ್ಟುಕೊಂಡಳು.

'ಅಂಬಾ' ಎನ್ನುತ್ತ, ಗಂಟೆಯ
ಸದ್ದಿಗೆ ನಿಗುರಿಸಿ ಕಿವಿಯ,
ಥೈ ಥೈ ಕುಣಿಯಿತು ಹಟ್ಟಿಯ
ಕರುವು; ಮುದದಿ ಮಾತೆಯೆಡೆ ಹೊರಗೋಡಿತು.



೩

ಚಿಕ್ಕ ಚಿಕ್ಕ ಚಿತ್ರಗಳು
ಮೂಡಿಸಿವೆ ಅಪರಂಜಿ ಬಣ್ಣ,
ಕತ್ತಲ ಮನದಲ್ಲೀಗ ಥಳಥಳಿಸುವ ತೋರಣ.

**ಎಂ. ಕುಸುಮ**
ಸಹಾಯಕ ಪ್ರಾಧ್ಯಾಪಕರು, ಮಹಿಳಾ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಎಂ.ಜಿ. ರಸ್ತೆ, ಹಾಸನ - ೫೭೩ ೨೦೧




## ಆತಂತಾತನ ಹೊಸ್ತಾರಿಂಭ

**(ಕಥಾ ಸಂಕಲನ)**

ವಿಜಯಾ ಶ್ರೀಧರ

**ಪುಟ : ೮೮ ಬೆಲೆ : ರೂ. ೬೦**

**ಶ್ರೀವಿಜಯ ಪ್ರಕಾಶನ,** ೬ನೇ ಅಡ್ಡರಸ್ತೆ, ರಾಜೇಂದ್ರನಗರ, ಶಿವಮೊಗ್ಗ - ೫೭೭ ೨೦೪

ಮಲೆನಾಡಿನ ನೆಲದಲ್ಲಿ ಆಳವಾಗಿ ಬೇರು ಬಿಟ್ಟಿರುವ ವಿಜಯಾ ಅವರು ತನ್ನ ಪರಂಪರೆ ಹಾಗೂ ಈಗಿನ ಪರಿಸರದೊಡನೆ ಏಕಕಾಲದಲ್ಲಿ ಸಂವಾದಿಸುವ ಶಕ್ತಿ ಹೊಂದಿರುವ ಲೇಖಕಿ. ಬೇರೆಯವರ ಮನೆಯ ಮದರಂಗಿ ಗಿಡದ ಸೊಪ್ಪಿಗಿಂತ ಅಜ್ಜನ ಮನೆಯಲ್ಲಿ ಬೆಳೆದ ಮದರಂಗಿ ಕೊಡುವ ಹೆಚ್ಚಿನ ಕೆಂಪು ಬಹು ಆಪ್ತ. ಮದುವೆಯೇ ಬೇಡ ಎನ್ನುತ್ತಿದ್ದ ಶ್ಯಾಮಲೆಗೂ ಕೈ ಕೆಂಪಾಗಬೇಕೆಂಬ ಆಸೆಯಿತ್ತು. ಸಂಸಾರ ಎಷ್ಟು ವರ್ಣಮಯ, ನಿಗೂಢ! ಸನ್ಯಾಸಿ ಶ್ರೇಷ್ಠನೇ. ಆದರೆ ಸಂಸಾರಿಯ ಜೀವನವೇನೂ ಕಮ್ಮಿಯಲ್ಲ. ರಾಮರಾಯರು ತಮ್ಮ ೬೦ನೇ ಶಾಂತಿಯ ನಂತರ ಜವಾಬ್ದಾರಿಯನ್ನು ಮಕ್ಕಳ ಹೆಗಲಿಗೆ ಕೊಟ್ಟು ನಿವೃತ್ತಿ ಪಡೆದರು. ಆದರೆ ತಮ್ಮ ಮಡದಿಗೆ ಎಷ್ಟಾದರೂ ನಿವೃತ್ತಿಯಿಲ್ಲ. ಸ್ತ್ರೀವಾದಿ ಎಂದು ಕರೆಸಿಕೊಳ್ಳದ ಸೀತಮ್ಮನೂ ಸಹ ತನ್ನ ಗಂಡನ ಬಳಿ ತನಗೂ ಒಂದು ರೀತಿಯ ನಿವೃತ್ತಿ ಬೇಕು ಎಂದು ದೃಢವಾಗಿ ಹೇಳುವಾಗ ತನಗರಿವಿಲ್ಲದೆ ಸ್ತ್ರೀಪರ ಧ್ವನಿ ಹೊರಗೆ ಬರುತ್ತದೆ. ಸತ್ತು ಸಂಪಿಗೆಯಾಗು ವಿಜಯಾರವರ ಮುಖ್ಯ ಕತೆಗಳಲ್ಲಿ ಒಂದು. ಮೊಮ್ಮಕ್ಕಳು ಬೆಳೆದಂತೆಯೇ ಹೊಸದಾಗಿ ಉಡುಗೊರೆಯಾಗಿ ಬಂದ ಎರಡು ಸಂಪಿಗೆ ಸಸಿಗಳು ಕುಟುಂಬದ ಸದಸ್ಯರಾಗಿಯೇ ಬೆಳೆದದ್ದು ಹಾಗೂ ಅದು ಪರಿಸರ ಪ್ರೀತಿಯಾಗಿಯೂ ಕತೆ ತುಂಬ ಆವರಿಸಿದೆ. ಮುತ್ತಜ್ಜನ ಶತಮಾನೋತ್ಸವ ಸಂದರ್ಭದಲ್ಲಿ ಎಲ್ಲರೂ ಸಂಭ್ರಮದ ಗಡಿಬಿಡಿಯಲ್ಲಿದ್ದರೆ, ಮುತ್ತಜ್ಜ ಸಂಭ್ರಮದಲ್ಲಿರಲಿಲ್ಲ. ನೆನಪಿನ ಓಣಿಯಲ್ಲಿ ಸಾಗುತ್ತಾ ಆಗಿರುವ ಸ್ಥಿತ್ಯಂತರಗಳ ಸಾರ್ಥಕ ಅವಲೋಕನ ಬಾಳಿನ ಬುತ್ತಿಯಿಂದ ಒಂದೊಂದೇ ಅಗಳನ್ನು ಹೆಕ್ಕುವ ಮಧುರ ಕೆಲಸ ಮಾಡುತ್ತಿದ್ದರು. ಹಳೆಯ ಬೇರುಗಳನ್ನು ಪ್ರೀತಿಸುವುದರ ಸಂಗಡ ಹೊಸ ಚಿಗುರುಗಳನ್ನು ಗೌರವಿಸುವ ಆಪ್ತ ಸಂವೇದನೆಗಳು ಇಲ್ಲಿವೆ.

**– ವಿಲಿಯಂ**

*೧೫/೧೩ ಎರಡನೇ ತಿರುವು, ನೆಹರುನಗರ, ಸಾಗರ - ೧*

## ಮಹಾಕವಿ ಲಕ್ಷ್ಮೀಶನ ವಚನ ಜೈಮಿನಿ ಭಾರತ

ಡಾ|| ಜಿ. ಕೃಷ್ಣಪ್ಪ

**ಪುಟ : xix + ೧೯೩ = ೨೧೨ ಬೆಲೆ : ರೂ. ೧೫೦**

**ಕಾಮಧೇನು ಪುಸ್ತಕ ಭವನ,** ನಂ. ೫/೧, ನಾಗಪ್ಪ ಬೀದಿ, ಶೇಷಾದ್ರಿಪುರ, ಬೆಂಗಳೂರು - ೨೦

ಕನ್ನಡ ಸಾಹಿತ್ಯ ಪರಂಪರೆಯ ದಿಗ್ಗಜರಲ್ಲಿ ಪಂಪ, ರನ್ನ, ಕುಮಾರವ್ಯಾಸರಷ್ಟೇ ಪ್ರತಿಭಾಶಾಲಿ ಕವಿ ಲಕ್ಷ್ಮೀಶ. ಈ ಮೇಲಿನ ಕವಿಪುಂಗವರ ಕಾವ್ಯ ಕೃತಿಗಳನ್ನು ಅನೇಕ ವಿದ್ವಾಂಸರು ಗದ್ಯರೂಪಕ್ಕೆ ತಂದಿದ್ದಾರೆ. ಒಂದೇ ಕೃತಿಗೆ ಹಲವು ರೀತಿಯ ಗದ್ಯರೂಪಗಳು ಬಂದಿರುವುದೂ ಉಂಟು. ಇದು ಲಕ್ಷ್ಮೀಶನ ಜೈಮಿನಿ ಭಾರತಕ್ಕೂ ಅನ್ವಯಿಸುತ್ತದೆ. ಒಂದು ಕಾವ್ಯ ಕೃತಿಯನ್ನು ಕಥನವಾಗಿಸುವ ಕೈಂಕರ್ಯ ಅಷ್ಟು ಸುಲಭದ ಮಾತಲ್ಲ, ಮೂಲ ಕೃತಿಗೆ ಪ್ರಾಮಾಣಿಕತೆ, ಬದ್ಧತೆ, ನಿರಂತರ ಅಧ್ಯಯನಶೀಲತೆ, ಸ್ವಚಿಂತನೆಗಳ, ವಾಚಾಳಿತನಗಳ ನಿಯಂತ್ರಣ ಅನಿವಾರ್ಯ. ಇಂತಹ ಅನುವಾದದ ಸಕಲ ಲಕ್ಷಣಗಳ ಸಾಹಿತ್ಯ ಪ್ರೇಮಿಯನ್ನು ಡಾ|| ಜಿ. ಕೃಷ್ಣಪ್ಪರವರಲ್ಲಿ ಕಾಣಬಹುದು ಎಂದರೆ ಅತಿಶಯೋಕ್ತಿಯೆನಿಸದು. ಕಥಾ ಸಾಂದ್ರತೆಯಲ್ಲಿ ಮುಳುಗದೆ ಅದರ ಎಲ್ಲಾ ಲಯಗಳನ್ನು ಅನುವಾದ ಕೃತಿಯಲ್ಲಿ ಕಟ್ಟಿಕೊಡುವುದು ಒಬ್ಬ ಪ್ರತಿಭಾಶಾಲಿ, ಸಮರ್ಥ ವಿದ್ವಾಂಸನಿಗೆ ಮಾತ್ರ ಸಾಧ್ಯ. ಕಥೆಯ ನಿರೂಪಣೆಯಲ್ಲಾಗಲಿ, ಗದ್ಯಶೈಲಿಯ ಸರಸತೆಯಲ್ಲಾಗಲಿ, ಲವಲವಿಕೆಯಲ್ಲಾಗಲಿ ಕಥೆಯ ಓಟಕ್ಕೆ ಭಂಗ ಬರದಂತೆ ಎಚ್ಚರಿಕೆ ವಹಿಸಲಾಗಿದೆ. ಮೂಲ ಕಥಾವಸ್ತುವಿನ ಶರೀರವು ಎಲ್ಲಿಯೂ ಮುಕ್ಕಾಗದಂತೆ, ಸಾಮಾನ್ಯ ಓದುಗನಿಗೂ ಅದರಲ್ಲಿ ರುಚಿ ಹುಟ್ಟುವಂತೆ, ಮೂಲ ಕೃತಿಯ ಓದು ಹಾಗೂ ಅನುವಾದ ಕೃತಿಯ ಓದಿಗೂ ಸಾಮ್ಯತೆಗಳು ಹೆಚ್ಚಿರುವಂತೆ ಈ ಕೃತಿಯಿದೆ. ಇಲ್ಲಿಯತನಕ ಜೈಮಿನಿ ಭಾರತದ ವ್ಯಾಖ್ಯಾನಗಳು, ತಾತ್ಪರ್ಯಗಳ ಹಿನ್ನೆಲೆಯಲ್ಲಿ ಗ್ರಂಥಗಳು ರಚನೆಯಾಗಿವೆ. ಆದರೆ ಕಾವ್ಯ ಕೃತಿಯ ಕಥಾವಸ್ತುವನ್ನೇ ಮುಖ್ಯವಾಗಿರಿಸಿಕೊಂಡು ಗದ್ಯಶೈಲಿಗೆ ಸಮಗ್ರವಾಗಿ ತಂದುಕೊಟ್ಟಿರುವ ಶ್ರೇಯ ಕೃಷ್ಣಪ್ಪನವರ ಈ ಕೃತಿಗೆ ಸಲ್ಲುತ್ತದೆ. ಸರಳಗನ್ನಡವನ್ನೇ ಮೆಚ್ಚುವ ಇಂದಿನ ಪೀಳಿಗೆಗೆ 'ವಚನ ಜೈಮಿನಿ ಭಾರತ' ಉಪಯುಕ್ತ ಕೃತಿಯೆನಿಸಿದೆ.



## ಶ್ರೀನಿವಾಸ ರಾಮಾನುಜನ್ (ವಿಶ್ವವಿಖ್ಯಾತ ಗಣಿತ ಪ್ರತಿಭೆ)

ಡಾ|| ಎಸ್. ಬಾಲಚಂದ್ರರಾವ್

**ಪುಟ : viii + ೧೨೦ + ೪ ಬೆಲೆ : ರೂ. ೬೦**

**ಭಾರತೀಯ ವಿದ್ಯಾ ಭವನ,** ನಂ. ೪೩/೧, ರೇಸ್‌ಕೋರ್ಸ್ ರಸ್ತೆ, ಬೆಂಗಳೂರು - ೫೬೦ ೦೦೧

ಸಾಹಿತ್ಯಲೋಕದಲ್ಲಿ ಕಥೆ, ಕವನ, ಕಾದಂಬರಿ, ನಾಟಕಗಳಿದ್ದಂತೆ ಜೀವನ ಚರಿತ್ರೆ, ಆತ್ಮಚರಿತ್ರೆಗಳು ಸಹ ಸಾಹಿತ್ಯ ಪ್ರಕಾರಗಳೇ ಆಗಿವೆ. ಕಲಾತ್ಮಕತೆಯಿಲ್ಲದ, ಇತಿಹಾಸದಂತಿರುವ ಆತ್ಮಕಥೆ ಹಾಗೂ ಜೀವನಚರಿತ್ರೆಗಳು ಸಾಹಿತ್ಯ ವಲಯಕ್ಕೆ ಸೇರಿಸುವುದು ಸಮಂಜಸವೇ? ಗಣಿತದ ಮಹಾನ್ ಪ್ರತಿಭೆ, ವಿಶ್ವವಿಖ್ಯಾತ ಗಣಿತ ತಜ್ಞ ಶ್ರೀನಿವಾಸ ರಾಮಾನುಜನ್‌ರ ಜೀವನ ಹಾಗೂ ಸಾಧನೆಯನ್ನು ಕುರಿತಾದ ಡಾ|| ಎಸ್. ಬಾಲಚಂದ್ರರಾವ್ ರಚಿತ ಈ ಕೃತಿ ಇಲ್ಲಿಯ ತನಕ ಅವರ ಸಾಧನೆಯನ್ನು ಮಾತ್ರ ಕೇಳಿ ತಿಳಿದಿದ್ದ ನಮಗೆ ಬೇರೆಯದೇ ಆಯಾಮವನ್ನು ತೆರೆಯುವ ಅಮೂಲ್ಯ ಪುಸ್ತಕ. ರಾಮಾನುಜನ್‌ರ ಬದುಕು-ಬವಣೆಗಳನ್ನು ಕಟ್ಟಿಕೊಡುವ ಈ ಕೃತಿ ಅವರ ಬಾಲ್ಯದ ಕಷ್ಟಗಳು, ಅವುಗಳನ್ನು ಮೀರಿನಿಂತ ಛಲ ಉದ್ಯೋಗದ ಹುಡುಕಾಟ ಮತ್ತು ಅನಿವಾರ್ಯತೆ, ದಾಂಪತ್ಯ, ಸಾಧಿಸಿದ ಸಾಧನೆ ಪ್ರಶಂಸೆಗಳನ್ನು ರಾಮಾನುಜನ್‌ರ ಪತ್ರಗಳು, ಇತರರ ಅಭಿಪ್ರಾಯಗಳು, ಚರ್ಚೆಗಳು, ಪ್ರಶಂಸೆಗಳಿಂದ ಕೂಡಿರುವ ಪತ್ರಗಳು ಹಾಗೂ ಇನ್ನಿತರೆ ದಾಖಲೆಗಳನ್ನು ಸಂಗ್ರಹಿಸಿ ಆ ಮೂಲಕ ಅವರ ಬದುಕನ್ನು ಕಟ್ಟಿಕೊಡುವ ಪ್ರಯತ್ನ ಇಲ್ಲಿ ನಡೆದಿದೆ. ರಾಮಾನುಜನ್‌ರ ಜೀವನ ಚರಿತ್ರೆಯಾದ ಈ ಕೃತಿಯ ರಚನೆಕಾರರಿಗೆ ಇತಿಹಾಸಕಾರನಲ್ಲಿರಬೇಕಾದ ಕಾಲ ಪ್ರಜ್ಞೆ, ಸಾಹಿತಿಯಲ್ಲಿರಬೇಕಾದ ವಿವೇಕ ಅನುವಾದಕನಲ್ಲಿರಬೇಕಾದ ಪ್ರಾಮಾಣಿಕತೆ ಎಲ್ಲವೂ ಇಲ್ಲಿ ಮನದಟ್ಟಾಗುತ್ತದೆ. ಪ್ರತಿಯೊಬ್ಬ ಸಾಧಕ ಹಾಗೂ ಸಾಧಿಸಲು ತವಕಿಸುವ ಯುವಕರಿಗೆ ಕೈಪಿಡಿಯಂತಿದೆ. ಇದು ಎಲ್ಲಾ ಸಾಧಕರಿಗೂ ಅನ್ವಯಿಸುವಂತದ್ದು, ಜ್ಞಾನ, ಪ್ರತಿಭೆ ಯಾರೊಬ್ಬರ ಸ್ವತ್ತೂ ಅಲ್ಲ. ಛಲ, ದಿಟ್ಟ ನಿರ್ಧಾರ, ನಿರಂತರ ಪ್ರಯತ್ನದಿಂದ ಏನನ್ನಾದರೂ ಸಾಧಿಸಬಹುದು ಎಂಬ ಸತ್ಯವನ್ನು ಕೃತಿ ಮನವರಿಕೆ ಮಾಡಿಕೊಡುತ್ತದೆ.

**– ರಮೇಶ ಕೋಲಾರ**

*ಪ್ರಥಮ ದರ್ಜೆ ಸಹಾಯಕರು, ಕರ್ನಾಟಕ ಲೋಕಾಯುಕ್ತ, ಕೋಲಾರ - ೫೬೩ ೧೦೧*

## ಭ್ರಷ್ಟಾಚಾರದ ಸುಳಿಯಲ್ಲಿ ಭಾರತ

ವೈ. ಜಿ. ಮುರಳೀಧರನ್

**ಪುಟ : ೧೬೮ (೧೫೦ + xviii) ಬೆಲೆ : ರೂ. ೧೨೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೫೯, ಬೆಂಗಳೂರು - ೫೬೦ ೦೦೧




ಸ್ವಾರ್ಥಕ್ಕಾಗಿ ಭ್ರಷ್ಟಾಚಾರದ ದಾರಿ ತುಳಿದು ಅದನ್ನು ಈ ಮಟ್ಟಕ್ಕೆ ಬೆಳೆಸಿದವರು ನಾವೇ ಅಲ್ಲವೇ? ಪ್ರಾಮಾಣಿಕವಾಗಿ ಮನಸ್ಸು ಮಾಡಿದರೆ ಚಿಟಿಕೆ ಹೊಡೆಯುವಷ್ಟರಲ್ಲಿ ಇದನ್ನು ನಿರ್ನಾಮ ಮಾಡಬಹುದು. ಸದಾಚಾರದ ನಿಯಮಗಳನ್ನು ಮೀರಿ ನಡೆಯುವುದೇ ಭ್ರಷ್ಟಾಚಾರ. ಈ ಪಿಡುಗು ಇಂದು ಹಠಾತ್ ಕಾಣಿಸಿಕೊಂಡದ್ದಲ್ಲವೆಂದೂ, ಮಾನವನ ಜೊತೆಗೆ ಇದರ ಉಗಮವೂ ಆಗಿದ್ದಿರಬಹುದೆಂದು ನಾವು ಊಹಿಸಬಹುದು. ಇತ್ತೀಚಿನ ಘಟನೆಗೆ ಬಂದರೆ, ಮೊಘಲ್ ಆಡಳಿತದಲ್ಲಿ ಕೆಲಸವನ್ನು ಮೆಚ್ಚಿ ಖುಷಿಯಿಂದ ಬಹುಮಾನವಿತ್ತರೆ ಅದಕ್ಕೆ ಮೆಹರ್‌ಬಾನಿ, ಫರ್‌ಮಾಯಿಷಿ, ದಿಲ್‌ಖುಷ್ ಮುಂತಾಗಿ ಹೆಸರಿತ್ತು. ಬ್ರಿಟಿಷ್ ಆಳ್ವಿಕೆಯಲ್ಲೂ ಅಚ್ಚುಕಟ್ಟಾಗಿ ಕೆಲಸ ಮಾಡಿದವನಿಗೆ ಸ್ವ-ಸಂತೋಷದಿಂದ 'ಭಕ್ಷೀಸ್' ಕೊಡುವುದು ಚಾಲ್ತಿಯಲ್ಲಿತ್ತು. ಇಲ್ಲಿ ಯಾರದೂ ಕೇಳಿಕೆ - ಒತ್ತಾಯ ಇರಲಿಲ್ಲ. ಮುಂದೆ ಇದು ಚಾಳಿಯಾಗಿ ಬೆಳೆದು 'ಭಕ್ಷಿಸಲು' ಕೊಡುವುದು ಸಂಪ್ರದಾಯವಾಗಿ ನಂತರ ಕಡ್ಡಾಯವೇ ಆಗಿ ಸಂಪಾದನೆಯ ಮಾರ್ಗವಾಯ್ತು. 'ಎಳೆಗರುಂ ಎತ್ತಾಗದೇ ಲೋಕದೊಳ್?' ಬಹುಮಾನ ಅರ್ಥ ಕಳೆದುಕೊಂಡು ಭ್ರಷ್ಟಾಚಾರದ ಪುಟ್ಟ ಕರು ಶಕ್ತಿಶಾಲಿಯಾಗಿ ಕೊಬ್ಬಿ, ಕೊಂಬು ಬೆಳೆಸಿ ಗುಟುರು ಹಾಕುತ್ತ ನಮ್ಮನ್ನೇ ಹಾಯುತ್ತಿದೆ. ಇದು ಎಲ್ಲ ದೇಶಗಳಲ್ಲೂ ಹಬ್ಬಿದೆಯಾದರೂ ಅರ್ಜುನನಿಗೆ ವಿಶ್ವರೂಪದರ್ಶನ ಭಾರತದ ನೆಲದಲ್ಲೇ ಆದ ಕಾರಣವೋ ಏನೋ – ಭ್ರಷ್ಟಾಚಾರ ನಮ್ಮ ದೇಶವನ್ನೇ ಆಯ್ದುಕೊಂಡು ಹಾವಳಿ ನಡೆಸಿ ನಮಗೆ ಅದರ ವಿರಾಟ್ ಸ್ವರೂಪ ತೋರಿಸಿದೆ. ನಾವೂ ಬೆರಗಾಗಿ ನೋಡಿ ರೋಸಿಹೋಗಿದ್ದೇವೆ. ಬನ್ನಿ; ಅರ್ಜುನನಂತೆ ಭಯಪಡುವುದನ್ನು ಬಿಟ್ಟು ಧೈರ್ಯದಿಂದ ಇದರ ಮೂಲೋತ್ಪಾಟನೆಗೆ ಹೋರಾಡೋಣ.

## ಸಂ. ಶಿ. ಭೂಸನೂರಮಠ

*ಡಾ|| ಶಾಂತಾ ಇಮ್ರಾಪೂರ*

**ಪುಟ : ೧೨೦** **ಬೆಲೆ : ರೂ. ೬೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೫೯, ಬೆಂಗಳೂರು - ೫೬೦ ೦೦೧

ಸಾಹಿತ್ಯವಲಯದಲ್ಲಿ ವಿಶಿಷ್ಟ ಹೆಜ್ಜೆಗುರುತು ಮೂಡಿಸಿದ ಸಂ. ಶಿ. ಭೂಸನೂರಮಠ ಅವರು ತಮ್ಮ 'ಶೂನ್ಯ ಸಂಪಾದನೆಯ ಪರಾಮರ್ಶೆ' ಎಂಬ ದಾರ್ಶನಿಕ ವ್ಯಾಖ್ಯಾನ ಗ್ರಂಥಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಗಳಿಸಿದವರು. ಇವರು ವೀರಶೈವ ಸಾಹಿತ್ಯ - ವಚನಸಾಹಿತ್ಯದ ಸಾರೋದ್ಧಾರ ಅಧ್ಯಯನ - ಸಂಶೋಧನೆ ಮಾಡಿದ್ದಾರೆ. ಶೈವ ಸಾಹಿತ್ಯದ ಕಣಕಣವನ್ನೂ ತಡವಿ ತಟ್ಟಿ ಪ್ರಾಮಾಣಿಕ ನೆಲೆಯಿಂದ ವಿಶ್ಲೇಷಿಸಿದ್ದಾರೆ. ಮಹಾದೇವಿಯಕ್ಕನ ಜೀವನವನ್ನಾಧರಿಸಿದ, ಮಾನವನೇ ಕೇಂದ್ರಬಿಂದುವಾಗಿದ್ದು ಕಾವ್ಯನಾಯಕನೂ ಆಗಿರುವ 'ಭವ್ಯಮಾನವ' ಎಂಬ ಮಹಾಕಾವ್ಯವನ್ನೇ ರಚಿಸಿ ಭೂತ-ಭವಿಷ್ಯತ್-ವರ್ತಮಾನಗಳನ್ನು ಬೆಸೆದು ಕಾಲಾತೀತ ಪ್ರಜ್ಞೆ ಮೂಡಿಸಿದವರಿವರು. ತಮ್ಮ ಮೂವತ್ತಾರು ವರ್ಷಗಳ ಅಧ್ಯಾಪನ-ವೃತ್ತಿಜೀವನ, ನಂತರದ ಹದಿಮೂರು ವರ್ಷಗಳ ನಿವೃತ್ತಿಜೀವನದ ಬಿಡುವಿನ ಕ್ಷಣಕ್ಷಣಗಳನ್ನೂ ಜಗತ್ತಿನ ಶ್ರೇಷ್ಠ ಸಾಹಿತ್ಯಾಧ್ಯಯನದಲ್ಲಿ ಕಳೆದಿದ್ದಾರೆ. ಉತ್ಕೃಷ್ಟವಾದದ್ದು ಎಲ್ಲ ದಿಕ್ಕುಗಳಿಂದ ಹರಿದುಬರಲಿ ಎಂಬ ಉದಾರತೆ ಇವರದ್ದು. ಹೀಗೆ ಶೈವ ತತ್ತ್ವಾಧ್ಯಯನದಿಂದ ಅಪಾರ ಅನುಭವ ಗಳಿಸಿದ ಇವರು ಯಾವುದೇ ತಡೆಗೋಡೆಗಳಿಲ್ಲದ ಬಯಲ ತತ್ತ್ವವನ್ನು ನಂಬಿದ್ದವರು. ಇವರ ಜೀವನ-ಚಿಂತನ- ಸಾಹಿತ್ಯವನ್ನು ಇಂದಿನ ಪೀಳಿಗೆಗೆ ಆವಶ್ಯವಾಗಿ ಪರಿಚಯಿಸಬೇಕು. ಭೂಸನೂರಮಠರ ಶಿಷ್ಯೆಯಾಗಿದ್ದು, ನಿಕಟವರ್ತಿಯಾಗಿದ್ದು, ಅವರ ಸಾಧನೆಯನ್ನು ಬಲ್ಲ ಡಾ|| ಶಾಂತಾ ಇಮ್ರಾಪೂರ ಈ ಕೃತಿಯ ಮೂಲಕ ಅವರನ್ನು ಪರಿಚಯಿಸಿದ್ದಾರೆ. ನವಕರ್ನಾಟಕ ಸಾಹಿತ್ಯ ಸಂಪದ ಮಾಲೆಯ ಕೃತಿಯಿದು.




## ಖ್ಯಾತ ಶಿಕ್ಷಣ ಮನೋವಿಜ್ಞಾನಿಗಳು




*ಡಾ|| ಮಹಾಬಲೇಶ್ವರ ರಾವ್*

**ಪುಟ : ೧೬೦** **ಬೆಲೆ : ರೂ. ೧೦೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೫೯, ಬೆಂಗಳೂರು - ೫೬೦ ೦೦೧

ಮನುಷ್ಯನ ನಡವಳಿಕೆಗೆ ಆತನ ಸುತ್ತಲ ಪರಿಸರ ಎಷ್ಟು ಪ್ರಭಾವ ಬೀರಬಲ್ಲದು ? ಒಂದೇ ಪರಿಸರದಲ್ಲಿದ್ದರೂ ಒಂದೇ ಕುಟುಂಬದವರಾಗಿದ್ದರೂ ವರ್ತನೆಗಳಲ್ಲಿ ಭಿನ್ನತೆ ಇರುವುದೇಕೆ ? 'ಆತನಿಗೆ ಗಳಿಗೆಗೊಂದು ಬುದ್ಧಿ' ಎಂದು ಆರೋಪಿಸುವುದಕ್ಕೆ 'ಆತ'ನ ಅಪರಾಧವಾದರೂ ಏನು ? ಮನಸ್ಸು - ಬುದ್ಧಿ - ಭಾವನೆಗಳು ಒಂದಕ್ಕೊಂದು ಪೂರಕವೆ ? ಮನಸ್ಸಿಗೆ ಬಂದಂತೆ ವರ್ತಿಸುವುದು ಸರಿಯೆ - ತಪ್ಪೇ ? ಮಾನವಕುಲದ ಈ ಮನೋಲೋಕದ ವ್ಯವಹಾರಗಳನ್ನು ಅರ್ಥೈಸುವುದು ಮತ್ತು ಇದು ಹೀಗೆಯೇ ಎಂದು ಗೆರೆ ಎಳೆದಂತೆ ನಿರ್ಣಯಿಸುವುದು ಯಾರಿಂದಲೂ ಸಾಧ್ಯವಿಲ್ಲ. ಇಂಥ ಮನೋವಿಜ್ಞಾನದ ನಿಗೂಢತೆಯನ್ನು ಬೆಂಬತ್ತಿ ಕಾರಣಗಳನ್ನು ಹುಡುಕಿ ಇದರಲ್ಲಿ ಮೆದುಳಿನ ಪಾತ್ರ ಹಿರಿಯದೆಂದು ಅನೇಕ ಮನೋವಿಜ್ಞಾನಿಗಳು ಗುರುತಿಸಿದ್ದಾರೆ. ಸರಿಯಾದ ವಯಸ್ಸಿನಲ್ಲಿ ಸರಿಯಾದ ಶಿಕ್ಷಣದ ಮೂಲಕ ಮನೋ ವರ್ತನೆಗಳನ್ನು ನಿಯಂತ್ರಿಸಬಹುದೆಂದು ಕಂಡುಕೊಂಡಿದ್ದಾರೆ. ಹೀಗೆ ಶೈಕ್ಷಣಿಕ ಮನೋವಿಜ್ಞಾನವನ್ನು ಪ್ರಚುರಪಡಿಸಿದ ಮನೋವಿಜ್ಞಾನಿಗಳ ಸಾಲೇ ಪ್ರಪಂಚದಾದ್ಯಂತ ಇದೆ. ವಿಜ್ಞಾನ ಕ್ಷೇತ್ರಕ್ಕೆ ಇವರ ಸಂಶೋಧನೆಗಳಿಂದ ಹೊಸ ಬೆಳಕು ಚೆಲ್ಲಿದಂತಾಗಿದೆ. ಈ ಮನೋವಿಜ್ಞಾನಿಗಳನ್ನು ಅವರು ಮಾಡಿದ ಸಾಧನೆಗಳೊಂದಿಗೆ ಅವರು ನಡೆದ ದಾರಿಯನ್ನು ಪರಿಚಯಿಸಲಾಗಿದೆ. ಹ್ಞಾಂ... ಮನೋವ್ಯಾಪಾರದ ಇವರು ಭೇದಿಸಿದ ಸಂಗತಿಗಳು ಈ ಎಲ್ಲ ವಿಜ್ಞಾನಿಗಳ ಒಮ್ಮತದ ನಿರ್ಧಾರವೇನೂ ಅಲ್ಲ! ಇಲ್ಲೂ ವಿಭಿನ್ನತೆಗಳಿವೆ - ಓದಿ ನೋಡಿ.

**– ಇಂದಿರಾಕುಮಾರಿ**

*೩೪/೧೧, ೨ನೇ ಕ್ರಾಸ್, ಬಾಂಬೆ ಡ್ರೈಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೨೨*

---

# ಸಾದರ ಸ್ವೀಕಾರ

**ಚಂದಿರ ಶಾಲೆ** (ಮಕ್ಕಳ ಕವಿತೆಗಳು)
ಡಾ|| ಮುಳುಕುಂಟೆ ರಮೇಶ್
**ಪುಟ : ೮೦** **ಬೆಲೆ : ರೂ. ೪೦**
**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

**ನಾ ಕಂಡ ರಾಮಾಯಣ** ಸದಾಶಿವಯೋಗಿ
**ಪುಟ : ೮೦** **ಬೆಲೆ : ರೂ. ೭೫**
**ಶ್ರೀ ಗುರುಕುಲ ಪ್ರಕಾಶನ,** ಸಿಡ್ಲೇ ಹಳ್ಳಿ ಮಹಾಸಂಸ್ಥಾನ ಶ್ರೀಮಠ, ಶ್ರೀ ವೀರಶೈವ ಗುರುಕುಲಾನಂದಾಶ್ರಮ, ತಿಪಟೂರು - ೫೭೨ ೨೦೨, ತುಮಕೂರು ಜಿಲ್ಲೆ

**ಪ್ರೀತಿ ಇಲ್ಲದ ಮೇಲೆ** (ಕಥಾ ಸಂಕಲನ) ಎಸ್. ಎಸ್. ಮಠಪತಿ
**ಪುಟ : x + ೭೭** **ಬೆಲೆ : ರೂ. ೮೦**

**ಸಾವು ಹಣಿಕಿ ಹಾಕಿದಾಗ** (ಪ್ರಬಂಧ ಸಂಕಲನ)
ಎಸ್. ಎಸ್. ಮಠಪತಿ
**ಪುಟ : xii + ೮೧** **ಬೆಲೆ : ರೂ. ೧೦೦**
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಸಂತೋಷ್ ಪ್ರಕಾಶಕರು, ನೂತನ ವಿದ್ಯಾಸಂಸ್ಥೆ (ರಿ),** ಎಲ್.ಐ.ಸಿ. ಕಾಲೋನಿ, ದಾವಣಗೆರೆ - ೫೭೭ ೦೦೪

**ಕನ್ನಡ ಕಾವ್ಯಾಧ್ಯಯನ** ಡಾ|| ಎಂ. ಅಕಬರ ಅಲಿ
**ಪುಟ : ೧೬೦** **ಬೆಲೆ : ರೂ. ೧೦೦**

**ರಂಜಿತಾ ಚುಟುಕುಗಳು**
ಸಂ. : ಡಾ|| ಅನಸೂಯ ಕೆಂಪನಹಳ್ಳಿ
**ಪುಟ : ೫೨** **ಬೆಲೆ : ರೂ. ४೦**
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ವೈದ್ಯ ವಾರ್ತಾ ಪ್ರಕಾಶನ,** ವಿದ್ಯಾರಣ್ಯಪುರಂ, ಮೈಸೂರು - ೫೭೦ ೦೦೮

**ಎಲ್ಲರೂ ಮನುಷ್ಯರೇ** (ಸಾಮಾಜಿಕ ಕಾದಂಬರಿ)
ಎಸ್. ಆರ್. ಗುರುನಾಥ್
**ಪುಟ : ೧೪೪ + iv** **ಬೆಲೆ : ರೂ. ೧೦೦**

**ಚಂದಿರ** (ಲಘು ಪ್ರಬಂಧಗಳು) ಬಿ. ಪಿ. ಶಿವಾನಂದರಾವ್
**ಪುಟ : ೧೯೨ + iv** **ಬೆಲೆ : ರೂ. ೧೫೦**
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಸಾಹಿತ್ಯ ಸುಗ್ಗಿ,** ನಂ. ४೦, ೧ನೇ ಮುಖ್ಯರಸ್ತೆ, ೨ನೇ ಹಂತ, ೩ನೇ ಬ್ಲಾಕ್, ನಾಗರಭಾವಿ, ಬೆಂಗಳೂರು - ೫೬೦ ೦೭೨

**ಬಾಪು ಪಾಪು** (ಮಕ್ಕಳ ಕವನಗಳು) ಅಕ್ಬರ್ ಸಿ. ಕಾಲಿಮಿರ್ಚಿ
**ಪುಟ : x + ೫೪ = ೬೪** **ಬೆಲೆ : ರೂ. ೫೦**
**ಕನ್ನಡ ಮೈತ್ರಿ ಪ್ರಕಾಶನ,** ೭೩೧/೩, ನಂ. ೯, ಮಂಜುನಾಥ ಬಡಾವಣೆ, ಭಾಗ್ಯನಗರ ತಾಲೂಕು, ಜಿಲ್ಲೆ ಕೊಪ್ಪಳ

**ಚಿಂತೆ – ಚಿಂತನೆ** (ಲೇಖನ ಸಂಗ್ರಹ)
ಡಾ|| ಸಾರಾ ಅಬೂಬಕ್ಕರ್
**ಪುಟ : ೧೯೫ + vi** **ಬೆಲೆ : ರೂ. ೧೪೫**
**ಚಂದ್ರಗಿರಿ ಪ್ರಕಾಶನ,** ೨/೨೧/೧೬೩೧-೨, ಮೈಕ್ರೋವೇವ್ ಸ್ಟೇಷನ್ ರಸ್ತೆ, ಮಂಗಳೂರು - ೫೭೫ ೦೦೬

**ಕನ್ನಡ ಜಾನಪದ ಅಧ್ಯಯನದ ತಾತ್ವಿಕ ನೆಲೆಗಳು**
ಡಾ|| ಅರುಣ್ ಜೋಳದ ಕೂಡ್ಲಿಗಿ
**ಪುಟ : xviii + iv + ೩೧೮ = ೩४೦** **ಬೆಲೆ : ರೂ. ೨೨೦**
**ರೂಪ ಪ್ರಕಾಶನ,** ನಂ. ೨೪೦೬, ೨೪೦೭/ಕೆ-೧, ಮೊದಲನೇ ಅಡ್ಡರಸ್ತೆ, ಹೊಸ ಬಂಡಿಕೇರಿ, ಮೈಸೂರು - ೫೭೦ ೦೦४

**ಸುಸ್ಥಿರ ಕೃಷಿಗೆ ಹತ್ತಾರು ಹಾದಿ** ಡಾ|| ಗಣೇಶ ಎಂ. ನೀಲೇಸರ
**ಪುಟ : iv + ೩೨** **ಬೆಲೆ : ರೂ. ೩೦**
**ಕೃಷಿ ಮಾಧ್ಯಮ ಕೇಂದ್ರ,** ೩೨೭, ೧ನೇ ಮಹಡಿ, ರಾಯಚೂರು ಪ್ಲಾಟ್ಸ್, ನಾರಾಯಣಪುರ, ಧಾರವಾಡ - ೫೮೦ ೦೦೮

**ಕಠಾರಿ ಕಥೆಗಳು** ಚಂದ್ರಪ್ರಭ ಕಠಾರಿ
**ಪುಟ : xii + ೧೫೦** **ಬೆಲೆ : ರೂ. ೧೨೦**
**ಕಿಕ್ಕೇರಿ ಪಬ್ಲಿಕೇಷನ್ಸ್,** ನಂ. ೭೦೩, ೧೪ನೇ ಅಡ್ಡರಸ್ತೆ, ಚಂದ್ರಾ ಬಡಾವಣೆ, ವಿಜಯನಗರ, ಬೆಂಗಳೂರು - ೫೬೦ ೦೭೨




## ಅಮೆರಿಕ : ರಹಸ್ಯ ಕಾರ್ಯಾಚರಣೆಗಳಿಗೆ ಹೆಚ್ಚು ಪ್ರಾಶಸ್ತ್ಯ



*ಡ್ರೋನ್ ದಾಳಿಗೆ ಒಳಗಾದ ನತದೃಷ್ಟರು*

ಅಮೆರಿಕದ ಅಧ್ಯಕ್ಷ ಒಬಾಮಾ ಅಧಿಕೃತವಾಗಿ ಎರಡನೆಯ ಬಾರಿ ಅಧಿಕಾರ ವಹಿಸಿಕೊಂಡು ತಮ್ಮ ಸಂಪುಟದ ತಂಡವನ್ನು ರೂಪಿಸಿಕೊಂಡಿದ್ದಾರೆ. ಮೊದಲ ಸಲ ಅವರು ಅಧಿಕಾರಕ್ಕೆ ಬಂದಾಗ ಇದ್ದ ನಿರೀಕ್ಷೆಗಳು ಹಲವು. ಅವು ಹುಸಿಯಾಗುವುದಕ್ಕೆ ಹೆಚ್ಚು ದಿನ ಬೇಕಾಗಲಿಲ್ಲ. ಆಂತರಿಕ ನೀತಿಯಲ್ಲಾಗಲೀ ವಿದೇಶಾಂಗ ನೀತಿಯಲ್ಲಾಗಲೀ ಯಾವ ಬದಲಾವಣೆಯೂ ಇರದು ಎಂಬುದು ಅವರ ಸಂಪುಟದ ರಚನೆಯಿಂದ ಸ್ಪಷ್ಟವಾಗಿದೆ. ರಕ್ಷಣಾ ಕಾರ್ಯದರ್ಶಿ ಚಾರ್ಲ್ಸ್ ಹೆಗೆಲ್ ಮತ್ತು ವಿದೇಶಾಂಗ ಕಾರ್ಯದರ್ಶಿ ಜಾನ್ ಕೆರ್ರಿ ವಿಯೆಟ್ನಾಂ ಯುದ್ಧದಲ್ಲಿ ಭಾಗವಹಿಸಿದ್ದವರು ಮತ್ತು ನಲವತ್ತು ವರ್ಷಗಳ ಹಿಂದೆ ಅವರು ಯುದ್ಧ ವಿರೋಧಿ ಚಳವಳಿಯಲ್ಲಿ ಮುಂದಳದಲ್ಲಿದ್ದರು. ಆದರೆ ೨೦೦೩ರಲ್ಲಿ ಜಾರ್ಜ್ ಬುಷ್ ಇರಾಕಿನ ಮೇಲೆ ನಡೆಸಿದ ದಾಳಿಗೆ ಬೆಂಬಲ ನೀಡಿದ್ದರು. ಈಗ ಇಬ್ಬರೂ ತಮ್ಮ ಯುದ್ಧ ವಿರೋಧಿ ಧೋರಣೆಯಿಂದ ದೂರ ಸರಿದಿದ್ದಾರೆ. ನೇರವಾದ ಹಸ್ತಕ್ಷೇಪ, ಸೇನಾಪಡೆಗಳ ತೊಡಗಿಕೊಳ್ಳುವಿಕೆಗೆ ಬದಲಾಗಿ ಪರೋಕ್ಷ ಯುದ್ಧದ ಪರವಾಗಿದ್ದಾರೆ ಇವರುಗಳು. ಹತ್ತಾರು ಸಾವಿರ ಸೇನೆಯನ್ನು ರವಾನಿಸಿ ಆಕ್ರಮಣ ನಡೆಸುವುದಕ್ಕೆ ಪ್ರತಿಯಾಗಿ ವಿರೋಧಿ ರಾಷ್ಟ್ರಗಳ ಮೇಲೆ ಆರ್ಥಿಕ ದಿಗ್ಬಂಧನ ಹೇರುವುದು, ವಿಧ್ವಂಸಕ ಕೃತ್ಯಗಳನ್ನು ನಡೆಸುವುದು ಲೇಸು ಎನ್ನುವುದು ಜಾನ್ ಕೆರ್ರಿ ಅಭಿಮತ. ಹೆಚ್ಚುಕಡಿಮೆ ಚಾರ್ಲ್ಸ್ ಹೆಗೆಲ್ ಕೂಡ ಇದೇ ಅಭಿಪ್ರಾಯ ಹೊಂದಿದ್ದಾರೆ. ''ಪಾಕಿಸ್ತಾನ ಮತ್ತು ಯೆಮೆನ್‌ಗಳಲ್ಲಿ ಅಮೆರಿಕ ತೀವ್ರವಾದ ವಿರೋಧವನ್ನು ಎದುರಿಸುತ್ತಿದೆ. ಈ ದೇಶಗಳಿಗೆ ಅಮೆರಿಕದ ಸೈನಿಕರನ್ನು ರವಾನಿಸುವುದು ಸೂಕ್ತವಲ್ಲ. ಬೇರೆ ವಿಧಾನಗಳನ್ನು ರೂಪಿಸಬೇಕು'' ಎನ್ನುತ್ತಾರೆ ರಕ್ಷಣಾ ಕಾರ್ಯದರ್ಶಿ.

ಈ ಬಗೆಯಲ್ಲಿ ಒಬಾಮಾ ತಂಡದವರು ಅಮೆರಿಕ ಎದುರಿಸುತ್ತಿರುವ ಆರ್ಥಿಕ ಮುಗ್ಗಟ್ಟಿನ ಸಮಯದಲ್ಲಿ ವಿಪರೀತ ಖರ್ಚಿನ ಬಾಬತ್ತಾಗಿರುವ ಮಿಲಿಟರಿ ಕಾರ್ಯಾಚರಣೆಗೆ ಪ್ರತಿಯಾಗಿ ವಿಧ್ವಂಸ ಚರ್ಯೆಗಳಿಗೆ, ಡ್ರೋನ್‌ಗಳಂಥ ಸ್ವತಶ್ಚಲಿ ಅಸ್ತ್ರಗಳ ಬಳಕೆಗೆ ಹೆಚ್ಚು ಒತ್ತು ನೀಡಲು ಮುಂದಾಗಿದ್ದಾರೆ. ಇದಕ್ಕೆ ಪೂರಕವಾಗಿಯೇ ಅಮೆರಿಕದ ಎಲ್ಲ ವಿಧ್ವಂಸಕ ಚರ್ಯೆಗಳಿಗೆ, ಹಿಂಸಾಚಾರಕ್ಕೆ, ಕಗ್ಗೊಲೆಗಳಿಗೆ ಮೂಲಾಧಾರವಾಗಿರುವ ಸಿಐಎಯ ನಿರ್ದೇಶಕರಾಗಿ ಒಬಾಮಾ ಜಾನ್ ಬ್ರೆನ್ನಾನ್ ಹೆಸರನ್ನು ಸೂಚಿಸಿದ್ದಾರೆ. ಡ್ರೋನ್‌ಗಳ ಬಳಕೆಯ ಉಗ್ರ ಪ್ರತಿಪಾದಕ ಈತ. ನಾಲ್ಕು ವರ್ಷಗಳ ಹಿಂದೆಯೇ ಈತ ಸಿಐಎ ಡೈರೆಕ್ಟರಾಗಿ ನೇಮಕಗೊಳ್ಳಬೇಕಾಗಿತ್ತು. ಆದರೆ ವಿಚಾರಣೆಯ ಕಾಲದಲ್ಲಿ ತೀವ್ರವಾದ ಹಿಂಸಾಚಾರಗಳಿಗೆ ಹೆಸರಾಗಿರುವ ಈತನ ನೇಮಕಕ್ಕೆ ಅಮೆರಿಕದ ಸೆನೆಟ್ ಸದಸ್ಯರು ಬೆಂಬಲ ನೀಡಲಿಲ್ಲ. ಒಬಾಮಾ ಆಡಳಿತೆಯ ರಹಸ್ಯ ಕಾರ್ಯಾಚರಣೆಗಳ ವಿಚಾರ ವಾಷಿಂಗ್ಟನ್‌ನಲ್ಲಿ ಈಗ ತೀವ್ರವಾದ ವಿವಾದಗಳಿಗೆ ಕಾರಣವಾಗಿದೆ. ಭಯೋತ್ಪಾದನೆಯ ವಿರುದ್ಧ ಸಮರ ಅಮೆರಿಕದ ಪರೋಕ್ಷ ದಾಳಿಗಳಿಗೆ ರಹದಾರಿಯಾಗಿದೆ. ಅಲ್‌ಖೈದಾ ಸದಸ್ಯರು ಅಥವಾ ಅವರ ಸಂಪರ್ಕದಲ್ಲಿರುವವರು ಎಂದು ಹೆಸರಿಸಿ ಯಾರನ್ನಾದರೂ ಹತ್ಯೆಗೈಯ್ಯಲು ಪರವಾನಗಿ ದೊರೆತಂತಾಗಿದೆ. 'ಆತ್ಮರಕ್ಷಣೆಗಾಗಿ ನ್ಯಾಯಯುತವಾಗಿ ಹತ್ಯೆಗೈಯ್ಯುವುದು ಕೊಲೆಯಲ್ಲ' ಎನ್ನುವುದು ಅಮೆರಿಕದ ಆಡಳಿತಗಾರರ ವಾದ. ಇದು ಅಮೆರಿಕದ ವಿರೋಧಿಗಳೆಂದು ಶಂಕಿತರನ್ನು ಕುರಿತು ಹೇಳಿರುವ ಮಾತು. ಉಗ್ರರನ್ನು ಹತ್ಯೆಗೈಯ್ಯುವ ಉದ್ದೇಶದಿಂದ ಏನು ಮಾಡಿದರೂ ಸರಿ ಎನ್ನುವುದೇ ಅಮೆರಿಕದ ವಾದ. ಪಾಕಿಸ್ತಾನದ ಸರಹದ್ದಿನಲ್ಲಿ ಪ್ರವೇಶಿಸಿ ದಾಳಿ ನಡೆಸಿ ಉಗ್ರವಾದಿ ಒಸಾಮಾ ಬಿನ್ ಲಾಡೆನ್ ಹತ್ಯೆಗೈದದ್ದು ಇದಕ್ಕೆ ಉದಾಹರಣೆ. ಈಗ ಒಬಾಮಾ ಆಡಳಿತ ಡ್ರೋನ್‌ಗಳ ನಿಯೋಜನೆಯನ್ನು ಅದೇ ಧಾಟಿಯಲ್ಲಿ ಸಮರ್ಥಿಸಿಕೊಳ್ಳುತ್ತಿದೆ.

ಡ್ರೋನ್‌ಗಳು ಪೂರ್ವ ನಿರ್ಧಾರಿತ ಗುರಿಗಳ ಮೇಲೆ ದಾಳಿ ಗೈಯ್ಯುವ ಸ್ವಯಂಚಾಲಿತ ಕ್ಷಿಪಣಿಗಳು. ಇದರಿಂದ ದಾಳಿಗೀಡಾಗುವ ಪ್ರದೇಶದ ಜನಸಾಮಾನ್ಯರಿಗೆ ಆಗುವ ಹಾನಿ ಮಾತ್ರ ಅಪಾರವಾದ್ದು. ಅಲ್‌ಖೈದಾ ಅಡಗುದಾಣಗಳೆಂದು ಪಾಕ್-ಆಫ್ಘನ್ ಗಡಿಯಲ್ಲಿ ಈ ಡ್ರೋನ್ ಉಪಟಳ ವಿಪರೀತ, ಸಾವಿರಾರು ಮಂದಿ ಅಮಾಯಕ ಜನರು ಇದರಿಂದ ಸಾವಿಗೀಡಾಗಿದ್ದಾರೆ. ಗುರಿತಪ್ಪಿದ ಡ್ರೋನ್‌ಗಳು ಶಾಲಾ ಕಟ್ಟಡಗಳು, ಆಸ್ಪತ್ರೆಗಳ ಮೇಲೆ ಬಿದ್ದು ಅಪಾರ ಹಾನಿಯಾಗಿವೆ. ಪಾಕಿಸ್ತಾನದ ವಿದೇಶಾಂಗ ಇಲಾಖೆಯ ಕಾರ್ಯದರ್ಶಿ ಅಬ್ಬಾಸ್ ಜಿಲಾನಿ ಡ್ರೋನ್ ದಾಳಿಯಿಂದ ೩೦೦೦ ಮಂದಿ ಹತರಾಗಿದ್ದಾರೆ ಎಂದು ಒಪ್ಪಿಕೊಂಡಿದ್ದಾರೆ. ಅವರ ಪ್ರಕಾರ ಇವರಲ್ಲಿ ಶೇ. ೮೦ರಷ್ಟು ಮಂದಿ ಉಗ್ರರು. ಈ ಸಂಖ್ಯೆಯನ್ನು ಪಾಕಿಸ್ತಾನದ ಪತ್ರಿಕೆಗಳೇ ಒಪ್ಪುವುದಿಲ್ಲ, ಸಂಖ್ಯೆ ಇನ್ನೂ ಹೆಚ್ಚು ಎಂದು ಅಂದಾಜು. ಅಮೆರಿಕ, ಸೌದಿ ಅರೇಬಿಯ ಸೈನಿಕ ನೆಲೆಯಿಂದ ಯೆಮೆನ್ ಮೇಲೆ ಮೇ ೨೦೧೧ರಿಂದ ನಡೆಸಿರುವ ಡ್ರೋನ್ ದಾಳಿಯಲ್ಲಿ ೧೧೧೪ ಮಂದಿ ಹತರಾಗಿದ್ದಾರೆ. ಇದೇ ರೀತಿ ಪಶ್ಚಿಮ ಏಷಿಯಾದ ಸೈನಿಕ ನೆಲೆಗಳಿಂದ ಉಗ್ರರನ್ನು ಹತ್ತಿಕ್ಕುವ ಹೆಸರಿನಲ್ಲಿ ಸೊಮಾಲಿಯ, ಉಗಾಂಡ, ದಕ್ಷಿಣ ಸುಡಾನ್, ಕಾತಾರ್ ಮೊದಲಾದ ದೇಶಗಳ ಮೇಲೂ ಡ್ರೋನ್ ದಾಳಿ ನಡೆಸಲಾಗುತ್ತಿದೆ. ಅಫ್ಘಾನಿಸ್ತಾನದಲ್ಲಿಯಂತೂ ತಾಲಿಬಾನ್ ತಾಣಗಳ ಮೇಲೆ ನಿರಂತರವಾಗಿ ನಡೆಯುತ್ತಿರುವ ಡ್ರೋನ್ ದಾಳಿಯಲ್ಲಿ ಸಂಭವಿಸುತ್ತಿರುವ ಅನಾಹುತ ಅಂದಾಜು ಮಾಡುವುದು ಕಷ್ಟ. ಅಂತೂ ಮುಂಬರುವ ದಿನಗಳಲ್ಲಿ ತನ್ನ ವಿದೇಶೀ ನೀತಿಯ ಉದ್ದೇಶಿತ ಗುರಿಗಳ ಸಾಧನೆಗೆ ಅಮೆರಿಕ ರಹಸ್ಯ ಕಾರ್ಯಾಚರಣೆಗಳಿಗೆ ಹೆಚ್ಚು ಒತ್ತು ನೀಡುವುದು ಸ್ಪಷ್ಟವಾಗಿದೆ.

**ಸೀಯಾರ್ಕೆ**

## ದಕ್ಷಿಣ ಅಮೆರಿಕ ದೇಶಗಳ ನಾಯಕರ ಅಪೂರ್ವ ಸಂಗಮ

ಮೂರನೇ ಬಾರಿಗೆ ಅತ್ಯಧಿಕ ಬಹುಮತದಿಂದ ವೆನೆಜುವೇಲಾದ ಅಧ್ಯಕ್ಷ ಸ್ಥಾನಕ್ಕೆ ಆಯ್ಕೆಯಾಗಿರುವ ಹ್ಯೂಗೋ ಚಾವೆಜ್ ಪುನಶ್ಚೇತನಗೊಂಡಿರುವ ಲ್ಯಾಟಿನ್ ಅಮೆರಿಕದ ಚೈತನ್ಯವಾಗಿದ್ದಾರೆ. ಅಮೆರಿಕದ ಹಿತ್ತಲು, ಬಾಳೆಹಣ್ಣಿನಂತೆ ಮೃದುವಾದ ಗಣರಾಜ್ಯಗಳೂ ಎಂದು ಹೆಸರಾಗಿದ್ದ ದಕ್ಷಿಣ ಅಮೆರಿಕದ ದೇಶಗಳನ್ನು ಜಾಗೃತಗೊಳಿಸಿ, ಬಹುರಾಷ್ಟ್ರೀಯ ಕಂಪೆನಿಗಳ ಅಟ್ಟಹಾಸವನ್ನು ಕೊನೆಗೊಳಿಸಿ, ಆರ್ಥಿಕ ಸಹಕಾರ, ಸಹಬಾಳ್ವೆಯ ಆಧಾರದ ಮೇಲೆ ಅಮೆರಿಕಾಗೆ ಸವಾಲಾಗಿ ನಿಲ್ಲುವಂತೆ ಮಾಡಿರುವ ಕೀರ್ತಿ ಚಾವೆಜ್‌ಗೆ ಸಲ್ಲುತ್ತದೆ. ವೆನೆಜುವೇಲಾದ ಬಲಪಂಥೀಯ ಪಕ್ಷಗಳು ನೆರೆಯ ಅಮೆರಿಕದ ಬೆಂಬಲದಿಂದ ಒಡ್ಡಿದ ವಿರೋಧವನ್ನು ಎದುರಿಸಿ ಹೊಸ ಸಮಾಜವನ್ನು ನಿರ್ಮಿಸುವುದರಲ್ಲಿ ತೊಡಗಿರುವ ಚಾವೆಜ್ ಚುನಾವಣೆಯ ನಂತರದಲ್ಲಿ ಕ್ಯಾನ್ಸರ್ ರೋಗಕ್ಕೀಡಾಗಿ ಕ್ಯೂಬಾದಲ್ಲಿ ಚಿಕಿತ್ಸೆ ಪಡೆಯುತ್ತಿದ್ದಾರೆ. ಅವರು ಶೀಘ್ರವಾಗಿ ಗುಣಮುಖರಾಗಿ ನಾಯಕತ್ವವಹಿಸಿಕೊಳ್ಳಲಿ ಎಂದು ಆಶಿಸೋಣ.

ಪುನರಾಯ್ಕೆಯಾಗಿರುವ ಚಾವೆಜ್ ಜನವರಿ ೧೦ರಂದು ಅಧಿಕಾರವಹಿಸಿಕೊಂಡು ಪ್ರಮಾಣವಚನ ಸ್ವೀಕರಿಸಬೇಕಾಗಿತ್ತು. ಆದರೆ ಅನಾರೋಗ್ಯದಿಂದಾಗಿ ಅದನ್ನು ಮುಂದೂಡಬೇಕಾಯಿತು ಅನಿವಾರ್ಯವಾಗಿ. ಅವರ ಅನುಪಸ್ಥಿತಿಯನ್ನೇ ದೊಡ್ಡದು



**ಚಾವೆಜ್**

ಮಾಡಿ ವೆನೆಜುವೇಲಾದ ಬಲಪಂಥೀಯ ಪಕ್ಷಗಳು ರಾಜಕೀಯ ಬಿಕ್ಕಟ್ಟು ಉಂಟುಮಾಡಲು ನೋಡಿದುವು. ಸಂವಿಧಾನಬದ್ಧವಾಗಿ ಅಧಿಕಾರ ವಹಿಸಿಕೊಳ್ಳುವ ದಿನವನ್ನು ಮುಂದೂಡಲಾಗದು ಎಂದು ತಕರಾರು ತೆಗೆದುವು. ಅಮೆರಿಕಾದ ವಿದೇಶಾಂಗ ಸಚಿವಾಲಯ ವೆನಿಜುವೇಲಾದ ಸರಕಾರ ಚಾವೆಜ್ ಆರೋಗ್ಯದ ವಿಚಾರದಲ್ಲಿ ನಿಜ ಹೇಳುತ್ತಿಲ್ಲ ಎಂದು ಆಪಾದಿಸಿತು. ವೆನೆಜುವೇಲಾದ ಶಾಸಕಾಂಗ ಪ್ರಮಾಣವಚನ ಸ್ವೀಕಾರವನ್ನು ಮುಂದೂಡುವ ತೀರ್ಮಾನವನ್ನು ಕೈಗೊಂಡಿದ್ದರೂ ಅದು ಸಂವಿಧಾನಬದ್ಧವಲ್ಲ ಎನ್ನುವುದು ಪ್ರತಿಪಕ್ಷಗಳ ವಾದ. ವಿವಾದ ದೇಶದ ಸರ್ವೋಚ್ಚ ನ್ಯಾಯಾಲಯದ ಮೆಟ್ಟಿಲೇರಿತು. ಮಹತ್ವದ ತೀರ್ಪು ನೀಡಿರುವ ವೆನೆಜುವೇಲಾದ ಸರ್ವೋಚ್ಚ ನ್ಯಾಯಾಲಯ ಕ್ಯೂಬಾದಲ್ಲಿ ಚಿಕಿತ್ಸೆ ಪಡೆಯುತ್ತಿರುವ ಚಾವೆಜ್‌ರ ಅನುಪಸ್ಥಿತಿಯನ್ನು ಅನಧಿಕೃತ ಎಂದು ಪರಿಗಣಿಸುವುದು ಮೂರ್ಖತನ. ಚಾವೆಜ್‌ರ ಪ್ರಮಾಣವಚನ ಸ್ವೀಕಾರವನ್ನು ಮುಂದೂಡಲು ಯಾವ ಅಡ್ಡಿಯೂ ಇಲ್ಲ. ರಾಷ್ಟ್ರದ ಶಾಸಕಾಂಗ ಕೈಗೊಂಡಿರುವ ತೀರ್ಮಾನ ಸಂವಿಧಾನಬದ್ಧವಾಗಿದೆ. ಅವರು ಮುಂದೆ ಅನುಕೂಲವಾದ ಸರ್ವೋಚ್ಚ ನ್ಯಾಯಾಲಯದ ಸಮ್ಮುಖದಲ್ಲಿ ಪ್ರಮಾಣವಚನ ಸ್ವೀಕರಿಸಬಹುದು ಎಂದು ಹೇಳಿದೆ. ಇದು ಏಳು ನ್ಯಾಯಾಧೀಶರ ಒಮ್ಮತದ ತೀರ್ಪು. ಚಾವೆಜ್ ಚಿಕಿತ್ಸೆಗಾಗಿ ಕ್ಯೂಬಾಗೆ ತೆರಳುವ ಮುನ್ನ ಉಪಾಧ್ಯಕ್ಷ ನಿಕೊಲಾಸ್ ಮಡುರೋ ಅವರನ್ನು ತಮ್ಮ ಉತ್ತರಾಧಿಕಾರಿಯಾಗಿ ನೇಮಕ ಮಾಡಿದ್ದರು. ಇದರಿಂದಾಗಿ ದೇಶದ ಆಡಳಿತ ಸುಗಮವಾಗಿ ನಡೆಯಲು ಯಾವುದೇ ಅಡ್ಡಿ ಇರಲಿಲ್ಲ.

ಜನವರಿ ೧೦ರಂದು ಸಾಂಕೇತಿಕವಾಗಿ ವೆನೆಜುವೇಲಾದ ರಾಜಧಾನಿಯಲ್ಲಿ ನಡೆದ ಸಮಾರಂಭ ಈ ಹಿನ್ನೆಲೆಯಲ್ಲಿ ಒಂದು ಅಪೂರ್ವವಾದ ಶಕ್ತಿಪ್ರದರ್ಶನವಾಗಿತ್ತು. 'ಚಾವಿಸ್ಟಾ'ಗಳು ಎಂದು ಕರೆದುಕೊಳ್ಳುವ ಒಂದು ಲಕ್ಷಮಂದಿ ಚಾವೆಜ್ ಬೆಂಬಲಿಗರು ಭಾಗವಹಿಸಿದ್ದ ಸಭೆಯಲ್ಲಿ ಲ್ಯಾಟಿನ್ ಅಮೆರಿಕ ಮತ್ತು ಕೆರಿಬಿಯನ್‌ನ ಇಪ್ಪತ್ತೇಳು ದೇಶಗಳ ಪ್ರತಿನಿಧಿಗಳು ಉಪಸ್ಥಿತರಿದ್ದುದು ವಿಶೇಷ. ವೆನಿಜುವೇಲ ಮತ್ತು ಅಧ್ಯಕ್ಷ ಚಾವೆಜ್‌ಗೆ ಬೆಂಬಲ ನೀಡಲು ಆಗಮಿಸಿದ್ದ ಬೊಲಿವಿಯ, ನಿಕರಾಗುವ, ಉರುಗ್ವೆ ಮೊದಲಾದ ದೇಶಗಳ ನಾಯಕರು ಸಭೆಯಲ್ಲಿ ಮಾತನಾಡಿ ಚಾವೆಜ್ ಬೇಗನೆ ನಮ್ಮೊಂದಿಗೆ ಕೂಡುವಂತಾಗಲಿ ಎಂದು ಹಾರೈಸಿದರು. ಇಂಥದೇ ಐಕ್ಯತೆಯನ್ನು ಕಳೆದ ವರ್ಷ 'ವಿಕಿಲೀಕ್ಸ್' ಪ್ರಕರಣದ ಅಸಾಂಜ್‌ಗೆ ಆಶ್ರಯ ನೀಡಿದ್ದ ಪೆರುಗ್ವೆ ರಾಷ್ಟ್ರಕ್ಕೆ ಸಂಬಂಧಿಸಿದಂತೆ ಪ್ರದರ್ಶಿಸಿದ್ದನ್ನು ಸ್ಮರಿಸಬಹುದು. ಅಮೆರಿಕದ ದೇಶಗಳ ಸಂಘಟನೆಯ ಸಭೆಯಲ್ಲಿ ಅಮೆರಿಕ ಮತ್ತು ಕೆನಡಾಗಳು ಏಕಾಂಗಿಯಾದವು. ಇದೇ ಬಗೆಯ ಸೌಹಾರ್ದತೆ ಈಗ ವೆನೆಜುವೇಲಾದ ವಿಷಯದಲ್ಲಿ ವ್ಯಕ್ತಗೊಂಡಿರುವುದು ಸ್ವಾಗತಾರ್ಹ.

**ಸೀಯಾರ್ಕೆ**

'ಚೌಬೀನ', ನಂ. ೮೪೪, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್
ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫



# ಮಣ್ಣ ನೆನಪಿನಾಳ

ಮಳೆ ಬಿಸಿಲು ಲೆಕ್ಕಿಸದೆ
ವಲಸೆ ಹೊರಟವರು
ಒಂದೊತ್ತಿನ ಅನ್ನಕ್ಕೆ ಹಾಹಾಕಾರವಾಗೆ,
ಹೊತ್ತು ಗೊತ್ತಿಲ್ಲದೆ ಅವೇಳೆಯಲೂ
ದಣಿಯುವವರು –
ಕೋಟಿ ಕೋಟಿ ಅಂತಸ್ತುಗಳ
ಅಡಿಪಾಯಗಳ ಭದ್ರಪಡಿಸಿ
ಅಡಿಗಡಿಗೂ ನಲುಗುವವರೆ
ನೆರಳಿಲ್ಲದೆ ಬೆಚ್ಚನೆ ಸೂರಿಲ್ಲದೆ
ನಿಸ್ಸೂರಾಗೆ ಆಸೆ ಬಿತ್ತಿಕೊಂಡು
ತನ್ನವರ ಹಳಿ ತಪ್ಪಿದ ದೀನ ಬದುಕಿಗೆ
ಹೊಸ ಹಾದಿ ಹುಡುಕುತ್ತಲೆ
ಮಣ್ಣನೆನಪಿನಾಳ ಗಮಲಿನೊಳು –
ಮಮಕಾರ ಮುರುಟಿಕೊಂಡು ಕನಲುವವರು;
ಆಪ್ತ ಬಳಗ ಕಳಕೊಂಡು ಕಲ್ಲೆದೆಯಾಗೆ
''ಕಾಯಕ ಧರ್ಮಕ್ಕೆ ಕರ್ಮ ಎನ್ನದೇ''
ಎದೆಗುದಿಯ ಉರಿಯೊಳಗೆ
ನಿರ್ಬಂಧಗಳ ಗಡಿದಾಟಿ
ದಾಪುಗಾಲು ಹಾಕಬಯಸಿರುವವರು
ವ್ಯವಸ್ಥೆಯ ಈ ಅವಸ್ಥೆಗಳಿಗೆ
ವ್ಯಸನಿಯಾಗದೇ
ಮಣ್ಣ ನೆನಪಿನಾಳಕ್ಕೆ ಹಲುಬುವವರು
ವಲಸೆ ಹೊರಟವರು

**ರಜಿಯಾ ಡಿ. ಬಿ.**

W/o : ಡಾ|| ಡಿ. ಬಿ. ಫಕ್ರುದ್ದೀನ್
ಪ್ರೊ|| ಎಲೆಕ್ಟ್ರಿಕಲ್ ಇಂಜಿನಿಯರಿಂಗ್ ವಿಭಾಗ, ಎಸ್.ಐ.ಟಿ. ಕಾಲೇಜು
ತುಮಕೂರು - ೫೭೨ ೧೦೩

ಡಿ. ಎಮ್. ನದಾಫ್

**ಮನೋವಿಜ್ಞಾನಿಗಳು, ಮಾನಸಿಕ ಕಾಯಿಲೆಗಳ ತಜ್ಞರು ಮತ್ತು ವಿಜ್ಞಾನ ಚಳುವಳಿಗಳ ಕಾರ್ಯಕರ್ತರು 'ಭಾನಾಮತಿ'ಯನ್ನೇ ಸಂಪೂರ್ಣವಾಗಿ ನಿರಾಕರಿಸುತ್ತಾರೆ. ಇದೊಂದು ಮಾನಸಿಕ ಅಪಸಮಾಯೋಜನೆಯೆಂದೂ ಅದರಿಂದ ಹೊರಬರಲು ಪೀಡಿತ ವ್ಯಕ್ತಿಯ ಮಾನಸಿಕ ದೃಢತೆ ಮತ್ತು ಕುಟುಂಬದವರ ಸಹಕಾರ ಮುಖ್ಯವೆಂದೂ ಈ ತಜ್ಞರ ಅಭಿಮತ. ಭಾನಾಮತಿಗೊಳಗಾಗುವವರ ಭಾವುಕ, ದುರ್ಬಲ 'ಮನಸ್ಸು' ಇಂಥ ಅವಘಡಗಳನ್ನು ಅವರಿಗೆ ಅರಿವಾಗದಂತೆ ತಮ್ಮಿಂದ ತಾವೇ ಹಿಂಸಿಸಿಕೊಳ್ಳಲು ಪ್ರೇರೇಪಿಸುತ್ತದೆ.**

ಕರ್ನಾಟಕದ ಬೀದರ, ಗುಲಬರ್ಗಾ, ಯಾದಗಿರಿ, ರಾಯಚೂರು, ಕೊಪ್ಪಳ ಸೇರಿದಂತೆ ಬಿಜಾಪೂರ, ಬಾಗಲಕೋಟೆ ಜಿಲ್ಲೆಯ ಕೆಲವು ಭಾಗಗಳಲ್ಲಿ 'ಭಾನಾಮತಿ' ಹೆಸರಿನಲ್ಲಿ ಮುಗ್ಧ ಜನರನ್ನು, ಅದರಲ್ಲೂ ಬಡವರು, ಅನಕ್ಷರಸ್ಥರು, ಮಹಿಳೆಯರು, ಯುವಕ-ಯುವತಿಯರು ಮಾನಸಿಕ ಹಿಂಸೆಗೆ ಒಳಪಡುತ್ತಿರುವುದು ಹಲವಾರು ದಿನಗಳಿಂದ ನಡೆದುಬರುತ್ತಿದೆ. ಇದರ ನಿವಾರಣೆಗಾಗಿ ಅನೇಕ ಬಾರಿ ವಿವಿಧ ರೀತಿಯ ಜನಜಾಗೃತಿ ಕಾರ್ಯಕ್ರಮಗಳು, ಅರಿವು ಕಾರ್ಯಾಗಾರಗಳು, ಪೀಡಿತರನ್ನು ಪರೀಕ್ಷೆಗೊಳಪಡಿಸಿ ಪರಿಹಾರ ಒದಗಿಸುವ ಪ್ರಯತ್ನಗಳು ನಿರಂತರವಾಗಿ ನಡೆಯುತ್ತಿವೆ. ದಶಕಗಳ ಹಿಂದೆಯೇ ಬೆಂಗಳೂರು ವಿಶ್ವವಿದ್ಯಾಲಯದ ಹಿಂದಿನ ಉಪಕುಲಪತಿಗಳಾಗಿದ್ದ ಎಚ್. ನರಸಿಂಹಯ್ಯನವರ ಅಧ್ಯಕ್ಷತೆಯಲ್ಲಿ ಈ ಅಮಾನುಷ ಪ್ರಕರಣಗಳ ತನಿಖೆಗಾಗಿ ಸಮಿತಿಯನ್ನು ರಚಿಸಿ ಸರಕಾರವು ವರದಿಯನ್ನು ಪಡೆದಿತ್ತು. ನಂತರ ಈ 'ಭಾನಾಮತಿ' ನಿರ್ಮೂಲನೆಗಾಗಿ ಮನೋವಿಜ್ಞಾನಿಗಳು ಅನೇಕ ವಿಚಾರ ಸಂಕಿರಣಗಳನ್ನು, ಜಾಗೃತಿ ಜಾಥಾಗಳನ್ನು, ಅನೇಕ ಸಮೀಕ್ಷೆ, ಸಂಶೋಧನೆಗಳನ್ನು ನಡೆಸಿದ್ದಾರೆ. ಕರ್ನಾಟಕ ರಾಜ್ಯ ವಿಜ್ಞಾನ-ತಂತ್ರಜ್ಞಾನ ಇಲಾಖೆ, ಭಾರತ ಜ್ಞಾನ-ವಿಜ್ಞಾನ ಸಮಿತಿ, ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು ಮತ್ತು ಗುಲಬರ್ಗಾದ ಹಲವು ಪ್ರಮುಖ ಶಿಕ್ಷಣ ಸಂಸ್ಥೆಗಳು ಈ ಭಾಗದಲ್ಲಿ ಪ್ರತಿ ಗ್ರಾಮ ಪಂಚಾಯ್ತಿ ಮಟ್ಟಕ್ಕೂ ವಿಜ್ಞಾನ ಜಾಥಾಗಳನ್ನು ನಡೆಸಿ ಜನರಲ್ಲಿ ಭಾನಾಮತಿ ಕುರಿತು ಇರುವ ಮೌಢ್ಯವನ್ನು ತೊಡೆದುಹಾಕುವ ವೈವಿಧ್ಯಮಯ ಪ್ರಯತ್ನಗಳನ್ನು ನಡೆಸಿವೆ.

ಭಾರತ ಜ್ಞಾನ-ವಿಜ್ಞಾನ ಸಮಿತಿಯ ಗುಲಬರ್ಗಾ ಘಟಕವು ಭಾನಾಮತಿ ಪ್ರಕರಣಗಳು ನಡೆದ ಪ್ರತಿ ಗ್ರಾಮಕ್ಕೂ ಗುಲಬರ್ಗಾ ವಿ.ವಿ.ಯ ಮನೋವಿಜ್ಞಾನ ವಿಭಾಗದ ಪ್ರೊಫೆಸರ್‌ಗಳ ತಂಡದೊಂದಿಗೆ ಭೇಟಿಕೊಟ್ಟು ಅಲ್ಲಿ ನಡೆಯುವ ಪ್ರತಿಯೊಂದು ದುರ್ವರ್ತನೆ ಕುರಿತು ಪರಿಶೀಲನೆ ನಡೆಸಿದೆ. ಮೈಮೇಲೆ ಕ್ಯಾರಿನೆಣ್ಣೆಯ ಗಾಯಗಳು, ಮನೆಯ ಮೇಲೆ ಕಲ್ಲು ಬೀಳುವುದು, ಭಗ್ಗನೆ ಬೆಂಕಿ ಹೊತ್ತಿಕೊಂಡು ವಸ್ತುಗಳು ಸುಟ್ಟುಹೋಗುವುದು, ಫೋಟೋಗಳಿಂದ ಬೂದಿ ಉದುರುವುದು ಮುಂತಾದ ಪವಾಡಗಳು ಬರೀ ಕೈಚಳಕದಿಂದ ನಡೆಯುತ್ತವೆ ಎಂಬುದನ್ನು ಗ್ರಾಮದವರೆಲ್ಲರ ಎದುರಿಗೇ 'ಪವಾಡ ರಹಸ್ಯ ಬಯಲು' ಕಾರ್ಯಕ್ರಮಗಳನ್ನು ಕೊಟ್ಟು ಜನರು ಮೌಢ್ಯವನ್ನು ತೊರೆಯುವಂತೆ ಮಾಡಲು ಅನೇಕ ಪ್ರಯತ್ನಗಳನ್ನು ನಡೆಸಿದೆ.

ಆದರೆ ಇವು ಯಾವವೂ ಪೀಡಿತರ ಮೇಲೆ ಪೂರ್ಣ ಪ್ರಮಾಣದಲ್ಲಿ ಪರಿಣಾಮ ಬೀರುತ್ತಿಲ್ಲ. ಹೀಗಾಗಿ ಮತ್ತೆ 'ಭಾನಾಮತಿ ನಡೆದಿದೆ' ಎಂಬ ಹುಸಿ ಪ್ರಕರಣಗಳು ವರದಿಯಾಗುತ್ತಲೇ ಇವೆ. ಇತ್ತೀಚಿನ ಹೊಸ ಬೆಳವಣಿಗೆಯೆಂದರೆ ಇಂಥ ಪ್ರಕರಣಗಳಿಗೆ ದೃಶ್ಯ ಮಾಧ್ಯಮಗಳಲ್ಲಿ ಹೆಚ್ಚು ಪ್ರಚಾರ ಸಿಗುತ್ತಿರುವುದು. ಇದರಿಂದಾಗಿ ಭಾನಾಮತಿ ಪ್ರಕರಣದ ಪೀಡಿತರಿಗೂ ಅವುಗಳ ಬಗ್ಗೆ ಮೂಢ ನಂಬಿಕೆಯಿಟ್ಟುಕೊಂಡವರಿಗೂ ಈ ಪ್ರಚಾರದಿಂದ ಹುಸಿ ವಿಶ್ವಾಸ ಮೂಡುತ್ತಿರುವುದು.

ಮನೋವಿಜ್ಞಾನಿಗಳು, ಮಾನಸಿಕ ಕಾಯಿಲೆಗಳ ತಜ್ಞರು ಮತ್ತು ವಿಜ್ಞಾನ ಚಳುವಳಿಗಳ ಕಾರ್ಯಕರ್ತರು 'ಭಾನಾಮತಿ'ಯನ್ನೇ ಸಂಪೂರ್ಣವಾಗಿ ನಿರಾಕರಿಸುತ್ತಾರೆ.



# ಭಾನಾಮತಿ ಮಾನಸಿಕ ಕಾಯಿಲೆಯೇ? ಒಂದು ಜಿಜ್ಞಾಸೆ

ಇದೊಂದು ಮಾನಸಿಕ ಅಪಸಮಾಯೋಜನೆಯೆಂದೂ ಅದರಿಂದ ಹೊರಬರಲು ಪೀಡಿತ ವ್ಯಕ್ತಿಯ ಮಾನಸಿಕ ದೃಢತೆ ಮತ್ತು ಕುಟುಂಬದವರ ಸಹಕಾರ ಮುಖ್ಯವೆಂದೂ ಈ ತಜ್ಞರ ಅಭಿಮತ. ಭಾನಾಮತಿಗೊಳಗಾಗುವವರ ಭಾವುಕ, ದುರ್ಬಲ 'ಮನಸ್ಸು' ಇಂಥ ಅವಘಡಗಳನ್ನು ಅವರಿಗೆ ಅರಿವಾಗದಂತೆ ತಮ್ಮಿಂದ ತಾವೇ ಹಿಂಸಿಸಿಕೊಳ್ಳಲು ಪ್ರೇರೇಪಿಸುತ್ತದೆ. ಈ ವಾದಕ್ಕೆ ಪುಷ್ಟಿಕೊಡುವಂತೆ ಹಲವಾರು ಪ್ರಕರಣಗಳಲ್ಲಿ ಅನೇಕ ಪೀಡಿತ ವ್ಯಕ್ತಿಗಳು ಇಂಥ ತೊಂದರೆಗಳಿಂದ ಹೊರಬಂದು ಎಲ್ಲರಂತೆ ಹೊಸ ಬದುಕನ್ನು ನಡೆಸುತ್ತಿದ್ದಾರೆ. ಇಂಥ ಫಲಪ್ರದ ಪ್ರಕರಣಗಳಿಗೆ ಪ್ರಚಾರ ಸಿಗುತ್ತಿಲ್ಲ. ಹೀಗಾಗಿ ಹಲವು ದಿನಗಳು ಕಳೆಯುತ್ತಲೇ ಮತ್ತೊಂದು ಭಾನಾಮತಿ ಪ್ರಕರಣ ಹುಟ್ಟಿ ದೊಡ್ಡದಾಗಿ ಪ್ರಚಾರ ಪಡೆಯುತ್ತದೆ. ಇಂಥ ಸಂದರ್ಭದಲ್ಲಿ ಆ ಗ್ರಾಮದ, ಆ ಪ್ರದೇಶದ ಜನಸಮೂಹವೇ ಮಾನಸಿಕ ಅನುಮೋದನೀಯತೆಗೆ ಒಳಗಾಗುತ್ತದೆ. ಪೀಡಿತ ವ್ಯಕ್ತಿಯ ಅಭಿಪ್ರಾಯವನ್ನೇ ಆ ಜನಸಮೂಹ ಬೆಂಬಲಿಸುತ್ತ ಹೋಗುತ್ತದೆ. ಬಹುತೇಕರು ಹೀಗೆ ಮಾಡುತ್ತಿರುವುದರಿಂದ ಪೀಡಿತ ವ್ಯಕ್ತಿ ತನಗೆ ಸಿಗುತ್ತಿರುವ ಪರೋಕ್ಷ ಮಾನಸಿಕ ಬೆಂಬಲದ ಲಾಭವನ್ನು ಪಡೆಯುತ್ತಾ ಪರಿಸ್ಥಿತಿಯನ್ನು ಇನ್ನಷ್ಟು ಬಿಗಿಗೊಳಿಸುತ್ತಾ ಹೋಗುತ್ತಾನೆ/ಳೆ.

ಭಾನಾಮತಿ ಪ್ರಕರಣಗಳು ಉತ್ತರ ಕರ್ನಾಟಕದ ಕೆಲವು ಪ್ರದೇಶಗಳಲ್ಲಿ ಮಾತ್ರ ಹೆಚ್ಚಾಗಿ ಪ್ರಚಲಿತವಾಗಿದ್ದು, ಅದಕ್ಕೆ ಜಾದೂ-ಟೋನಾ, ಕಾಲಾ-ಜಾದೂ, ಚಾಡಿ, ಛೇಡಿ ಎಂದೆಲ್ಲ ಕರೆಯಲಾಗುತ್ತದೆ. ಕೆಲವರು ಅದನ್ನು ಬಂಗಾಲಿ ವಿದ್ಯಾ ಎನ್ನುತ್ತಾರೆ. ಇಂಥ ಸಾಮಾಜಿಕ ಸ್ವರೂಪವನ್ನು ಪಡೆದಿರುವ ಈ ಚಟುವಟಿಕೆಯನ್ನು ಕಾರ್ಯಗತಗೊಳಿಸುವವರು ಅಲ್ಲಲ್ಲಿ ಕಂಡುಬರುತ್ತಾರೆ. ಇವರು ಚಾಡಿ ಮಾಡುವುದನ್ನು ದೇವರು, ಮೃತ ವ್ಯಕ್ತಿ ಇಲ್ಲವೆ ಗುರುವಿನ ಆಶೀರ್ವಾದದಿಂದ ಕಲಿತದ್ದು ಎಂದೂ ಮತ್ತೆ ಕೆಲವರು ತನ್ನ ಸ್ವಯಂ ತಪಸ್ಸಿನಿಂದ ಕಷ್ಟಪಟ್ಟು ಕರಗತ ಮಾಡಿಕೊಂಡ ವಿದ್ಯೆಯೆಂದೂ ಜನರನ್ನು ನಂಬಿಸಿರುತ್ತಾರೆ. ಸ್ವಮನಸ್ಸಿನಿಂದ ಬಹಿರಂಗವಾಗಿ ಏನನ್ನೂ ಹೇಳದ, ಇವರು ಗ್ರಾಮದಾದ್ಯಂತ ಒಂದು ಸೂಕ್ಷ್ಮ ಸಮೀಕ್ಷೆಯನ್ನು ಮಾಡಿಕೊಂಡಿರುತ್ತಾರೆ. ಅವರ ಆ ಸಮೀಕ್ಷೆಯಂತೆ ದುರ್ಬಲ ಮನಸ್ಸಿನ, ಮಾನಸಿಕ ಅಪಸಮಾಯೋಜನೆಗೊಂಡಿರುವವರನ್ನು ಹುಡುಕಿರುತ್ತಾರೆ. ಅಂಥವರ ಮೇಲೆಯೇ 'ಭಾನಾಮತಿ' ಪ್ರಕರಣಗಳು ನಡೆಯುತ್ತಿರುತ್ತವೆ.

'ದೇಹಕ್ಕೆ ಕಾಯಿಲೆಗಳು ಬರುವಂತೆ ಮನಸ್ಸಿಗೂ ಕಾಯಿಲೆಗಳು ಬರುತ್ತವೆ' ಎನ್ನುವ ಸಾಮಾನ್ಯ ತರ್ಕ ಗ್ರಾಮೀಣ ಜನರಲ್ಲಿ ಇರುವುದು ತುಂಬ ಅವಶ್ಯ. ದೈಹಿಕ ಕಾಯಿಲೆಗಳ ಉಪಚಾರಕ್ಕಾಗಿ ಇಂದಿಗೂ ಅನೇಕ ಮೌಢ್ಯ ಆಚರಣೆಗಳಲ್ಲಿ ತೊಡಗಿರುವ ಈ ಮುಗ್ಧ ಜನರಿಗೆ ಮಾನಸಿಕ ಕಾಯಿಲೆಗಳ ಅರಿವು ಅಷ್ಟಕ್ಕಷ್ಟೆ. ವ್ಯಕ್ತಿಯೊಬ್ಬನು ಯೋಚನೆ ಮಾಡುವಾಗ ಇರುವ 'ಭಂಗಿ'ಯನ್ನು ಒಂದು ದೈಹಿಕ ಕ್ರಿಯೆಯಾಗಿಸಿ ಮತ್ತೆ-ಮತ್ತೆ ಅದೇ ರೀತಿಯ ಭಂಗಿಯನ್ನು ಪುನರಾವರ್ತಿಸುವುದು; ಉದ್ವೇಗಗೊಂಡಾಗ, ಆತಂಕಿತನಾದಾಗ, ಏನೂ ಹೊಳೆಯದಿದ್ದಾಗ ಮತ್ತೆ ಪುನರಾವರ್ತಿಸುವುದು ಮಾನವ ಸಹಜ ಸ್ವಭಾವ. ಆದರೆ ಅದನ್ನೇ ಅಕಾರಣವಾಗಿ ಮುಂದುವರಿಸುವುದನ್ನು 'ಚಟ' ಅಥವಾ 'ಗೀಳು' ಮನೋಬೇನೆ ಎಂದು ತಜ್ಞರು ಗುರುತಿಸುತ್ತಾರೆ. ಹೀಗೆ ಖಿನ್ನತೆ, ಉದ್ವಿಗ್ನತೆ, ಪ್ರತಿಭೀತಿ, ಹಿಸ್ಟೀರಿಯಾ ಮುಂತಾದವುಗಳು ಮಾನಸಿಕ ಲಘು ಕಾಯಿಲೆಗಳು. ಇವುಗಳೊಂದಿಗೆ ಹಲವಾರು ಭಾನಾಮತಿ ಪ್ರಕರಣಗಳನ್ನು ಆರೋಪಿಸಬಹುದು. ಆದರೆ ಈ ಅರಿವನ್ನು ಸಾರ್ವಜನಿಕರಲ್ಲಿ ಮೂಡಿಸುವುದೇ ಅತ್ಯಂತ ಮುಖ್ಯ ಸಂಗತಿಯಾಗಿದೆ. ಮಾನಸಿಕ ಕಾಯಿಲೆಯೊಂದಕ್ಕೆ ಲಕ್ಷಣಗಳ ಮೂಲಕ ಈ ಕಾಯಿಲೆ ಯಾವುದೆಂದು ಕಂಡುಕೊಂಡು ಕಾರಣಗಳನ್ನು ಶೋಧಿಸಿ, ಜೈವಿಕ ಭಾವನಾತ್ಮಕ ಕಾರಣಗಳನ್ನು ವಿಶ್ಲೇಷಿಸಿ ರಾಸಾಯನಿಕ ಮದ್ದುಗಳನ್ನು ಕೊಟ್ಟು ವರ್ತನಾ ವಿಧಾನಗಳನ್ನು ಪರಿವರ್ತಿಸಿ ಕಾಯಿಲೆ ಗುಣಪಡಿಸುವ ಮನೋವೈದ್ಯರ ಸಹನೆ, ತಾಳ್ಮೆಯನ್ನು ಮಾನಸಿಕ ರೋಗಿಯಿಂದ ನಿರೀಕ್ಷಿಸಲು ಸಾಧ್ಯವಿಲ್ಲ. ಭಾನಾಮತಿ ಪೀಡಿತರಲ್ಲಿ ಹೆಚ್ಚಿನವರು ಒತ್ತಡದ ಮನೋಬೇನೆಗಳೊಂದಿಗೆ ನರಳುತ್ತಿರುವುದು ಕಂಡುಬರುತ್ತದೆ. ತಮ್ಮ ಮೇಲಿನ ಮಾನಸಿಕ ಒತ್ತಡಗಳನ್ನು ನಿಭಾಯಿಸಲು ರೋಗಿಯು ಕಂಡುಕೊಂಡ ರಕ್ಷಣಾ ತಂತ್ರವೇ ಭಾನಾಮತಿಯೆಂಬ ಸ್ವಹಿಂಸೆಯ ದಾರಿ ಅದನ್ನು ಪೀಡಿತ ವ್ಯಕ್ತಿ ಸ್ವಹಿಂಸೆ ಎಂದು ಒಪ್ಪಿಕೊಳ್ಳುವುದಿಲ್ಲ. ತನ್ನ ಸ್ವಹಿಂಸೆಯ ಕ್ರಿಯೆಯನ್ನು ತಾನೇ ಒಪ್ಪಿಕೊಂಡರೆ ಕುಟುಂಬದಲ್ಲಿ ಈಗ ತನಗಿರುವ ಪ್ರಾಮುಖ್ಯತೆಯೇ ಹೊರಟುಹೋಗುತ್ತದೆ. ಮತ್ತು ಸುತ್ತಲಿನವರ ಸಹಾನುಭೂತಿ ಇಲ್ಲವಾಗುವುದೆಂಬ ತನ್ನ ಮನಸ್ಸಿನ ಒಳತೋಟಿಯನ್ನು ಪೀಡಿತವ್ಯಕ್ತಿ ಬಿಚ್ಚಿಡಲಾರ. ಈ ಎಲ್ಲ ಕಾರಣಗಳಿಂದ ಅಪಾಯಕಾರಿಯಲ್ಲದ ರೀತಿಯಲ್ಲಿ ತಾನೇ ಸ್ವಯಂಹಿಂಸೆಗೊಳಪಡುತ್ತಾ ಜನರ ಗಮನ ಸೆಳೆಯಬಯಸುತ್ತಾನೆ.

ಹಲವಾರು ಭಾನಾಮತಿ ಪ್ರಕರಣಗಳಲ್ಲಿ ಆರೋಪಿತರಿಗೆ ಯಾವುದೇ ಕ್ರಮ ಜರುಗಿಸಲು ಸಾಧ್ಯವಾಗಿಲ್ಲ. ಇದಕ್ಕೆ ಇಂದಿನ ನಿಯಮಾವಳಿಗಳಲ್ಲಿ ಸೂಕ್ತ ಅವಕಾಶಗಳಿಲ್ಲದ ಕಾರಣ ಈ ಪ್ರಕರಣಗಳ ಕಾನೂನಾತ್ಮಕ ವಿಚಾರಣೆ ನಡೆಯುವುದೇ ಇಲ್ಲ. ಭಾನಾಮತಿ ನಿರ್ಮೂಲನ ಕಾನೂನಿಗಾಗಿ ಹಲವಾರು ಸಂಘಟನೆಗಳು ಆಗ್ರಹಿಸುತ್ತಿದ್ದರೂ ನಮ್ಮ ಸರಕಾರಗಳು ಎಚ್ಚೆತ್ತಿಲ್ಲ. ಸರಕಾರ ಮತ್ತು ನಾಡಿನ ಪ್ರಜ್ಞಾವಂತರು ಇತ್ತ ಗಮನ ಹರಿಸುವುದು ಅಗತ್ಯವಾಗಿದೆ.

**ಡಿ. ಎಮ್. ನದಾಫ್**
ಮನೆ ನಂ. ೪-೫-೪೮೯, ರೇವಣಸಿದ್ದೇಶ್ವರ ಕಾಲನಿ
ಅಫಜಲಪುರ - ೫೮೫೩೦೧, ಗುಲಬರ್ಗಾ ಜಿಲ್ಲೆ

## ಸ್ವಗತ



ನಾವೀಗ ಸಂಕೇತಗಳ
ಮಾರುಕಟ್ಟೆಯಲ್ಲಿದ್ದೇವೆ.
ಬಹಿರಂಗದ ತೋರಿಕೆಗಳು
ಅಂತರಂಗದ ಕೋರಿಕೆಗಳು
ತಾಳೆಯಾಗುತ್ತಿಲ್ಲ!
ಪ್ರೀತಿಯ ಕೊಡು-ಕೊಳುವಿಕೆಗೂ
ಈಗ ಲೆಕ್ಕಾಚಾರ
ಘರ್ಷಣೆಗಳ ಸಂಕಲನ
ಸಂಬಂಧಗಳ ವ್ಯವಕಲನ
ನೋವುಗಳ ಗುಣಾಕಾರ
ಭಾವನೆಗಳ ಭಾಗಾಕಾರ
ಅಂತರಾಳದ ಆರ್ತನಾದವೊಂದೇ ಶೇಷ!
ತಪ್ಪುತ್ತಿದೆ ಲೆಕ್ಕ
ಮತ್ತೆ ಮತ್ತೆ
ತಿದ್ದಿ ಹೇಳುವವರೇ
ಎದ್ದು, ಒದ್ದು ಹೋದರೆ
ಒದ್ದೆಯಾದ ಕಣ್ಣುಗಳಿಗೆ
ನಿದ್ದೆಯೂ ಇಲ್ಲ
ಕತ್ತಲೂ ಕಳೆಯುವದಿಲ್ಲ.
ಪ್ರತಿಯೊಂದಕ್ಕೂ ಈಗ,
ಪರೀಕ್ಷೆ
ಮನದಾಳಕ್ಕೂ ಹಚ್ಚಿದ್ದಾರೆ
ಪಾಲಿಗ್ರಾಫ್
'ಮಾತು' ಬದಲಿಸುವವರ
'ಷೇರು' ಏರುತಿದೆ
ಮೌನದವರ
'ಸೂಚ್ಯಂಕ' ಇಳಿಮುಖ

**ಮಂಜುನಾಥ ಡಿ. ಡೊಳ್ಳಿನ**
ಆಕಾಶವಾಣಿ, ಹೊಸಪೇಟೆ

# ಪೈ ಮಾಮಾ

ಬೆಳಗಿನ ಹತ್ತು ಗಂಟೆಯ ಕ್ಲಾಸ್ ಮುಗಿಸಿಕೊಂಡು ಬಂದು, ನನ್ನ ಚೇಂಬರಿನಲ್ಲಿ ಕಾಫಿ ಕುಡಿಯುತ್ತಾ ಕುಂತಿದ್ದೆ. ಪಕ್ಕದ ಫೋನು ಕಿರುಚಿಕೊಂಡಿತು.

''ಹಲೋ...ಯಾರ್ರೀ...?'' ಪ್ರಶ್ನಿಸಿದೆ.

''ನಾನ್ರೀ ಸರ್ ಪ್ರದೀಪ. ಇಲ್ಲೆ ಕ್ಯಾಂಪಸ್‌ನಿಂದ ಮಾತಾಡ್ತೀನಿ'' ನನ್ನ ಸಹೋದ್ಯೋಗಿ ಪ್ರದೀಪನ ಪ್ರತಿಕ್ರಿಯೆ.

''ಏನಾರ ಬ್ರೇಕಿಂಗ್ ನ್ಯೂಸ್ ಹೇಳೋದೈತಾ ?''

''ಹೂನ್ರೀ ಸರ್. ಒಂದ ಬ್ಯಾಡ್ ನ್ಯೂಸ್. ಪೈ ಮಾಮಾ ಹಠಾತ್ತನೆ ಗೊಟಕ್ ಅಂದ!'' ಪ್ರದೀಪ ಬಾಂಬು ಸಿಡಿಸಿದ. ನನ್ನ ಎದೆ ಧಸಕ್ ಎಂದಿತು!

''ಹ್ಹಾ! ನೀ ಏನ ಹೇಳ್ತೀಯಾ ? ತಮಾಷೆ ಮಾಡ್ತಿಲ್ಲ ತಾನೆ ? ನಿಜವಾಗ್ಲು ಪೈ ಮಾಮಾ ಹೋಗಿಬಿಟ್ನಾ...? ಅಲ್ಲಯ್ಯ ಥೇಟ್ ರುಬ್ಬುಗುಂಡಿನಂತಿದ್ದ ಅವ್ನಿಗೆ ಸಾಯಾಕ ಏನ್ ಧಾಡಿಯಾಗಿತ್ತು?'' ಸಾವಿನ ಕಾರಣ ಕೆದಕಿದೆ.

''ಅವ್ನಿಗೆ ತಳಕುಹಾಕ್ಕೊಂಡಿದ್ದ ಸಕ್ಕರೆ ಹಾಗೂ ಹೃದಯ ರೋಗ, ಗಾಂಪನಿಗೆ ಗೊತ್ತೇ ಇರ್‍ಲಿಲ್ಲವಂತೆ. ಅವು ಸರಿಹೊತ್ನಾಗ ಸರ್ರನೆ ಏರಿ, ನಸುಕು ಹರಿಯೊದ್ರೊಳಗನ ಅವ್ನ ನುಂಗಿ ನೀರು ಕುಡ್ದು ಬಿಟ್ಟವಂತೆ. ರಾತ್ರಿ ಉಂಡು ಮಲ್ಕೊಂಡಾವ ಕಣ್ಣು ಬಿಡ್ಲಿಲ್ಲ ನೋಡ್ರಿ. ಹಾಸಿಗ್ಯಾಗ ಹೆಣವಾಗಿ ಬಿದ್ದಿದ್ದ'' ಎತ್ತು ಉಚ್ಚು ಹೊಯ್ದಂತೆ, ಪ್ರದೀಪ ಒಂದೇ ಸಮ ಒದರಿ ಫೋನು ಕುಕ್ಕಿಟ್ಟ. ನನ್ನ ಮನಸ್ಸು ಫ್ಲ್ಯಾಶ್‌ಬ್ಯಾಕಿಗೆ ಹಾರಿತು.

**ಡಾ|| ರುದ್ರಯ್ಯ ವಿ. ಗದಗ**

*          *          *

ಪೈ ಮಾಮಾ ಮೂವತ್ತರ ಪ್ರಾಯದ, ಭೀಮಕಾಯದ ಯುವಕ. ದಿಕ್ಕುದೆಸೆ ಅಂತಾ ಯಾರೂ ಇಲ್ಲದ ಒಬ್ಬಂಟಿ. ಯಾರೊಂದಿಗೂ ಬೆರೆಯದ ಮನೋಧರ್ಮ. ಹಠಮಾರಿ ಸ್ವಭಾವ. ಶೀಘ್ರ ಕೋಪಿಷ್ಟ. ಬಿ.ಇ. ಪದವೀಧರ. ಇಂಜನಿಯರಿಂಗ ಕಾಲೇಜಿನಲ್ಲಿ ಉಪನ್ಯಾಸಕ. ಸಹೋದ್ಯೋಗಿಗಳೆಲ್ಲಾ ಅವನನ್ನು ತಮಾಷೆಗಾರನಂತೆ ಕಾಣುತ್ತಿದ್ದರು. ಒಟ್ಟಿನಲ್ಲಿ ಪೈ ಮಾಮಾ ವಿಕ್ಷಿಪ್ತ ವ್ಯಕ್ತಿ.

ಪೈ ಮಾಮನ ಊಟ-ತಿಂಡಿ ಮಾಡುವ ಪರಿ ಹೇಸಿಗೆ ಬರಿಸುವಂಥಾದ್ದು. ನಯ-ನಾಜೂಕಿನ ಗಂಧ-ಗಾಳಿ ಇರಲಿಲ್ಲ. ಅವನ ಪದ್ಧತಿ ತುಂಬ ವಿಚಿತ್ರ, ವಿಶೇಷ, ವಿಭಿನ್ನ. ಅನಾಗರಿಕ ಕ್ರಮ. ಜನರು ಅದನ್ನು ಅನುಕರಣೆ ಮಾಡೋದು ಹಾಗಿರಲಿ, ನೋಡಲು ಸೈತ ಅಸಹ್ಯಪಡುತ್ತಿದ್ದರು. ಅಪ್ಪಿ ತಪ್ಪಿ ಊಟದ ದೃಶ್ಯ ನೋಡಿದವರಿಗೆ ವಾಕರಿಕೆ. ಹಾಗೆ ಮುಂದಿನ ಮೂರು ದಿವಸ ಅವರಿಗೆ ಉಪವಾಸ.

ಪೈ ಮಾಮನ ಪ್ರತಿದಿನದ ಬ್ರೇಕ್‌ಫಾಸ್ಟ್ ಕಾಲೇಜಿನ ಕ್ಯಾಂಟೀನಿನಲ್ಲಾದರೆ, ಊಟ ಹಾಸ್ಟೆಲ್ ಮೆಸ್‌ನಲ್ಲಿ. ಬೆಳಗಿನ ಎಂಟು ಗಂಟೆ ಕಾಲೇಜು ಸೈರನ್ ಮೊಳಗುವ ಮೊದಲೇ ಕ್ಯಾಂಟೀನ್‌ನಲ್ಲಿ ಪೈ ಮಾಮಾ ಪ್ರತ್ಯಕ್ಷ!

ಒಂದು ತಟ್ಟೆಯಲ್ಲಿ ಇಡ್ಲಿ, ವಡೆ, ಉಪ್ಪಿಟ್ಟು... ಹಾಕಿಸಿಕೊಂಡು, ಅವುಗಳನ್ನು ಸಾಂಬಾರಿನಲ್ಲಿ ಕಿವಿಚಿ, ಇಡ್ಲಿ ಹಿಟ್ಟಿನ ಹದಕ್ಕೆ ತಂದು ಗುಳುಂ ಮಾಡುತ್ತಿದ್ದ. ಬಳಿಕ ಒಂದು ಪೆಗ್ ಟೀ-ಕಾಫಿ ಕಾಕ್‌ಟೇಲ್ ಇಳಿಸಿ, ಮೇಲೊಂದು ಗೋಲಿಸೋಡಾ ಇಳಿಸಿದರೆ ಅಂದಿನ ಬೆಳಗಿನ ಉಪಹಾರಕ್ಕೆ ತೆರೆ ಬಿದ್ದಂತೆ. ನಂತರ ಒಂದು ಚಾರ್‌ಮಿನಾರ್ ಸಿಗರೇಟು ಹೊತ್ತಿಸಿ, ಉಗಿಬಂಡಿ ತರ ಬುಸ್ ಬುಸ್ ಹೊಗೆಕಾರುತ್ತ ಕಾಲೇಜಿನತ್ತ ದಾಪುಗಾಲು ಹಾಕುತ್ತಿದ್ದ.

ಪೈ ಮಾಮಾ ಕಾಲೇಜ ಮೆಸ್‌ನ ಖಾಯಂ ಗಿರಾಕಿ. ಅವನು ಊಟ ಮಾಡುವ ವಿಧಾನ ನೋಡಲಾಗದು. ವಿದ್ಯಾರ್ಥಿಗಳು ಪೈ ಮಾಮನ ಊಟದ ದೃಶ್ಯ ಕಂಡು ಬೆಚ್ಚಿಬೀಳುತ್ತಿದ್ದರು. ಅವನ ಪಕ್ಕದಲ್ಲಿ ಕುಂತು ಊಟ ಮಾಡೋ ಧೈರ್ಯ ಯಾವ ವಿದ್ಯಾರ್ಥಿಗೂ ಇರಲಿಲ್ಲ.

ಪೈ ಮಾಮಾ ಊಟದ ತಟ್ಟೆಯಲ್ಲಿ ಚಪಾತಿ, ಪೂರಿ, ತರಕಾರಿ ಹಾಕಿಕೊಂಡು, ಎಲ್ಲವನ್ನೂ ಸಾಂಬಾರಿನಲ್ಲಿ ಕಿವಿಚಿಹಾಕಿ, ಸೆಗಣಿರಾಡಿಯ ಹದಕ್ಕೆ ತಂದು, ಕೈಯಿಂದ ಕಬಳಿಸುತ್ತಿದ್ದ.

ಪೈ ಮಾಮನ ವಿಶಿಷ್ಟ ಚಟವೆಂದರೆ... ರೀಮಿಕ್ಸ್ ಸಂಗೀತ ಕೇಳೋದು. ಅವನು ಒಂದಲ್ಲ ಎರಡು ಟ್ರಾನ್ಸಿಸ್ಟರ್ ಮನೆಯಲ್ಲಿ ಮಡಗಿದ್ದ ಎರಡೂ ಏಕಕಾಲದಲ್ಲಿ ಒದರುತ್ತಿದ್ದವು. ಒಂದರಲ್ಲಿ ವಿವಿಧ ಭಾರತಿಯಾದರೆ, ಇನ್ನೊಂದರಲ್ಲಿ ರೇಡಿಯೋ ಸಿಲೋನ್.

ವಿವಿಧಭಾರತಿಯಲ್ಲಿ ಲತಾಮಂಗೇಶ್ಕರಳ ಇಂಪಾದ ಗೀತೆ ತೇಲಿಬಂದರೆ, ರೇಡಿಯೋ ಸಿಲೋನಿನಲ್ಲಿ ಮೊಹಮದ ರಫಿಯ ಸೊಗಸಾದ ಗಾಯನ. ಸಾಯಂಕಾಲ ಆರು ಗಂಟೆಗೆ ಬಾಯಿ ಬಿಟ್ಟ ಟ್ರಾನ್ಸಿಸ್ಟರ್, ಬಾಯಿ ಮುಚ್ಚೋದು ರಾತ್ರಿ ಬಾರಾ ಬಜೆಗೆ.

ಪೈ ಮಾಮನ ಮತ್ತೊಂದು ಗಮನಾರ್ಹ ಚಟವೆಂದರೆ ಸಿಗರೇಟು ಸೇದುವುದು. ಅದರಲ್ಲೂ ತನ್ನದೇ ಆದ ವಿಶೇಷತೆ ಮೆರೆದಿದ್ದ. ಅವನ ವ್ಯಾಸಂಗ ಕೊಠಡಿಯ ಟೇಬಲ್ ಮೇಲೆ ಸಿಗರೇಟು ತುಂಬಿರುವ ಒಂದು ಟಿನ್ ರಾರಾಜಿಸುತ್ತಿತ್ತು. ಅದು ಒಂದೇ ಬ್ರ್ಯಾಂಡಿನ ಸಿಗರೇಟು ಆಗಿರದೆ, ಹನಿಡ್ಯೂ, ಬರ್ಕ್‌ಲಿ, ಬ್ರಿಸ್ಟಾಲ್, ಚಾರ್‌ಮಿನಾರ್, ವಿಲ್ಸ್‌ಗಳ ಮೇಳ. ಸಿಗರೇಟು ಸೇದಬೇಕೆನಿಸಿದಾಗ, ಗಾಂಭೀರ್ಯದಿಂದ ಟಿನ್ ತೆರೆದು, ಕೈಗೆಸಿಕ್ಕ ಬ್ರ್ಯಾಂಡ್ ಹೊರಗೆ ಹಿರಿದು, ಲೈಟರ್‌ನಿಂದ ಸಿಗರೇಟು ಹೊತ್ತಿಸಿ, ಗತ್ತಿನಿಂದ ಗಾಳಿಯಲ್ಲಿ ಸುರುಳಿ ಸುರುಳಿಯಾಗಿ ಹೊಗೆ ಬಿಡುತ್ತಿದ್ದ.

ಸಿಗರೇಟು ಸೇದುವ ಚಟ, ಅವನನ್ನು ಚೇನ್ ಸ್ಮೋಕಿಂಗ್ ಹಂತಕ್ಕೆ ತಂದು ನಿಲ್ಲಿಸಿತ್ತು. ಅವರ ರೂಮು ಸದಾ ಸಿಗರೇಟಿನ ಹೊಗೆಯಿಂದ ಮುಸುಕಿರುತ್ತಿತ್ತು. ಹಾಗೇ ಸಿಗರೇಟಿನ ಘಾಟು ವಾಸನೆ ತುಂಬಿರುತ್ತಿತ್ತು.

ಪೈ ಮಾಮಾ ಶಾಪಿಂಗ್‌ನಲ್ಲೂ ತನ್ನ ಪ್ರತ್ಯೇಕತೆ ಮೆರೆದಿದ್ದ. ಅವನು ಏನೇ ಖರೀದಿಸಲಿ ಒಂದನ್ನೆಂದೂ ಕೊಂಡುಕೊಳ್ಳುತ್ತಿರಲಿಲ್ಲ. ಮನೆಯಲ್ಲಿ ಇನ್ನೂ ಗಂಟು ಬಿಚ್ಚದೆ ಬಿದ್ದಿರುವ, ೧೨ ಸೀರೆ, ೧೨ ಬನಿಯನ್, ೬ ಟಾವೆಲ್, ೪ ಛತ್ರಿಗಳು ಇದಕ್ಕೆ ಸಾಕ್ಷಿ!

ನನ್ನ ಮನದಲ್ಲಿ ಒಂದು ಸಂಶಯ ಸುಳಿದಾಡಿತು. ಇಂಥ ವಿಕ್ಷಿಪ್ತ ಜೋಕರ್, ತುಂಬಿದ ತರಗತಿಯಲ್ಲಿ ಪಾಠಮಾಡುವ ಪರಿ ಎಂತು? ನನಗೆ ಅದನ್ನೊಮ್ಮೆ ಕಣ್ಣಾರೆ ಕಾಣುವ ಕುತೂಹಲ.

ಒಂದು ದಿನ ಗೆಳೆಯರೊಂದಿಗೆ ಕಾಫಿ ಕುಡಿಯಲು,





# ಅಕ್ಷರಗಳಿಗೆ ಜೀವವಿದೆಯೇ ?

ನಿಮಗೆ ನನ್ನ ಗುರುತು ಸಿಕ್ಕಿತೆ
ಕಪ್ಪು ಮುಖ ಮೊಂಡು ಮೂಗಿನವ
ನೀವು ನನ್ನ ಗುರುತಿಸದೇ ಹೋದರೂ
ನನ್ನ ಧ್ವನಿಯನ್ನಂತೂ ಗುರುತಿಸುತ್ತೀರಿ
ಇದು ನಾನಿಟ್ಟುಕೊಂಡ ಅಪರಿಮಿತ ಆತ್ಮವಿಶ್ವಾಸ
ತಪ್ಪಿದ್ದರೆ ದಯವಿಟ್ಟು ಕ್ಷಮಿಸಿ,
ಹೀಗೆ ನಂಬುಗೆಯಿಡುವುದನ್ನೂ ನೀವೇ ಕಲಿಸಿದ್ದು
ನೀನು ಅರಿಸ್ಟಾಟಲ್ ಎಂದಿರಿ
ನೀವು ಪ್ಲೇಟೋ ಎಂಬುದನ್ನು ಬಿಚ್ಚಿಡಲಿಲ್ಲ
'ಗೊತ್ತೇ ಅರಿ' ಎಂಬ ಮಾತು ಗೊತ್ತಾಗಲು
ಎಷ್ಟೋ ದಿನಗಳೇ ಬೇಕಾದವು;
ಕಣ್ಣ ಬೆಳಕಿಗೆ ಕತ್ತಲೆ ಬಂದಿರಬಹುದು
ನಿಮ್ಮೊಳಗು ಮಾತ್ರ ಬೆಳಗೋ ಬೆಳಗು
ವಿದಾಯದ ಗರ್ಭದಲ್ಲೇ ಹುಟ್ಟಿನ ಕ್ಷಣವಿರುವ ಕಾಲ
ಅಕ್ಷರ ಕೊಟ್ಟ ಗುರುವೆಂದು
ನಿಮಗೆ 'ವಿಷ್' ಮಾಡಲು ಬಂದೆ !
ವಿಷ್ ಹೇಳಿದ ಕ್ಷಣವೇ
'ಏನು ಕ್ಯಾಷ್ ಮಾಡಿದೆ ?' ಎಂದರೆ ಮಾತ್ರ ಭಯ
ಈ ಇಳಿವಯಸ್ಸಲ್ಲಿ ಚೆನ್ನಾಗಿದ್ದೀರಾ ಎಂದರೆ
ನೀವು ನಗಬಹುದು ?
ದಷ್ಟಪುಷ್ಟ ದುಂಡಗೆ ಇರುವ ನಾನು
ಛೇಡಿಸಿದಂತೆ ಕಂಡರೂ ಅಚ್ಚರಿಯಿಲ್ಲ
ಹಾಗೆ ಛೇಡಿಸಲಾರಿರಿ !
ನನ್ನಂತ ದಡ್ಡ ಶಿಖಾಮಣಿಗಳ ಮನಕ್ಕೆ ಕಣ್ಣು ಕೊಟ್ಟಿದ್ದೀರಿ
ಅರಿವು ತುಂಬಿದ್ದೀರಿ
ಈಗೊಂದು ಹೊಸ ಪ್ರಶ್ನೆ
ಪ್ರಶ್ನಿಸಿದ ಕ್ಷಣ 'ಏ ದಡ್ಡಾ ಏ ದಡ್ಡಾ'
ಎಂದು ಕರೆದು ಹೇಗೂ ಅಭ್ಯಾಸವಿದೆಯಲ್ಲಾ ಗುರುವೆ
ಈ ದಿನ ಮತ್ತೊಮ್ಮೆ ಕರೆಯಿರಿ
ಹಾಗೆ ಕರೆಯುವವರು ಮತ್ತೆಲ್ಲಿ ಸಿಕ್ಕಾರು ?
ಕಣ್ಣಿಲ್ಲದವರಿಗೆ ದಾರಿ ಸಿಗಲಾರದೇನೋ ?
ಕಣ್ಣಿದ್ದವರಿಗೂ ದಾರಿ ಸಿಗಲಾಗದೆ ?
'ಕಾಮನ ಬಿಲ್ಲು ಕಮಾನು ಕಟ್ಟಿದೆ ಮೋಡದ
ನಾಡಿನ ಬಾಗಿಲಿಗೆ
ಬಣ್ಣಗಳೇಳನು ತೋರಣ ಮಾಡಿ' ಸಾಲುಗಳೇ
ಒಗಟಾಗಿವೆ
ಪಕಳೆ ಕಳಚಿದ ಪತಾಕೆಗಳದ್ದೇ ಸದ್ದು
ಪಕಳೆ ಕಳೆದು ಹೂವಿರಬಹುದೇ ಗುರುವೆ ?
'ಮೈನಸ್' ಬಿಡಿ 'ಪ್ಲಸ್' ಇಡಿ
ಸಮವಿರಲಿ ಸಮವಿರಲಿ ಎಂದು
'ಬ್ಲಾಕ್ ಈಸ್ ಬ್ಯೂಟಿಫುಲ್' ಎಂದು ಛೇಡಿಸಿ
ಫುಲ್ ಬ್ರೈಟ್ ಮಾಡಿದ್ದು ಹೇಗೆ ಮರೆಯಲಿ ಗುರುವೆ ?
ಬಯಲಿಗೆ ಚೌಕಟ್ಟು ಹಾಕಿ
ಬೆಂಕಿಗೆ ಬೀಜ ಬಿತ್ತಿ
ಕಣ್ಣುಗಳಲ್ಲಿ ಅಕ್ಷರ ಬರೆದುಕೊಳ್ಳುತ್ತಿದ್ದಾರೆ
'ಅಕ್ಷರಕ್ಕೆ ಜೀವವಿದೆಯೇ ಗುರುವೇ ?

**ಡಾ|| ಎ. ರಘುರಾಂ**
ಸಹ ಪ್ರಾಧ್ಯಾಪಕರು, 'ಅಂಜನ', ೪೦ ಅಡಿ ರಸ್ತೆ
೧೨ನೇ ಅಡ್ಡರಸ್ತೆ, ಸಪ್ತಗಿರಿ ಬಡಾವಣೆ
ತುಮಕೂರು - ೨

ನಾನು ಕ್ಯಾಂಟೀನ್‌ಗೆ ಹೊರಟಿದ್ದೆ. ಕಾಲೇಜ ಕಾರಿಡಾರಿನಲ್ಲಿ ಹೋಗುತ್ತಿರುವಾಗ, ಅರಸುತ್ತಿರುವ ಬಳ್ಳಿ ಕಾಲಿಗೆ ತೊಡರಿಕೊಂಡಂತೆ, ಪೈ ಮಾಮಾ ವಿದ್ಯಾರ್ಥಿಗಳಿಗೆ ಪಾಠಮಾಡುವ ದೃಶ್ಯ ಕಣ್ಣಿಗೆ ರಾಚಿತು !

ಅದೇನು ಲೆಕ್ಚರ್ ಹಾಲೋ, ಇಲ್ಲಾ ಕುರಿದೊಡ್ಡಿಯೋ ? ಒಂದೂ ಗೊತ್ತಾಗಲಿಲ್ಲ. ಯಾರು ಬೇಕಾದರೂ,ಏನು ಬೇಕಾದರೂ ಮಾಡಲು ಮುಕ್ತಾವಕಾಶ ಅಲ್ಲಿತ್ತು. ಒಟ್ಟಿನಲ್ಲಿ ಅದೊಂದು ಅವ್ಯವಸ್ಥೆಯ ಆಗರ ಅಷ್ಟೇ !

ಹೊರಗಡೆ ಕುಂಭದ್ರೋಣ ಮಳೆ ಸುರಿಯುತ್ತಿದ್ದರೂ, ಲೆಕ್ಚರ್ ಹಾಲ್‌ನಲ್ಲಿ ಒಂಚೂರು ನೀರು ಸೋರುತ್ತಿರಲಿಲ್ಲ. ಆದರೂ ಹೆಚ್ಚಿನ ವಿದ್ಯಾರ್ಥಿಗಳ ಕೈಯಲ್ಲಿ ಬಿಡಿಸಿದ ಬಣ್ಣ ಬಣ್ಣದ ಛತ್ರಿಗಳು.

ವಿದ್ಯಾರ್ಥಿಗಳ ಗೊಂದಲದ ಪರಿಸ್ಥಿತಿಯಲ್ಲಿ ಪೈ ಮಾಮನ ಪಾಠ ನಡೆದಿತ್ತು. ವಿಸ್ಮಯಕಾರಿಕ ಅಂಶವೆಂದರೆ ಪೈ ಮಾಮನ ಬಾಯಿಯಿಂದ ಒಂದೇ ಒಂದು ಶಬ್ದ ಉದುರುತ್ತಿರಲಿಲ್ಲ. ತಾನು ಹೇಳಬೇಕೆಂದಿರುವ ವಿಷಯವನ್ನು ಕರಿಹಲಗೆಯ ಮೇಲೆ ಎಡಬದಿಯಿಂದ ಬರೆಯುತ್ತಿದ್ದ. ಬಲಬದಿಯಲ್ಲಿ ವಿದ್ಯಾರ್ಥಿಯೋರ್ವನು ಏನೇನೋ ಗೀಚುತ್ತಿದ್ದ. ಅದನ್ನು ಓದಿ ವಿದ್ಯಾರ್ಥಿಗಳು ಸೂರು ಹಾರಿಹೋಗುವಂತೆ ಕಿರುಚಿಕೊಳ್ಳುತ್ತಿದ್ದರು.

ಇಡೀ ತರಗತಿ ಹೋ... ಎಂದು, ಪದೇ ಪದೇ ನಗೆಗಡಲಿನಲ್ಲಿ ಮುಳುಗುತ್ತಿತ್ತು. ಲೆಕ್ಚರ್ ಹಾಲ್ ಹೋಗಿ ಸಿನಿಮಾಹಾಲ್ ಆಗಿತ್ತು. ವಿದ್ಯಾರ್ಥಿಗಳಿಗೆ ಪೈ ಮಾಮನ ಕೊಡುಗೆ ಶೂನ್ಯ. ಆದರೂ ಆಡಳಿತ ಮಂಡಳಿ, ಅವನ ಮೇಲೆ ಕಾನೂನು ಕ್ರಮ ಜಾರಿಗೊಳಿಸದೆ ಮಾನವೀಯತೆ ಮೆರೆದಿತ್ತು.

ಪೈ ಮಾಮನ ಊರಿನ ೩-೪ ಮಂದಿ ಸೋಮಾರಿ ಹಿರೀಕರು, ಅವನಿಗೆ ಬದುಕು ಕೊಡಲು ಮುಂದಾದರು. ಕೈತುಂಬ ಸಂಬಳ ಬಾಚಿಕೊಳ್ಳುವ ತಮ್ಮೂರ ಹೈದ, ಉಂಡಾಡಿಗುಂಡನಂತೆ ಅಲೆದಾಡಬೇಕೇ ? ಎಲ್ಲರಂತೆ ಬದುಕು ಕಟ್ಟಿಕೊಳ್ಳಲು ಅವನಿಗೆ ಏನಾಗಿದೆ ಧಾಡಿ ?

ಒಂಟಿ ಬಾಳಿನ ಹಣೆಬರಹವೇ ಇಷ್ಟು. ಗಂಡಿನ ಬಾಳು ಪರಿಪೂರ್ಣವಾಗಬೇಕೆಂದರೆ ಮನೆಯಲ್ಲಿ ಒಂದು ಹೆಣ್ಣು ಇರಲೇಬೇಕು. ಇಲ್ಲಾಂದ್ರ ಗಂಡಿನ ಬಾಳು ನಾಯಿ ಬಾಳು. ಗಂಡನ್ನು ಸರಿದಾರಿಗೆ ಹಚ್ಚೋಳು ಹೆಣ್ಣು. ಪೈ ಮಾಮನ ಬದುಕು ಸರಿಯಾಗಬೇಕೆಂದರೆ, ಅವನಿಗೊಂದು ಹೆಣ್ಣು ಗಂಟುಹಾಕಬೇಕು. ಹಿರಿಯರ ತರ್ಕ.

ಮದುವೆ ಯಾರಿಗೆ ಇಷ್ಟವಿಲ್ಲ? ಯಥೇಚ್ಛವಾಗಿ ಉಪ್ಪು, ಖಾರ, ಹುಳಿ ಕಬಳಿಸಿ ಕೊಬ್ಬಿದ ಗೂಳಿಯಂತಿರುವ ಪೈ ಮಾಮಾ ಮದುವೆಯನ್ನು ನಿರಾಕರಿಸಲು ಹೇಗೆ ಸಾಧ್ಯ ? ಹಿರೀಕರು ಅವನನ್ನು ಮದುವೆ ಬಗ್ಗೆ ಪ್ರಶ್ನಿಸಿದಾಗ, ''ಆದದ್ದಾಗಲಿ ನಾನು ಒಂದು ಕೈ ನೋಡೇಬಿಡ್ತೀನಿ'' ಎಂದು ಸ್ಪಷ್ಟವಾಗಿ ತನ್ನ ಸಮ್ಮತಿ ಸೂಚಿಸಿದ.

ಮದುವೆ ಮಂಡಳಿ ಕಾರ್ಯೋನ್ಮುಖವಾಯಿತು. ಪೈ ಮಾಮನ ಕುಂದುಕೊರತೆಗಳನ್ನು ಪಕ್ಕಕ್ಕೆ ದಬ್ಬಿ, ಆಕರ್ಷಕ ಜೀವನ ಪರಿಚಯ ಪತ್ರ ಸಿದ್ಧಪಡಿಸಿದರು. ಅವುಗಳನ್ನು ಮದುವೆ ದಲ್ಲಾಳಿಗಳಿಗೆ ವಿತರಣೆ ಮಾಡಿ, ಹಣದ ಆಮಿಷ ಒಡ್ಡಿದರು.

ವರ ಮಹಾಶಯನ ಅದ್ಭುತ ಪರಿಚಯ ಪತ್ರ ಓದಿ, ಹೆಣ್ಣು ಹೆತ್ತವರ ಹುಬ್ಬು ಮೇಲೇರಿದವು ! ಅವನ ಕೈ ಹಿಡಿಯುವ ಹುಡುಗಿ ನಿಜವಾಗಲೂ ಅದೃಷ್ಟವಂತೆ ! ಹೆತ್ತವರಿಗೆ ಆದಷ್ಟು ಬೇಗ ತಮ್ಮ ಮಗಳ ಮದುವೆ ಮಾಡಿ ತಲೆಭಾರ ಇಳಿಸಿಕೊಳ್ಳುವಾಸೆ. ಹೀಗಾಗಿ ಅವನಿಗೆ ಹೆಣ್ಣು ಕೊಡಲು ನಾಮುಂದು ತಾಮುಂದು ಅಂತ ಪರಸ್ಪರರಲ್ಲಿ

ಪೈಪೋಟಿ. ಮದುವೆ ಪ್ರಸ್ತಾಪಗಳ ಸುರಿಮಳೆ.

ಕೈಸೇರಿದ ಮದುವೆ ಪ್ರಸ್ತಾಪಗಳನ್ನೆಲ್ಲಾ ಪರಿಶೀಲಿಸಿ, ಕೊನೆಗೆ ಆಯ್ಕೆ ಮಾಡಿದ್ದು ಮೈಸೂರಿನ ಹುಡುಗಿ ಸಹನಾಳನ್ನು. ಅವಳೊಂದಿಗೆ ಸಂಬಂಧ ಕುದುರಿಸಲು ಮದುವೆ ಮಂಡಳಿ ಮುಂದಾಯಿತು.

ಸಹನಾ ಇಪ್ಪತ್ತಾರರ ಪ್ರಾಯದ ಯುವತಿ. ಚೆಲುವಿನ ಖಣಿ. ಬಿ.ಎ.ಎಂ.ಎಸ್. ಪದವೀಧರೆ. ಕರೀನಾ ಕಪೂರಳ ನೀಳಕಾಯ. ದಟ್ಟ ಕಪ್ಪು ಕೂದಲು. ಕೈ ತೊಳೆದು ಮುಟ್ಟುವಂಥ ಮೈ ಬಣ್ಣ. ತಿದ್ದಿ ತೀಡಿಟ್ಟ ಮೂಗು, ಬಾಯಿ. ಮನೆಗೆಲಸದಲ್ಲಿ ಎತ್ತಿದ ಕೈ.

ಗಂಡು-ಹೆಣ್ಣಿನ ಜಾತಕಗಳು ಪ್ರಶಸ್ತವಾಗಿವೆಯೆಂದು ಪುರೋಹಿತರು ಹೇಳಿದರು. ಮದುವೆ ಮಂಡಳಿಗೆ ಭೀಮಬಲ ಬಂದಂತಾಯಿತು. ಪೈ ಮಾಮನ ಕೈ ಹಿಡಿಯಲು ಸಹನಾ ಸಮ್ಮತಿಸಿದ್ದು, ಅವನ ಪೂರ್ವಜನ್ಮದ ಪುಣ್ಯಾ ಫಲ! ಎಲ್ಲಾ ಕೂಡಿಬಂದಾಗ ಓಲಗ ಊದಿಸಲು ಮತ್ಯಾಕ ತಡ?

ಗೋಧೂಳಿ ಮುಹೂರ್ತದಲ್ಲಿ ಪೈ ಮಾಮಾ ಸಹನಾಳೊಂದಿಗೆ ಹಸೆಮಣೆ ಏರಿ, ಶಾಸ್ತ್ರೋಕ್ತವಾಗಿ ಸಪ್ತಪದಿ ತುಳಿದ. ಪೈ ಮಾಮನ ಮದುವೆ, ಕಣ್ಣಿಂದ ಕಸ ತೆಗೆದಷ್ಟು ಸಲೀಸಾಗಿ ನೆರವೇರಿತೆಂದು ಹಿರೀಕರು ಹಿರಿಹಿರಿ ಹಿಗ್ಗಿದರು. ತಾವು ಕೈಗೆತ್ತಿಕೊಂಡ ಕಾರ್ಯ ಸುಸೂತ್ರವಾಗಿ ಮುಕ್ತಾಯವಾಯಿತೆಂದು ಕೈ ತೊಳೆದುಕೊಂಡರು.

ಪೈ ಮಾಮಾ-ಸಹನಾ ನವದಂಪತಿ ಜೋಡಿ ಮೊದಲ ಬಾರಿಗೆ ಎಂಟ್ರಿ ಕೊಟ್ಟಾಗ, ಕ್ಯಾಂಪಸ್ ಜನರ ಹುಬ್ಬುಗಳು ಮೇಲೇರಿದವು! ಜನರ ಮನದಲ್ಲಿ ಪ್ರಶ್ನೆಗಳು ತಲೆ ಎತ್ತಿದವು.

ಪೈ ಮಾಮನ ಮದುವೆಯನ್ನು ಮಾಡಿಸಿದ್ದು ಯಾರು?

ಆ ಗಾಂಪನನ್ನು ವರಿಸಿದ್ದು ಯಾವ ಹುಡುಗಿ?

ಅವರ ಮದುವೆ ನಡೆದದ್ದು ಎಲ್ಲಿ... ಯಾವಾಗ... ಹೇಗೆ...?

ಎಲ್ಲಾ ನಿಗೂಢ!

ಒಂದಂತೂ ನಿಜ. ಪೈ ಮಾಮನ ಮದುವೆ ವಿಷಯ ಕ್ಯಾಂಪಸ್ ನಿವಾಸಿಗಳಿಗೆ ಆಹಾರವಾಯಿತು. ವದಂತಿಗಳು ರೆಕ್ಕೆ ಪುಕ್ಕ ಕಟ್ಟಿಕೊಂಡು ಸ್ವಚ್ಛಂದವಾಗಿ ಹಾರಾಡಿದವು.

ಮೊದಲ ಸಲ ಗಂಡನ ಮನೆ ತುಂಬಲು ಬರುವ ಹೆಣ್ಣಿಗೆ ನೂರೆಂಟು ಕನಸುಗಳು. ಹಾಗೆ ಸಹನಾ ಗಂಡನ ಮನೆಗೆ ಬರುವಾಗ ಕನಸುಗಳ ಮೂಟೆ ಹೊತ್ತು ತಂದಳು. ಅವೆಲ್ಲಾ ನನಸಾಗಬೇಕೆಂದರೆ ಗಂಡನ ಸಹಕಾರ ಅನಿವಾರ್ಯ. ಅದೇ ಸಿಗದಿದ್ದರೆ ಕನಸುಗಳೆಲ್ಲಾ ಹೇಳಹೆಸರಿಲ್ಲದಂತಾಗುತ್ತವೆ. ಸಂಸಾರದ ಬಂಡಿ ಎಳೆಯೋದು ಹೆಂಡತಿಯೊಬ್ಬಳಿಂದಲೇ ಹೇಗೆ ಸಾಧ್ಯ?

ಮದುವೆಯ ನೀರು ಮೈಮೇಲೆ ಬಿದ್ದರೆ, ಮದುಮಗನಲ್ಲಿ ಭಾರಿ ಬದಲಾವಣೆ ಕಾಣಿಸಿಕೊಳ್ಳುವುದು ಸಾಮಾನ್ಯ. ಆ ನೀರಿನಲ್ಲಿ ಅದ್ಯಾವ ಶಕ್ತಿ ಅಡಗಿದೆಯೋ. ಆದರೆ ಆಶ್ಚರ್ಯಕರ ಸಂಗತಿಯೆಂದರೆ, ಮದುವೆಯ ನೀರು ಪೈ ಮಾಮನ ಮೇಲೆ ಗಮನಾರ್ಹ ಪ್ರಭಾವ ಬೀರದೇ ಹೋಯಿತು. ಅವರ ದಿನನಿತ್ಯದ ೮ ಗಂಟೆಯ ಕ್ಯಾಂಟೀನ್ ಭೇಟಿಗೆ ಬ್ರೇಕ್ ಬಿದ್ದಿದ್ದೊಂದು ಬಿಟ್ಟರೆ ಮತ್ಯಾವ ಬದಲಾವಣೆಯೂ ಕಾಣಿಸಲಿಲ್ಲ. ಅವನೊಬ್ಬ ಕರಗದ ಕಲ್ಲುಬಂಡೆ!

ಹೊಸದಾಗಿ ಮದುವೆಯಾದ ಹೆಣ್ಣಿಗಿರುವಂತೆ ಸಹನಾಳಿಗೂ ನೂರೆಂಟು ಆಸೆ ಆಕಾಂಕ್ಷೆಗಳು.

ಪ್ರತಿದಿನ ಸಾಯಂಕಾಲ, ಗಂಡನೊಂದಿಗೆ ಸಮುದ್ರ ತೀರಕ್ಕೆ ಹೋಗುವ ಬಯಕೆ. ಇಬ್ಬರೂ ಕೈಕೈಮಿಲಾಯಿಸಿ ಬೀಚಿನ ತುಂಬಾ ಓಡಾಡಬೇಕು. ಉಸುಕಿನಿಂದ ಬೀಚಿನ ಮೇಲೆ ಕನಸಿನ ಮನೆಕಟ್ಟಿ ಖುಷಿಪಡಬೇಕು. ಸಾಗರದ ಅಲೆಗಳಲ್ಲಿ ನೀರಾಟವಾಡಬೇಕು ಎಂಬ ಆಸೆ.

ಸದಾನಂದ ಹೋಟೆಲ್ ಬೆಣ್ಣೆ ದೋಸೆಯ ರುಚಿ ನೋಡಬೇಕು. ವಾರಾಂತ್ಯವನ್ನು ಉಡುಪಿ-ಮಂಗಳೂರಿನಲ್ಲಿ ಕಳೆಯಬೇಕು. ದಿನವಿಡೀ ಊರುಸುತ್ತಿ, ಬಜಾರಿನಲ್ಲಿ ಓಡಾಡಿ, ಹೋಟೆಲ್ ಊಟಮಾಡಿ, ಮ್ಯಾಟಿನಿ ಸಿನಿಮಾ ನೋಡಿಕೊಂಡು ಸಂಜೆ ವೇಳೆಗೆ ಮನೆ ಸೇರಿಕೊಳ್ಳಬೇಕು. ತಿಂಗಳಿಗೊಮ್ಮೆ ಸ್ನೇಹಿತರೊಂದಿಗೆ ಪಿಕ್‌ನಿಕ್‌ಗೆ ಹೋಗಿ ಮೋಜು ಮಜಾ ಉಡಾಯಿಸಬೇಕು. ವರ್ಷಕ್ಕೊಮ್ಮೆ ತೀರ್ಥಯಾತ್ರೆ ಕೈಗೊಳ್ಳಬೇಕು.

ಸುರತ್ಕಲ್ಲಿನ ಸುತ್ತಮುತ್ತ ಆಗಾಗ ಆಚರಿಸುವ



ಸ್ನೇಹಿತರ ಮಕ್ಕಳ ನಾಮಕರಣ, ಮುಂಜಿ, ಮದುವೆ ಸಮಾರಂಭಗಳಲ್ಲಿ ಭಾಗವಹಿಸಿ ಸಂಭ್ರಮ ಪಡಬೇಕು. ಪಡ್ರಿ ಜಾತ್ರೆ, ಸದಾನಂದನ ರಥೋತ್ಸವ, ಪಾವಂಜೆ ಷಷ್ಠಿ, ಉಡುಪಿ ಶ್ರೀಕೃಷ್ಣನ ಜನ್ಮಾಷ್ಟಮಿಗಳಲ್ಲಿ ಭಾಗವಹಿಸಿ ಮೋಜು ಉಡಾಯಿಸಬೇಕು. ರಾತ್ರಿಯಿಡೀ ಯಕ್ಷಗಾನ ಆಟ ನೋಡಿ ನಲಿಯಬೇಕು.

ಹೀಗೆ ಸಹನಾಳ ಆಸೆಗಳಿಗೆ ಕೊನೆಯೆಂಬುದಿಲ್ಲ. ಅವುಗಳನ್ನು ನೆನಪಿಸಿಕೊಂಡರೇನೆ ಅವಳಿಗೆ ಮೈಪುಳಕ.

ವಿಷಾದದ ಸಂಗತಿಯೆಂದರೆ, ಅವಳ ಆಸೆಗಳ ಪೈಕಿ ಕನಿಷ್ಠ ಪಕ್ಷ ಒಂದಾದರೂ ಈಡೇರದೇ ಹೋದದ್ದು ಅವಳ ಕರ್ಮ! ಬದುಕಿನ ಪ್ರಾರಂಭದಲ್ಲೇ, ಪೈ ಮಾಮಾ ಅವಳ ಆಸೆಗಳನ್ನೆಲ್ಲಾ ನಿರ್ದಯವಾಗಿ ಹೊಸಕಿಹಾಕಿಬಿಟ್ಟ.

ಪೈ ಮಾಮಾ ಕಾಲೇಜಿನಿಂದ ಮನೆಗೆ ಮರಳಿದ ಮೇಲೆ ಹೆಂಡತಿಯೊಂದಿಗೆ ಸರಸಸಲ್ಲಾಪದ ಒಂದು ಮಾತಿಲ್ಲ ಕತೆಯಿಲ್ಲ. ತಾನಾಯಿತು ತನ್ನ ಟ್ರಾನ್ಸಿಸ್ಟರ್ ಆಯಿತು. ಅವನು ಹಾಯಾಗಿ ಸಿಗರೇಟು ಸೇದುತ್ತ, ಗಾಯನ ಕೇಳುವುದರಲ್ಲಿ ಕಳೆದುಹೋಗಿರುತ್ತಿದ್ದ. ಮುಂಜಾವಿನಿಂದ ಸಾಯಂಕಾಲದವರೆಗೆ ಗಂಡನ ದಾರಿ ಕಾಯುತ್ತಾ ಮನೆಯಲ್ಲಿ ಒಂದು ಹೆಣ್ಣು ಜೀವ ಬಿದ್ದಿರುವುದೆಂದು ಅವನಿಗೆ ಸಾಮಾನ್ಯ ಜ್ಞಾನವಿರಬೇಡವೇ? ಹೋಗಲಿ ತಾನೆ ಮಾತನಾಡಿಸಿದರಾಯಿತೆಂದು ಸಹನಾ ಗಂಡನ ಮೈಮೇಲೆ ಬಿದ್ದು ಪ್ರಯತ್ನಿಸಿದರೆ, ಹರಿಣಿ ಮೇಲೆ ಎರಗುವ ಹುಲಿಯಂತೆ ಅವನು ಹೆಂಡತಿಯ ಮೇಲೆ ಸವಾರಿ ಮಾಡುತ್ತಿದ್ದ. ಹೊಲಸು ಬೈಗಳನ್ನು ಯಥೇಚ್ಛವಾಗಿ ಬಳಸಿ ಅವಳ ಬಾಯಿ ಮುಚ್ಚಿಸುತ್ತಿದ್ದ. ಅವನೊಬ್ಬ ನಾಗರಿಕತೆಯ ಗಂಧಗಾಳಿ ಗೊತ್ತಿಲ್ಲದ ಗಾಂಪ.

ತಂದೆ-ತಾಯಿ, ಬಂಧು-ಬಳಗ, ಗೆಳತಿಯರು, ಓಡಾಡಿದ ನೆಲ, ಎಲ್ಲವನ್ನು ಹಿಂದೆ ಬಿಟ್ಟು ಗಂಡನನ್ನೆ ನೆಚ್ಚಿಕೊಂಡು ಅರಿಯದ ಊರಿಗೆ ಬಂದಿರುವ ಅಮಾಯಕ ಹೆಣ್ಣಿನ ಮೇಲೆ ಮನಬಂದಂತೆ ಹರಿಹಾಯುವುದೇ ಅವನ ಕೆಲಸ. ಪೈ ಮಾಮನ ಕತೆಯೇ ಬೇರೆ.

ಪೈ ಮಾಮಾ ತನ್ನ ಹೆಂಡತಿಯೊಂದಿಗೆ ವರ್ತಿಸುವ ಪರಿಯೇ ಬಹು ವಿಚಿತ್ರ. ಅವನ ದೃಷ್ಟಿಯಲ್ಲಿ ಹೆಂಡತಿಯ ನಿರೂಪಣೆಯೇ ಬೇರೆ.

'ಹೆಂಡತಿ ಗಂಡನ ಲೈಫ್ ಪಾರ್ಟನರ್ ಅಲ್ಲ, ಬೆಡ್ ಪಾರ್ಟನರ್, ಅಷ್ಟೆ. ಗಂಡನ ಮನೆಯಲ್ಲಿ ಮಹಾರಾಣಿಯಂತೆ ಮೆರೆಯುವ ಹಾಗಿಲ್ಲ. ಗಂಡನೇ ಮನೆಯ ಸರ್ವಾಧಿಕಾರಿ. ಎಲ್ಲವೂ ಅವನ ಆದೇಶದ ಮೇರೆಗೆ ನಡೆಯಬೇಕು. ಅವನು ಹೇಳಿದ್ದೇ ವೇದವಾಕ್ಯ. ಹೆಂಡತಿ ಗಂಡನ ಆದೇಶವನ್ನು ಚಕಾರವೆತ್ತದೆ ಪಾಲಿಸಬೇಕು. ಗಂಡನ ಸೇವೆಯನ್ನು ನಿಷ್ಠೆಯಿಂದ ಪಾಲಿಸಬೇಕು. ಬಾಯಿಗೆ ಬೀಗ ಜಡಿದುಕೊಂಡು ಮನೆಯಲ್ಲೇ ಬಿದ್ದಿರಬೇಕು. ಗಂಡ ಹಾಕಿರುವ ಲಕ್ಷ್ಮಣ ರೇಖೆಯನ್ನು ದಾಟಿದರೆ ಅವಳ ಕತೆ ಮುಗಿದಂತೆ.'

ಆದರೆ ಸಹನಾ ಆತನ ತದ್ವಿರುದ್ಧ. 'ಮದುವೆಯೆಂಬುದು ಬೊಂಬೆಯಾಟವಲ್ಲ. ಪ್ರೀತಿಸಿ ಶಾಸ್ತ್ರೋಕ್ತವಾಗಿ ಸಪ್ತಪದಿ ತುಳಿದ ಎರಡು ಹೃದಯಗಳ ಬೆಸುಗೆ. ಗಂಡ-ಹೆಂಡಿರ ನಡುವೆ ಮೇಲು ಕೀಳೆಂಬ ತಾರತಮ್ಯವಿಲ್ಲ. ಪ್ರೀತಿ-ಪ್ರೇಮ, ವಿಶ್ವಾಸ, ಸದ್ಗುಣ, ಸಹಾನುಭೂತಿ, ಸಾಮರಸ್ಯ ಸುಖಸಂಸಾರದ ಆಧಾರ ಸ್ತಂಭಗಳು. ಸಪ್ತಪದಿಯ ಅರ್ಥಕ್ಕೆ ಅನುಗುಣವಾಗಿ ನಡೆದುಕೊಳ್ಳುವುದು ಗಂಡ-ಹೆಂಡತಿಯರ ಕರ್ತವ್ಯ. ಗಂಡನಾದವನು ಹೆಂಡತಿಯ ಭಾವನೆಗಳಿಗೆ ಸಮಯಕ್ಕೆ ಸರಿಯಾಗಿ ಸ್ಪಂದಿಸಬೇಕು. ಸುಖಸಂಸಾರಕ್ಕೆ ಗಂಡನ ಕಚ್ಚೆ ಶುದ್ಧಿ ಅನಿವಾರ್ಯ!

ಪೈ ಮಾಮಾ ಸಹನಾಳನ್ನು ತನ್ನ ಹಿಡಿತದಲ್ಲಿ ಹಿಡಿದಿಟ್ಟಿದ್ದ. ಕ್ಯಾಂಪಸ್ ಮಹಿಳೆಯರೊಂದಿಗೆ ಯಾವುದೇ ಸಂಪರ್ಕಕ್ಕೆ ಆಸ್ಪದವಿಲ್ಲ. ನೆರೆಹೊರೆಯ ಹೆಂಗಸರ ಸಂಗಡ ಸಹನಾ ಹರಟೆ ಕೊಚ್ಚುವುದು, ಸುಖ-ದುಃಖ ಹಂಚಿಕೊಳ್ಳೋದು, ಕೊಡು ತಗೊಳ್ಳೋ ವ್ಯವಹಾರ ಮಾಡುವುದಕ್ಕೆ ಆಸ್ಪದವಿರಲಿಲ್ಲ. ಅವಳು ಯಾವತ್ತೂ ಮನೆ ಬಿಟ್ಟು ಆಚೆಗೆ ಹೋಗುವ ಹಾಗಿಲ್ಲ. ಮೂರು ಹೊತ್ತು ಮನೆಯಲ್ಲೇ ಬಿದ್ದಿರಬೇಕು. ಸಹನಾ ಗಂಡನ ಮನೆಯಲ್ಲಿ ಪಂಜರದ ಗಿಣಿ!

ಪೈ ಮಾಮನಿಗೆ ಸಹನಾಳ ಮೇಲೆ ಒಂಚೂರು ನಂಬಿಕೆ ಇರಲಿಲ್ಲ. ನಿಜ ಹೇಳಬೇಕೆಂದರೆ ಅವನೊಬ್ಬ

ಸಂಶಯ ಪಿಶಾಚಿ ! ಕಾಲೇಜಿಗೆ ಹೋಗುವ ಮುನ್ನ ಅವನು ಸಹನಾಳನ್ನು ಮನೆಯಲ್ಲಿ ಕೂಡಿಹಾಕಿ, ಬಾಗಿಲಿಗೆ ಬೀಗ ಜಡಿದು ಹೋಗುತ್ತಿದ್ದ. ಹೊಸದಾಗಿ ಮದುವೆಯಾಗಿ ಬಂದಿರುವ ಹೆಣ್ಣಿನ ಗತಿಯೇನು ? ಮುಂಜಾವಿನಿಂದ ಹಿಡಿದು ಸಂಜೆಯವರೆಗೆ ನಾಲ್ಕು ಗೋಡೆಗಳ ಮಧ್ಯೆ ಬಂದಿಯಾಗಿರುವುದು ಹೇಗೆ ಸಾಧ್ಯ ?

ಸಹನಾ ಅದಕ್ಕೊಂದು ಪರ್ಯಾಯ ಮಾರ್ಗ ಕಂಡುಕೊಂಡಿದ್ದಳು. ಗಂಡ ಕಾಲೇಜಿಗೆ ಹೋದ ಬಳಿಕ, ಸಹನಾ ದಡಬಡಿಸಿ ದಗದನ್ನೆಲ್ಲ ಮುಗಿಸಿ, ಮನೆಯ ಮುಂದಿನ ಕಿಡಕಿಯ ಬಳಿಗೆ ಓಡೋಡಿ ಬರುತ್ತಿದ್ದಳು.

ಕಿಡಕಿಯ ಬಳಿನಿಂತು, ಹೊರಗಡೆ ರಸ್ತೆ ಮೇಲೆ ಓಡಾಡುವ ಜನ, ಚಲಿಸುವ ವಿವಿಧ ವಾಹನಗಳನ್ನು ಬಿಟ್ಟ ಬಾಯಿ ಬಿಟ್ಟಂತೆ ನೋಡುತ್ತ ನಿಲ್ಲುತ್ತಿದ್ದಳು. ಹೀಗೆ ನಿಂತಾಗ ಸಮಯ ಹೋದದ್ದೇ ಅವಳಿಗೆ ಗೊತ್ತಾಗುತ್ತಿರಲಿಲ್ಲ. ಮನೆಯ ಕಿಡಕಿ ಸಹನಾಳಿಗೆ ಓಬೀರಾಯನ ಕಾಲದ ಡಬ್ಬಿ ಸಿನಿಮಾ ! ಅದು ಅವಳ ಮನರಂಜನೆಯ ಸಾಧನ.

ಸಹನಾ ಹಳಿತಪ್ಪಿದ ತನ್ನ ಬದುಕಿನ ಬಗ್ಗೆ ಗಂಭೀರವಾಗಿ ಚಿಂತನೆ ಮಾಡತೊಡಗಿದಳು.

‘ಪ್ರೀತಿ-ಪ್ರೇಮ, ಉತ್ಸಾಹ, ಉಲ್ಲಾಸ, ಬಜಾರಿನಲ್ಲಿ ಬಿಕರಿಯಾಗುವ ಸರಕುಗಳಲ್ಲ. ಅವು ಮನದಲ್ಲಿ ಅರಳುವ ಸುಂದರ ಭಾವನೆಗಳು. ಅರಸಿಕ, ಅರೆಮರುಳ, ಅಜ್ಞಾನಿ ಗಂಡನ ಸಂಗಡ ಇಲ್ಲಿಯ ತನಕ ನಾನು ಸಂಸಾರ ಮಾಡಿದ್ದು ಸಾಕು. ಅನುಭವಿಸಿರುವ ಮಾನಸಿಕ ಹಾಗೂ ದೈಹಿಕ ಯಾತನೆ ಮೂರು ಜನ್ಮಕ್ಕೆ ಸಾಕು ! ಇಂದಲ್ಲ ನಾಳೆ ಗಂಡ ಸುಧಾರಿಸಬಹುದೆಂಬ ನಿರೀಕ್ಷೆಯಲ್ಲಿ ನಾನಿದ್ದೆ. ಆದರೆ ಅದು ಆಶಾಭಂಗವಾದದ್ದು ನನ್ನ ಕರ್ಮ. ಹಿಂದಿನ ಜನ್ಮದ ಕರ್ಮದ ಫಲವನ್ನು ನಾನೀಗ ತೀರಿಸುತ್ತಿರುವೆನು’ ಎಂದೆಲ್ಲಾ ಎನ್ನಿಸತೊಡಗಿತು.

‘ಸಂಸಾರದ ಸಾರವನ್ನೇ ಅರಿಯದ ಗಾಂಪನಿಗೆ ಮದುವೆ ಯಾಕೆ ಬೇಕಾಗಿತ್ತು? ಯಾವ ಪುರುಷಾರ್ಥಕ್ಕೆ ನನ್ನನ್ನು ಮದುವೆಯಾದ ? ವಂಚಿಸಿ ನನ್ನನ್ನು ಮದುವೆಯಾಗಿ ನನ್ನ ಬಾಳಿಗೆ ಕೊಳ್ಳಿ ಇಟ್ಟ. ನನಗೆ ಅರಳಲು ಆಸ್ಪದವನ್ನೇ ನೀಡಲಿಲ್ಲ. ಇಂಥ ಗಾಂಪ ಗಂಡನ ಸಹವಾಸ ಸಾಕಪ್ಪಾಸಾಕು. ಇದಕ್ಕೊಂದು ಶಾಶ್ವತ ಪರಿಹಾರ ಇಲ್ಲವೇ...?’

‘ನನ್ನ ಅಳಲನ್ನು ಆಲಿಸುವವರು ಇಲ್ಲಿ ಯಾರಿದ್ದಾರೆ ? ಉಹ್ಞೂಂ...ಇಲ್ಲ, ಯಾರೂ ಇಲ್ಲ. ನನಗೆ ನಾನೆ ದಿಕ್ಕು. ಇಂಥ ನೀರಸ ಬದುಕಿಗೆ ಕೊನೆ ಇಲ್ಲವೇ...?’

‘ಯಾಕಿಲ್ಲ...? ನಿನ್ನ ಬದುಕನ್ನು ನೀನೇ ಕಟ್ಟಿಕೊಳ್ಳಬೇಕು. ಗಂಡನ ಮನೆಯಲ್ಲಿ ಏನಿದೆ ? ಸುಖ..., ಸ್ವಾತಂತ್ರ್ಯ... ನೆಮ್ಮದಿ...? ಒಂದೂ ಇಲ್ಲ ಅನ್‌ಎಜುಕೇಟೆಡ್ ಹೌಸ್‌ವೈಫ್ ಥರ ಪಾತ್ರ ತೊಳೆಯುತ್ತ ನೀ ಎಷ್ಟು ವರ್ಷ ಅಂತ ಇಲ್ಲೇ ಬಿದ್ದಿರ್ತೀಯಾ ? ಇನ್ನು ಕಾಲ ಮಿಂಚಿಲ್ಲಾ. ಬೇಗನೆ ಒಂದು ನಿರ್ಧಾರಕ್ಕೆ ಬಾ’ ಎಂದಿತು ಮನಸ್ಸು.

‘ನೀನು ಬಿ.ಎ.ಎಂ.ಎಸ್. ಪದವೀಧರೆ. ಮೈಸೂರಿನಲ್ಲಿ ಒಂದು ಕ್ಲಿನಿಕ್ ತೆರೆದು, ಸ್ವಂತ ಕಾಲ ಮೇಲೆ ನಿಲ್ಲು. ಒಂಟಿ ಹೆಣ್ಣು ಮರ್ಯಾದೆಯಿಂದ ಹೇಗೆ ಬಾಳಬೇಕೆಂಬುದನ್ನು ಸಮಾಜಕ್ಕೆ ತೋರಿಸು. ಮಾದರಿ ಹೆಣ್ಣಾಗಿ ಬಾಳು.’

‘ಬಡಬಗ್ಗರಿಗೆ ಉಚಿತ ಚಿಕಿತ್ಸೆ ನೀಡು. ಸಮಾಜ ಸೇವೆಯಲ್ಲಿ ಭಾಗವಹಿಸು. ಮಹಿಳೆಯರ ಮೇಲೆ ನಡೆಯುವ ಅತ್ಯಾಚಾರದ ವಿರುದ್ಧ ಧ್ವನಿ ಎತ್ತು. ನಿನ್ನ ಸಹೋದರ-ಸಹೋದರಿಯರಿಗೆ ಗುಣಮಟ್ಟದ ಶಿಕ್ಷಣ ಕೊಡಿಸಿ, ಅವರನ್ನು ಬದುಕುವ ದಾರಿಗೆ ಹಚ್ಚು.’

‘ನಿನಗೆ ಉಜ್ವಲ ಭವಿಷ್ಯ ಕಾದಿದೆ. ತೀರ್ಮಾನ ತೆಗೆದುಕೊಳ್ಳುವಲ್ಲಿ ಮೀನ ಮೇಷ ಎಣಿಸಬೇಡ. ಧೈರ್ಯದಿಂದ ಮುನ್ನುಗ್ಗು.’




ಸಿಡಿದ ಬಾಂಬಿಗೆ
ಭಯಾನಕ ಸುನಾಮಿಗೆ
ಬಿರುಗಾಳಿ ಪ್ರವಾಹಕ್ಕೆ
ಸಿಲುಕಿದ ದೇಹಗಳು
ಸುಖಿಗಳು
ನೋಡುತ್ತಾ, ಕೇಳುತ್ತಾ
ಭಯದಿಂದ ಪೂಜೆ
ಹೋಮ ಹವನಗಳಿಂದ
ಸಾವಿಂದ ಕಾಪಾಡಿಕೊಂಡು
ಭಯದಿಂದ ಜೀವಿಸುವ
ಭಕ್ತರು

**ಕಮಲಂ ಅರಸು**

ಹೀಗೆ ಅವಳ ಒಳಮನಸ್ಸು ಎಚ್ಚರಿಕೆ ಗಂಟೆ ಬಾರಿಸಿತು. ಬೋಧಿವೃಕ್ಷದ ಕೆಳಗೆ ಕುಂತ ಸಿದ್ಧಾರ್ಥನಿಗೆ ಹೇಗೆ ಜ್ಞಾನೋದಯವಾಯಿತೋ ಹಾಗೆ ನಾಲ್ಕು ಗೋಡೆಗಳ ಮಧ್ಯೆ ಬಂದಿಯಾಗಿರುವ ಸಹನಾಳಿಗೆ ಜ್ಞಾನೋದಯವಾಯ್ತು. ಸ್ಪಷ್ಟ ಯೋಜನೆಯೊಂದು ಅವಳ ಮನದಲ್ಲಿ ರೂಪ ತಾಳಿತು. ಮನದಲ್ಲಿ ಮಂದಹಾಸ ಮಿಂಚಿತು. ಮನಸ್ಸು ನಿರಾಳವಾಯಿತು.

ಆ ದಿನ ರಾತ್ರಿ ಇಬ್ರೂ ಜೊತೆಗೂಡಿ ಊಟ ಮಾಡಿ, ಬೆಡ್ ಮೇಲೆ ಒರಗಿದರು. ದಿಂಬಿಗೆ ತಲೆ ಇಟ್ಟ ಸ್ವಲ್ಪ ಸಮಯದಲ್ಲೇ ಪೈ ಮಾಮಾ ಕುಂಭಕರ್ಣನ ನಿದ್ರೆಗೆ ವಶವಾದ. ಶೃತಿಬದ್ಧವಾದ ಗೊರಕೆ ರಾಗ ತೇಲಿ ಬಂತು.

ಪೈ ಮಾಮನ ಕಥೆ ಹೀಗಾದರೆ, ಸಹನಾಳದು ಇನ್ನೊಂದು ಥರ. ಅವಳ ಕಣ್ಣಿನ ಬಳಿ ನಿದ್ದೆ ನುಸುಳಲಿಲ್ಲ. ಎಂದೂ ಕಾಣದ ಪ್ರಸನ್ನತೆ ಅವಳ ಮೊಗದಲ್ಲಿ ನೆಲೆಸಿತ್ತು.

ಪೈ ಮಾಮಾ ಎದ್ದಾಗ ಬೆಳಗಿನ ೭ ಗಂಟೆ. ಕಣ್ಣು ಉಜ್ಜುತ್ತ ಪಕ್ಕಕ್ಕೆ ಹೊರಳಿದ. ಎದೆ ಧಸಕ್ ಎಂದಿತು ! ಪಕ್ಕದ ಬೆಡ್ ಬಣಗುಟ್ಟಿತು ! ಅಯ್ಯಯ್ಯೋ ಸಹನಾ ಎಲ್ಲಿ ಮಾಯವಾದಳಪಾ ? ಚಿಂತೆ ಸುರುವಾಯ್ತು. ಭಗವಂತಾ ಇದೇನು ಬಂತಪಾ ಕರ್ಮ !

ಅವನ ಹೃದಯ ಬಡಿತ ಗಗನಕ್ಕೇರಿತು ! ಎಣಿಸದಿರುವ ಘಟನೆಗೆ ಅವನು ಸಾಕ್ಷಿಯಾದ. ಒಂದು ಕ್ಷಣ ಯೋಚಿಸಿದ. ಮರುಕ್ಷಣ ಧಿಗ್ಗನೇ ಎದ್ದು ಮನೆಯಿಡೀ ಜಾಲಾಡಿದ. ಸಹನಾ ಕುರುಹು ಬಿಡದೆ ಕಣ್ಮರೆಯಾಗಿದ್ದಳು.

ಇದೊಳ್ಳೆ ಫಜೀತಿಯಾಯಿತಲ್ಲ! ಮೈಮೇಲೆ ಹಾವು ಬಿದ್ದವರಂತೆ ಚಡಪಡಿಸಿದ. ಅದೆಲ್ಲಾ ಬರೀ ನಾಟಕ. ಕಣ್ಣಲ್ಲಿ ಹನಿ ನೀರಿಲ್ಲ, ಮೂಗಿನಲ್ಲಿ ಸಿಂಬಳವಿಲ್ಲ. ಸಹನಾ ನನಗೆ ಚಳ್ಳೇಹಣ್ಣು ತಿನ್ನಿಸಿದಳೆಂದು ಗೋಳಾಡಿದ. ಮರುಕ್ಷಣ ತಲೆ ಕೊಡಹಿ ಮೇಲೆದ್ದ. ಹೊಟ್ಟೆ ತಾಳಹಾಕುತ್ತಿರುವುದು ಗಮನಕ್ಕೆ ಬಂತು. ಮನೆಯಲ್ಲಿ ಏನೂ ನಡೆದೇ ಇಲ್ಲವೆಂಬಂತೆ, ಪೈ ಮಾಮಾ ನಿರಾಳವಾಗಿ ಕ್ಯಾಂಟೀನಿನತ್ತ ತೂಫಾನಿನಂತೆ ಹೋದ. ಸಹನಾ ಕಣ್ಮರೆಯಾದ ತಿಂಗಳೊಪ್ಪತ್ತಿನಲ್ಲಿ, ಪೈ ಮಾಮಾ ಶಿವನ ಪಾದ ಸೇರಿದ.

✶ ✶ ✶

ಪಕ್ಕದ ಫೋನು ಜೋರಾಗಿ ರಿಂಗಾಯಿತು. ಆ ಸದ್ದು ನನ್ನನ್ನು ಭೂತಕಾಲದಿಂದ ಎಳೆದು ತಂದು ವಾಸ್ತವ ಪ್ರಪಂಚದ ಮೇಲೆ ನಿಲ್ಲಿಸಿತು. ನಾನು ಫೋನು ಎತ್ತಿ,

‘‘ಹಲೋ...? ಯಾರ್ರೀ...?’’ ಕೂಲಾಗಿ ಪ್ರಶ್ನಿಸಿದೆ.

‘‘ನಾನ್ರೀ ಕಾಲೇಜ ಪ್ರಿನ್ಸಿಪಾಲ್. ಈಗ ತಾವೆಲ್ಲಿದೀರಿ ?’’

ಮರು ಪ್ರಶ್ನೆ ತೇಲಿ ಬಂತು.

‘‘ಇಲ್ಲೇ ಡಿಪಾರ್ಟ್‌ಮೆಂಟ್‌ನಾಗ ಅದೀನ್ರಿ ಸರ್’’ ಪ್ರತಿಕ್ರಿಯಿಸಿದೆ.

‘‘ಇವತ್ತಿನ ಮೀಟಿಂಗ್ ಮರ್‍ತಿಲ್ಲ ತಾನೆ ? ಆಗ್ಲೇ ಬಾರಾ ಬಜೆ ಹೊಡಿತು. ನಿಮ್ ಸುಳಿವಿಲ್ಲ. ಬೇಗ ಬರ್ರೀ. ನಿಮ್ಗೆ ಕಾಯ್ತಿರ್‍ತೀವಿ’’ ಎಂದು ಆದೇಶ ನೀಡಿದರು.

‘‘ಆಯ್ತು ಸರ್. ಐದು ನಿಮಿಷದಾಗ ಬರ್ತೀನಿ’’ ಎಂದು ಹೇಳುತ್ತ ಮೀಟಿಂಗ್ ಹಾಲಿನತ್ತ ಹೆಜ್ಜೆ ಹಾಕಿದೆ.

✶ ✶ ✶

**ಡಾ|| ರುದ್ರಯ್ಯ ವಿ. ಗದಗ**
ನಂ. ೨೪೦/೪೨, ‘ಪಂಚವಟಿ’, ವಿವೇಕಾನಂದ ನಗರ, ನೀರಿನ ಟ್ಯಾಂಕ್ ಹತ್ತಿರ
ಗದಗ - ೫೮೨ ೧೦೧

ಅರುಣ್ ಜೋಳದಕೂಡ್ಲಿಗಿ



# ಜಾನಪದ ಅಧ್ಯಯನಗಳಲ್ಲಿ ಕನ್ನಡ – ಕರ್ನಾಟಕತ್ವದ ಅನನ್ಯತೆಯ ನೆಲೆಗಳು

ಕರ್ನಾಟಕದಲ್ಲಿ ನಡೆದ ಜಾನಪದ ಅಧ್ಯಯನಗಳನ್ನು ಕನ್ನಡ ಜಾನಪದ ಎಂತಲೂ, ಕರ್ನಾಟಕ ಜಾನಪದ ಎಂತಲೂ ಕರೆಯುತ್ತಾ ಬರಲಾಗಿದೆ. ಅಂದರೆ ಕನ್ನಡ ಭಾಷೆಯಲ್ಲಿ ದೊರೆಯುವ ಜನಪದ ಸಾಹಿತ್ಯಿಕ, ಆಚರಣಾತ್ಮಕ ಆಕರಗಳನ್ನು ಕುರಿತ ಅಧ್ಯಯನವೆಂತಲೂ, ಕರ್ನಾಟಕ ಗಡಿ ಪ್ರದೇಶದ ವ್ಯಾಪ್ತಿಯಲ್ಲಿ ಬರುವ ಜನ ಸಮುದಾಯದ ಲೋಕಜ್ಞಾನದ ತಿಳುವಳಿಕೆ ಕುರಿತ ಅಧ್ಯಯನ ಎಂತಲೂ ಅಂದುಕೊಳ್ಳಬಹುದು. ಅಂತೆಯೇ ಈ ಬಗೆಯ ಕಲ್ಪನೆಯೇ ಅಮೂರ್ತವಾದದ್ದು ಅಥವಾ ಭಾವನಾತ್ಮಕವಾಗಿ ಕಟ್ಟಲ್ಪಟ್ಟದ್ದು. ಇದು ಭಾವನಾತ್ಮಕವಾಗಿ ಒಂದುಗೂಡಿಸುವ ಕೃತಕ ನಿರ್ಮಾಣ ಪ್ರಕ್ರಿಯೆಯ ಒಂದು ಭಾಗ. ಕನ್ನಡ ಮತ್ತು ಕರ್ನಾಟಕತ್ವವನ್ನು ಭಾಷಿಕ ನೆಲೆಯಲ್ಲಿ, ಭೌಗೋಳಿಕ ನೆಲೆಯಲ್ಲಿ ನಿರ್ವಚಿಸಿಕೊಳ್ಳುವ ಸಾಹಿತ್ಯದ ಹಲವು ಆಯಾಮಗಳಲ್ಲಿ ಜಾನಪದವೂ ಒಂದು. ಜಾನಪದ ಅಧ್ಯಯನಗಳನ್ನು ಕನ್ನಡದೊಂದಿಗೆ ಜೋಡಿಸುವುದು, ಕರ್ನಾಟಕದ ಭೌಗೋಳಿಕ ಎಲ್ಲೆಯ ಜೊತೆ ಸಮೀಕರಿಸುವುದು ಈಗಲೂ ನಡೆಯುತ್ತಿದೆ. ಈ ಬಗೆಯ ತಿಳುವಳಿಕೆಯು ಕನ್ನಡದಲ್ಲಿ ನಡೆದ ಜಾನಪದ ಅಧ್ಯಯನಗಳಲ್ಲಿ ಪ್ರಬಲವಾಗಿದೆ. ಈ ಕುರಿತ ಟಿಪ್ಪಣಿ ರೂಪದ ಬರಹವಿದು.

'ಕನ್ನಡ' ಎನ್ನುವ ಭಾಷೆಯ ಅಂತಃಸತ್ವವನ್ನು ಅರಿಯಲು, ಕರ್ನಾಟಕ ಎನ್ನುವ ರಾಜ್ಯದ ಸಾಂಸ್ಕೃತಿಕ ವೈವಿಧ್ಯಗಳನ್ನು ಗುರುತಿಸಲು ಜಾನಪದ ಆಕರಗಳು ಮತ್ತೆ ಮತ್ತೆ ಬಳಕೆಯಾಗುತ್ತಿವೆ. ಇಲ್ಲಿ ಜಾನಪದ ಆಕರಗಳ ಮೂಲಕ ಹುಟ್ಟುವ ತಿಳುವಳಿಕೆಯನ್ನು ಆಧರಿಸಿ 'ಕನ್ನಡ', 'ಕರ್ನಾಟಕ' ಕಲ್ಪನೆ ರೂಪುಗೊಳ್ಳುವುದಕ್ಕಿಂತ, ಕನ್ನಡ ಮತ್ತು ಕರ್ನಾಟಕದ ಚೌಕಟ್ಟುಗಳಿಗೆ ಜಾನಪದ ಆಕರಗಳನ್ನು ಜೋಡಿಸುವ ಮಾದರಿ ಹೆಚ್ಚು ಬಳಕೆಯಾಗಿದೆ. ಕನ್ನಡ, ಕರ್ನಾಟಕತ್ವದ ಅನನ್ಯತೆಗಳು ಜಾನಪದ ಅಧ್ಯಯನಗಳಲ್ಲಿ ಹೇಗೆ ಬಿಂಬಿತವಾಗಿವೆ ಅಥವಾ ಈ ಬಗೆಯ ಅನನ್ಯತೆಯ ಹುಡುಕಾಟವೇ ಹೇಗೆ ಜಾನಪದ ಅಧ್ಯಯನಗಳ ತಿಳುವಳಿಕೆಯ ಮೇಲೆ ಸವಾರಿ ಮಾಡಿದೆ ಎನ್ನುವ ಕುರಿತು ಚರ್ಚಿಸುವ ಅಗತ್ಯವಿದೆ. ಅದನ್ನಿಲ್ಲಿ ಭಾಷಿಕ ಆಯಾಮ, ಭೌಗೋಳಿಕ ಆಯಾಮ, ಕನ್ನಡತ್ವದ ಆಯಾಮ, ಕನ್ನಡ ರಾಷ್ಟ್ರೀಯತೆಯ ಆಯಾಮ ಎಂಬ ನಾಲ್ಕು ಘಟಕಗಳಲ್ಲಿ ವಿವರಿಸಿಕೊಳ್ಳಲು ಪ್ರಯತ್ನಿಸಲಾಗಿದೆ.

**ಭಾಷಿಕ ಆಯಾಮ**

ಕರ್ನಾಟಕ ಏಕೀಕರಣದ ಸಂದರ್ಭದಲ್ಲಿ 'ಕನ್ನಡ' ಭಾಷೆ ಮಾತನಾಡುವವರನ್ನು 'ಕರ್ನಾಟಕ' ಎಂಬ ಭೌಗೋಳಿಕ ನೆಲೆಯಲ್ಲಿ ಒಂದುಗೂಡಿಸಲು ಮತ್ತು ಈ ಭೌಗೋಳಿಕ ಎಲ್ಲೆಯಲ್ಲಿದ್ದ ಭಿನ್ನತೆಗಳನ್ನು ತೊಡೆದು ಹಾಕುವ ಸಮಾನ ಅಂಶಗಳಾಗಿ ಹುಡುಕಾಟ ನಡೆಯುತ್ತಿತ್ತು. ಆಗಿನ ಕಾಲಕ್ಕೆ ಇಡೀ ಕರ್ನಾಟಕವನ್ನು ತಲುಪುವ ಮಾಧ್ಯಮಗಳೆಂದರೆ ನಾಟಕ ಮತ್ತು ಸಿನಿಮಾ. ಇವನ್ನು ಹೊರತುಪಡಿಸಿದರೆ ಇಡಿಯಾಗಿ ಕರ್ನಾಟಕದ ಹಳ್ಳಿ ಹಳ್ಳಿಗಳಲ್ಲೂ ಇದ್ದ ಸಮಾನ ಅಂಶವೆಂದರೆ ಜಾನಪದ. ಜನಪದ ಕತೆ, ಗೀತೆ, ಗಾದೆ, ಒಗಟು, ಕಲೆ, ಆಚರಣೆ ಮುಂತಾದ ವಿಷಯಗಳಲ್ಲಿ ಪ್ರಾದೇಶಿಕ ಭಿನ್ನತೆಗಳಿದ್ದರೂ, ಸಾಮಾನ್ಯ ಜನರ ಅಭಿವ್ಯಕ್ತಿಯ ಪ್ರಧಾನಧಾರೆಯಂತೆ 'ಜಾನಪದ ಲೋಕ' ಅಧ್ಯಯನಕಾರರಿಗೆ ಕಂಡಿತು. ಇದರಿಂದಾಗಿ ಕನ್ನಡವನ್ನು ಭಾಷಿಕವಾಗಿ ಕಟ್ಟಲು, ಕರ್ನಾಟಕವೆಂಬ ಭೌಗೋಳಿಕ ಏಕತೆಯನ್ನು ತರಲು ಜನಪದವನ್ನು ಒಂದು ಸಾಂಸ್ಕೃತಿಕ ಶಕ್ತಿಯನ್ನಾಗಿ ಬಳಸಿಕೊಳ್ಳಲಾಯಿತು. ಇದು ಜನಪದ ಕುರಿತ ಆಲೋಚನ ಮಾದರಿಗಳನ್ನು ಪ್ರಭಾವಿಸಿತು. ಹಾಗಾಗಿ 'ಕನ್ನಡ', 'ಕರ್ನಾಟಕ'ವನ್ನು ಭಾವನಾತ್ಮಕವಾಗಿ ವೈಭವೀಕರಿಸುವ ನಿರ್ವಚನಗಳೇ ಜಾನಪದ ಅಧ್ಯಯನದ ವಿಶ್ಲೇಷಣೆಗಳಲ್ಲಿ ಬಳಕೆಯಾದವು.

ಎಚ್. ಎಂ. ಮಹೇಶ್ವರಯ್ಯ ಅವರು ಸಂಪಾದಿಸಿದ 'ಸಂಕ್ಷಿಪ್ತ ವಿವರಣಾತ್ಮಕ ಕನ್ನಡ ಜಾನಪದ ಗ್ರಂಥ ಸೂಚಿ'ಯನ್ನು ಅವಲೋಕಿಸಿದರೆ ೬೧ ಕೃತಿಗಳು 'ಕನ್ನಡ ಜಾನಪದ' ಎನ್ನುವ ಶೀರ್ಷಿಕೆಯಲ್ಲಿ, ೫೧ ಕೃತಿಗಳು 'ಕರ್ನಾಟಕ ಜಾನಪದ' ಎಂಬ ಶೀರ್ಷಿಕೆಯಲ್ಲಿ ಪ್ರಕಟವಾಗಿವೆ. ಈ ಕೃತಿಗಳಲ್ಲಿ 'ಕನ್ನಡ', 'ಕರ್ನಾಟಕ'






ಎನ್ನುವುದಕ್ಕೆ ಸ್ಪಷ್ಟವಾದ ವ್ಯಾಖ್ಯಾನಗಳೇನಿಲ್ಲ, ಬದಲಾಗಿ 'ಕನ್ನಡ' ಭಾಷೆಯನ್ನು ಪ್ರತಿನಿಧಿಸುವ, ಕರ್ನಾಟಕ ರಾಜ್ಯವನ್ನು ಪ್ರತಿನಿಧಿಸುವ ಕೃತಿಗಳಿವು. ಉದಾಹರಣೆಗೆ : ನಂ. ತಪಸ್ವೀಕುಮಾರ್ ಅವರ 'ಕನ್ನಡ ಜನಪದ ಒಗಟುಗಳ ಸಾಂಸ್ಕೃತಿಕ ಅಧ್ಯಯನ' (೧೯೭೯), ವೀರಣ್ಣ ದಂಡೆಯವರ 'ಕನ್ನಡ ಜಾನಪದ ಪ್ರಜ್ಞೆ' (೧೯೯೩), ಶ್ರೀಕಂಠ ಕೂಡಿಗೆ ಅವರ ಕನ್ನಡ ಲಾವಣಿಗಳು (೧೯೯೯), ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರ 'ಕರ್ನಾಟಕದ ಜನತೆಯ ಸಂಸ್ಕೃತಿ' (೧೯೭೩), ಹಂಪ ನಾಗರಾಜಯ್ಯ ಅವರ 'ಕರ್ನಾಟಕದ ಜಾತ್ರೆಗಳು' (೧೯೮೧) ಇತ್ಯಾದಿ. ಇವುಗಳೆಲ್ಲವೂ ಕರ್ನಾಟಕದ, ಕನ್ನಡದ ಭಿನ್ನ ಚಹರೆಗಳನ್ನು ಹಲವು ನೆಲೆಗಳಲ್ಲಿ ಪರಿಚಯಿಸುತ್ತವೆ. ಬೇಂದ್ರೆಯವರು 'ಗರತಿ ಹಾಡು' (೧೯೩೧) ಸಂಕಲನಕ್ಕೆ ಮುನ್ನುಡಿ ಬರೆಯುತ್ತ ಭಾಷಿಕವಾಗಿ ಕನ್ನಡವನ್ನು ನಿರ್ವಚಿಸುವ ಬಗೆ ಹೀಗಿದೆ : ''ಬೀದರ್ ಹೈದರಾಬಾದುಗಳ ಉತ್ತರದ ತುದಿಯಿಂದ ನೀಲಗಿರಿ, ಕೊಯಮತ್ತೂರಿನ ದಕ್ಷಿಣದ ತುದಿವರೆಗೆ ಹಬ್ಬಿರುವ ಕರ್ನಾಟಕವು ಒಂದೆಂಬುದಕ್ಕೆ ಒಂದು ನಿದರ್ಶನವು ಈ ಹಾಡುಗಳಲ್ಲಿದೆ. ಅಲ್ಪಸ್ವಲ್ಪ ಪಾಠ ಭೇದದಿಂದ ಇವುಗಳಲ್ಲಿ ಅರ್ಧಕ್ಕರ್ಧ ಹಾಡುಗಳು ಎಲ್ಲ ಕನ್ನಡ ಮನೆಗಳಲ್ಲಿ ಪರಡಿಕೊಂಡಿರಲು ಸಾಕು. ಈ ಜನಪದ ವೇದವೇ ಎಲ್ಲ ಕನ್ನಡಿಗರಿಗೂ ತಾಯ ಮೊಲೆ ಹಾಲು ಎಂಬುದು ಇದನ್ನೋದಿದವರ ಅನುಭವಕ್ಕೆ ಬಾರದೆ ಇರದು, ಈ ಅನುಭವದಿಂದ ಉಂಟಾಗುವ ಐಕ್ಯಭಾವವು ಅಂತಿಂತಹದಲ್ಲ. ಪ್ರಜಾಪ್ರಭುತ್ವದ ಈ ಕಾಲದಲ್ಲಿ ಜನಸಾಮಾನ್ಯರ ಹೃದಯದೊಳಗಿನ ಸುಖದ ಕನಸೆಂತಹದೆಂಬುದನ್ನು ಕಂಡುಕೊಳ್ಳಲು ಇದರಂತಹ ಬೇರೆ ಕೈಗನ್ನಡಿಯಿಲ್ಲ'' (ಸುವರ್ಣ ಜಾನಪದ ಸಂ : ೧, ಪು : ೧೦).

ಪ್ರಜಾಪ್ರಭುತ್ವದ ವ್ಯವಸ್ಥೆಯನ್ನು ಭದ್ರವಾಗಿಸಲು ಕನ್ನಡ ಭಾಷಿಕ ವಲಯವನ್ನು ಒಂದುಗೂಡಿಸುವ ಆಶಯವಾಗಿ ಜನಪದ ಸಾಹಿತ್ಯವನ್ನು ಬೇಂದ್ರೆಯವರು ನಿರ್ವಚಿಸುತ್ತಾರೆ. ದೇವುಡು, ಬೆಟಗೇರಿ ಕೃಷ್ಣಶರ್ಮ, ಅರ್ಚಕ ಬಿ. ರಂಗಸ್ವಾಮಿ, ಬಿ. ಎಸ್. ಗದ್ದಿಗಿಮಠ ಮುಂತಾದವರ ನಿಲುವೂ ಕೂಡ ಹೆಚ್ಚು ಕಡಿಮೆ ಇದೇ ಆಗಿತ್ತು. ಇಲ್ಲಿ ಬ್ರಿಟಿಷ್ ಆಡಳಿತದ ನಂತರ ನಮ್ಮದೇ ಆದ ಆಡಳಿತಾತ್ಮಕ ಸಂರಚನೆಗೆ ಹೀಗೆ ಭಾಷಿಕ ವಲಯವೊಂದು ಒಗ್ಗೂಡುವುದು ಆ ಕಾಲದ ಒತ್ತಡವೂ ಆದಂತಿದೆ.

ಕರ್ನಾಟಕದ ಹಲವು ಸಾಂಸ್ಕೃತಿಕ, ಭಾಷಿಕ ವೈವಿಧ್ಯಗಳನ್ನು 'ಕನ್ನಡ' ಭಾಷೆಯಲ್ಲಿ ತಿಳಿಯಲು ಅನುಕೂಲವಾದಂತೆ, ಕರ್ನಾಟಕದ ಭೌಗೋಳಿಕ ವ್ಯಾಪ್ತಿಯಲ್ಲಿ ಬರುವ ಹಲವು ಭಿನ್ನ ಭಾಷೆಗಳನ್ನು ಕನ್ನಡೀಕರಿಸಿ ಅವುಗಳ ಅನನ್ಯತೆಗೆ ಧಕ್ಕೆ ಒದಗಿ ಅನಾನುಕೂಲವಾಗಿಯೂ ಪರಿಣಮಿಸಿದೆ. 'ಕನ್ನಡ ಜಾನಪದ' ಎನ್ನುವಾಗ ಕಲ್ಪಿಸುವ 'ಕರ್ನಾಟಕ' ಕನ್ನಡದ್ದು. ಆದರೆ ವಾಸ್ತವವಾಗಿ ಹಾಗಿಲ್ಲ, ಕರ್ನಾಟಕ ಬಹುಸಂಖ್ಯಾತ ಕನ್ನಡಿಗರಿಂದಲೂ ಅಲ್ಪಸಂಖ್ಯಾತ ತುಳು, ಕೊಂಕಣಿ, ಲಂಬಾಣಿ, ಹಿಂದಿ, ಮರಾಠಿ, ಉರ್ದು, ತೆಲುಗು, ತಮಿಳು, ಬುಡಕಟ್ಟುಗಳ ಭಾಷೆಗಳು ಹೀಗೆ ಇತರೇ ಹಲವು ಭಾಷೆಗಳನ್ನು ಮಾತನಾಡುವವರೂ ಕರ್ನಾಟಕದಲ್ಲಿದ್ದಾರೆ. ಆದರೆ ಈ ಬಗೆಯ ಎಲ್ಲಾ ಅಲ್ಪಸಂಖ್ಯಾತ ಉಪಭಾಷಿಕರನ್ನು 'ಕನ್ನಡ'ದ ಪ್ರಮಾಣಿತ ಭಾಷೆಯಲ್ಲಿ ಪರಿಚಯಿಸುವ ಮತ್ತು ಅವರ ಜಾನಪದವನ್ನು ಕನ್ನಡದಲ್ಲೇ ನಿರ್ವಚಿಸುವ ಕ್ರಮ ಕರ್ನಾಟಕದಲ್ಲಿ ಹೆಚ್ಚು ಬಳಕೆಯಾಗಿದೆ. ಇದಕ್ಕೆ ಅಪವಾದವೆಂದರೆ ತುಳು ಭಾಷೆ. ಈ ಭಾಷೆಯ ಮೂಲಕವೇ ತುಳುವ ಸಂಸ್ಕೃತಿಯನ್ನು ಅಧ್ಯಯನ ಮಾಡುವ ಗಂಭೀರ ಸಂಶೋಧನೆಗಳು ನಡೆದಿವೆ. ಕಾರಣ 'ತುಳು' ಭಾಷಿಕ ವಿದ್ವಾಂಸರೇ ಅಧ್ಯಯನ ಕೈಗೊಂಡಿರುವುದು ಮತ್ತು ಪಾಶ್ಚಿಮಾತ್ಯ ವಿದ್ವಾಂಸರು 'ತುಳು' ಭಾಷೆಯ ಬಗೆಗೆ ಅಧ್ಯಯನ ಮಾಡಿರುವುದು.

ಹೀಗೆ ಬಹುಭಾಷಿಕತೆ, ಬಹು ಸಾಂಸ್ಕೃತಿಕ ವೈವಿಧ್ಯತೆಗಳನ್ನು 'ಕನ್ನಡ ಜಾನಪದ' ಎನ್ನುವ ನೆಲೆಯಲ್ಲಿ ತಿಳಿಯಲಾಗಿದೆ. ಇಲ್ಲಿ 'ಭಾಷೆ'ಯೇ ಪ್ರಧಾನ ಅಂಶ ಎಂದು ಮೇಲುನೋಟಕ್ಕೆ ಕಂಡರೂ, ಈ ಭಾಷೆಯನ್ನು ಅರ್ಥೈಸಿಕೊಂಡಿರುವ ಬಗೆ ಮಾತ್ರ ಬಹು ಆಯಾಮದ ನೆಲೆಯಲ್ಲಿ. ಹಲವು ಭಾಷೆ ಮತ್ತು ಸಂಸ್ಕೃತಿಗಳು ಇರುವ ಕರ್ನಾಟಕದಲ್ಲೂ ಯಾವ ಒತ್ತಾಯವಿಲ್ಲದೆಯೂ ಕನ್ನಡ ಭಾಷೆ ಬಹುಪಾಲು ಎಲ್ಲರೂ ಮಾತನಾಡುವ ಭಾಷೆಯಾಗಿದೆ. ಕನ್ನಡ ಬಲ್ಲವ ಕೊಡವ, ತುಳು, ಕೊಂಕಣಿ, ಉರ್ದುಗಳನ್ನು ಮಾತನಾಡದಿದ್ದರೂ, ಈ ಭಾಷೆಗಳನ್ನು ಮಾತನಾಡುವ ಎಲ್ಲರೂ ಸಾಮಾನ್ಯವಾಗಿ ಕನ್ನಡವನ್ನು ಮಾತನಾಡುತ್ತಾರೆ. ಇದಕ್ಕೆ ಕಾರಣ ಈ ನಾಡಿನಲ್ಲಿ ಈ ಎಲ್ಲಾ ಜನರ ಬದುಕಿನ ಅಗತ್ಯಗಳ ಪೂರೈಕೆಗೆ ಕನ್ನಡ ಅಗತ್ಯವೆಂಬುದೇ ಆಗಿದೆ. ಹೀಗೆ ಭಾಷಿಕವಾಗಿ 'ಕನ್ನಡ'ದ ಅನನ್ಯತೆಯನ್ನು ಭಿನ್ನ ನೆಲೆಗಳಲ್ಲಿ ಗುರುತಿಸಬಹುದು.

ಜಾನಪದ ವಿದ್ವಾಂಸರಾದ ವಿಲಿಯಂ ಮಾಡ್ತ, ಎಸ್. ಎಸ್. ಅಂಗಡಿ, ಎಚ್. ಎಂ. ಮಹೇಶ್ವರಯ್ಯ, ಎ. ಮುರಿಗೆಪ್ಪ ಮುಂತಾದವರು ಜಾನಪದವನ್ನು ಭಾಷಿಕವಾಗಿ ಅಧ್ಯಯನ ಮಾಡಿದ್ದಾರೆ. ಆದರೆ ಇವು ಶಿಷ್ಟಭಾಷೆಯ ಅಧ್ಯಯನದ ಚೌಕಟ್ಟುಗಳಲ್ಲೇ ಇರುವುದು ತೊಡಕಾಗಿದೆ. ಚಂದ್ರಶೇಖರ ಕಂಬಾರ, ದ. ರಾ. ಬೇಂದ್ರೆ, ಗಿರೀಶ್ ಕಾರ್ನಾಡ್ ಅಂತಹವರು ಜಾನಪದವನ್ನು ತಮ್ಮ ಅಭಿವ್ಯಕ್ತಿಯ ಭಾಷೆ ಎಂದುಕೊಂಡರು. ಆ ಮೂಲಕ ಜಾನಪದವನ್ನೇ ಒಂದು 'ಭಾಷೆ'ಯನ್ನಾಗಿ ವ್ಯಾಪಕಾರ್ಥದಲ್ಲಿ ಬಳಸಿದರು. ಇಂತಹ ಚಿಂತನೆಗಳು ಭಾಷಿಕವಾಗಿ ಕನ್ನಡದ ಅನನ್ಯತೆಯನ್ನು ಬಹುನೆಲೆಯಲ್ಲಿ ನಿರ್ವಚಿಸಿವೆ.

ಕರ್ನಾಟಕದ ಏಕೀಕರಣದ ಸಂದರ್ಭದಲ್ಲಿ 'ಕನ್ನಡ' ಭಾಷೆ ಮತ್ತು ಕರ್ನಾಟಕದ ಗಡಿಗಳ ಉಲ್ಲೇಖಗಳನ್ನು ಸಾಹಿತ್ಯ ಕೃತಿಗಳಲ್ಲಿ ಹುಡುಕತೊಡಗಿದರು. ಅಂತೆಯೇ ಕನ್ನಡದ ಬಹುಪಾಲು ಸಾಹಿತಿಗಳು ಕನ್ನಡಿಗರ ಶೌರ್ಯ, ಹಿರಿಮೆ, ನಾಡಿನ ವಿಸ್ತಾರಗಳ ಉಲ್ಲೇಖ ಒಳಗೊಂಡ ನಾಡಾಭಿಮಾನವನ್ನು ಹುಟ್ಟಿಸುವ ಗೀತೆಗಳನ್ನು ರಚಿಸತೊಡಗಿದರು. ಅದೇ ಹೊತ್ತಿಗೆ ಕನ್ನಡ ಭಾಷೆಯ ಅನನ್ಯತೆಯ ಭಿನ್ನಮುಖವಾಗಿ ಜಾನಪದ ಸಾಹಿತ್ಯವನ್ನು ವಿಶ್ಲೇಷಿಸತೊಡಗಿದರು. ವಿಪರ್ಯಾಸವೆಂದರೆ ಜಾನಪದ ಸಂಗ್ರಹಗಳಲ್ಲಿ ಒಂದು 'ಕನ್ನಡ'ವಿರದೆ ಹಲವು ಕನ್ನಡಗಳಿದ್ದವು. ಇನ್ನು ಜನಪದ ಸಾಹಿತ್ಯದಲ್ಲಿ 'ಕನ್ನಡ'ವೆಂತಾಗಲಿ, ಕರ್ನಾಟಕವೆಂತಾಗಲಿ ಉಲ್ಲೇಖಗಳೇ ಇರಲಿಲ್ಲ, ಕಾರಣ ಜಾನಪದ ಸಾಹಿತ್ಯ ಪ್ರಾದೇಶಿಕ ಸತ್ವದ ನೆಲೆಯಲ್ಲಿ ಹುಟ್ಟಿದ್ದೇ ಹೊರತು, ಬೃಹತ್ ಕರ್ನಾಟಕದ ವ್ಯಾಪ್ತಿಯಲ್ಲಿ ಅಲ್ಲ. ಹೀಗೆ ಅನೇಕತೆಯನ್ನು ಒಳಗೊಂಡ ಜನಪದ ಭಾಷೆಯನ್ನು 'ಕನ್ನಡ' ಎನ್ನುವ ಏಕಭಾಷೆಯನ್ನು ವಿವರಿಸಲು ಬಳಸಿಕೊಳ್ಳಲಾಯಿತು. ಈಚೆಗೆ ಪ್ರಕಟವಾದ ಕೆ. ವಿ. ನಾರಾಯಣ ಅವರ 'ತೊಂಡು ಮೇವು' ಸಂಪುಟಗಳಲ್ಲಿ ಭಾಷೆ ಮತ್ತು ಜಾನಪದದ ಬಗೆಗಿನ ತಿಳುವಳಿಕೆಯನ್ನು ಭಿನ್ನವಾಗಿ ವಿಸ್ತರಿಸುವ ಒಳನೋಟಗಳ ವಿಶ್ಲೇಷಣೆಗಳಿವೆ. ಈ ವಿಶ್ಲೇಷಣೆಗಳು ಕನ್ನಡ ಜಾನಪದ ಅಧ್ಯಯನದ ಒಳ ಪ್ರವೇಶಿಸಬೇಕಿದೆ. ರಹಮತ್ ತರೀಕೆರೆ ಅವರು ನುಡಿಸಂಕರ ಸಾಹಿತ್ಯ ಕೃತಿಯಲ್ಲಿ ಜಾನಪದ ಗೀತೆ, ಹಾಡು, ನಾಟಕ ಮುಂತಾದುವುಗಳಲ್ಲಿ ನಡೆಯ



ಬಹುದಾದ ನುಡಿಸಂಕರದ ಬಗ್ಗೆ ಹೊಸ ಆಲೋಚನೆಯನ್ನು ಮಂಡಿಸಿದ್ದಾರೆ. ಈ ತಿಳುವಳಿಕೆಯ ಮೂಲಕ ಜಾನಪದ ಸಾಹಿತ್ಯದಲ್ಲಿನ ನುಡಿಸಂಕರಗಳನ್ನು ಗುರುತಿಸುವ ಮೂಲಕ ಜಾನಪದ ಸಾಹಿತ್ಯದ ವಿಶ್ಲೇಷಣೆಗೆ ಬೇರೊಂದು ಮಗ್ಗಲನ್ನು ತೆರೆಯುವ ಸಾಧ್ಯತೆಗಳಿವೆ.

**ಭೌಗೋಳಿಕ ಆಯಾಮ**

ರಾಜಕೀಯವಾಗಿ ನಿಗದಿಪಡಿಸಿದ ಕರ್ನಾಟಕದ ಗಡಿಯೊಳಗಿನ ಸಾಂಸ್ಕೃತಿಕ ವೈವಿಧ್ಯಗಳನ್ನು ಗುರುತಿಸುವ ನೆಲೆಯನ್ನು ಭೌಗೋಳಿಕ ಆಯಾಮ ಎಂದು ತಿಳಿಯಲಾಗಿದೆ. ಸಾಂಸ್ಕೃತಿಕವಾಗಿ ಇಂತಹ ಗಡಿಗಳ ಚೌಕಟ್ಟು ಇರುವುದಿಲ್ಲ. ಹಾಗಿದ್ದೂ ರಾಜಕೀಯ ಗಡಿಗಳ ಚೌಕಟ್ಟಿಗೆ ಸಾಂಸ್ಕೃತಿಕ ವಿವರಗಳನ್ನು ಜೋಡಿಸುವುದು ಬಹುದೊಡ್ಡ ತೊಡಕು. ಈ ತೊಡಕು ಕರ್ನಾಟಕ ಜಾನಪದ ಎಂದು ವಿವರಿಸಲು ಹೊರಟ ವಿಶ್ಲೇಷಣೆ ಗಳಲ್ಲಿಯೂ ಮುಂದುವರಿದಿದೆ. ಕರ್ನಾಟಕದ ಜನಪದ ಕಥೆಗಳು, ಕರ್ನಾಟಕದ ಗಾದೆಗಳು, ಕರ್ನಾಟಕದ ಜನಪದ ಮಹಾಕಾವ್ಯಗಳು, ಈ ಬಗೆಯ ಅಧ್ಯಯನಗಳು ಕರ್ನಾಟಕದ ಹಲವು ಭಿನ್ನತೆಗಳನ್ನು ಒಂದೆಡೆ ಕ್ರೋಢೀಕರಿಸಿಯೇ 'ಕರ್ನಾಟಕ'ದ ಅನನ್ಯತೆಯನ್ನು ಗಟ್ಟಿಗೊಳಿಸಲು ಪ್ರಯತ್ನ ನಡೆಯುತ್ತಿರುತ್ತದೆ. ಭೌಗೋಳಿಕ ಭಿನ್ನತೆಗಳನ್ನು ವಿವರಿಸುತ್ತಲೇ 'ಕರ್ನಾಟಕ'ದ ಕಲ್ಪನೆಯನ್ನು ಕಟ್ಟಿಕೊಳ್ಳುವ ಕ್ರಮ ಜಾನಪದ ಅಧ್ಯಯನಗಳಲ್ಲಿದೆ. ಆದರೆ ಜಾಗತೀಕರಣದ ಈ ಹೊತ್ತಲ್ಲಿ ಇಂತಹ ಭಿನ್ನತೆಗಳನ್ನು ಮರೆಮಾಚಿಸಿ ಏಕೀಕೃತ ಕರ್ನಾಟಕವನ್ನು ಕಟ್ಟಿಕೊಳ್ಳುವ ರಾಜಕಾರಣವೂ ನಡೆಯುತ್ತಿದೆ. ಯು. ಆರ್. ಅನಂತಮೂರ್ತಿಯವರು ಹೇಳುವಂತೆ : ''ಭಾರತವು ಹಲವು ರಾಜ್ಯಗಳಂತೆ ಕರ್ನಾಟಕವೂ ಒಂದು ಪುಟ್ಟ ವಿಶ್ವವೇ. ಹಲವು ಭಾಷೆ ಹಲವು ಸಂಸ್ಕೃತಿಗಳ ಸಹಬಾಳ್ವೆಗೆ ಈ ನಾಡಿನಲ್ಲಿ ಅವಕಾಶವಿದೆ ಎಂಬ ದೃಷ್ಟಿಯಿದೆ. ಇದೊಂದು ವಿಶಿಷ್ಟ ತೊಡಕು ಎಂದು ಕಾಣುವ ಧೋರಣೆ ಸಾಮ್ರಾಜ್ಯವಾದಿಯದು. ಆದರೆ ಈ ಹಲವು ಭಾಷೆ, ಸಂಸ್ಕೃತಿಗಳ ಸಹಜೀವನವನ್ನು ಸಮೃದ್ಧಿಯ ವರವೆಂದು ಕಾಣುವ ದೃಷ್ಟಿ ಪ್ರಜಾಸತ್ತಾತ್ಮಕವಾದಿಯದು. ವೈವಿಧ್ಯವೆಂದರೆ ಸಾಮ್ರಾಜ್ಯಶಾಹಿಗಳು ಅಸಹನೆ ಪಡುತ್ತಾರೆ. ಒಂದರ ಅಧೀನದಲ್ಲಿ ಎಲ್ಲವೂ ಇರಬೇಕೆಂದು ಆಸೆ ಪಡುತ್ತಾರೆ. ಆದರೆ ಪ್ರಜಾಸತ್ತೆಯನ್ನು ನಂಬುವವರು ವಿಕೇಂದ್ರೀಕರಣವಾದಿಗಳಾಗಿ ಇರುತ್ತಾರೆ. ಜನಸಮುದಾಯದಲ್ಲಿ ವಿಶಿಷ್ಟವಾದದ್ದೆಲ್ಲವೂ ವಿಕಸನಗೊಳ್ಳುತ್ತಾ ಹೋಗುವುದನ್ನು ಸ್ವಾಗತಿಸುತ್ತಾರೆ'' (ಪ್ರಜ್ಞೆ ಮತ್ತು ಪರಿಸರ, ಪು : ೩೪೧. ಅ).



ಸಾರಿ ಸಾರ್ ! ನೀವು ಕೊಟ್ಟ ದುಡ್ಡಿಗೆ
ಪೆಟ್ರೋಲ್ ಹಾಕೋಕೆ ಆಗಲ್ಲ

ಬಹುಶಃ ಜನಪದ ಅಧ್ಯಯನಗಳಲ್ಲಿ ಕಟ್ಟಿಕೊಳ್ಳುವ ಕರ್ನಾಟಕದ ಭೌಗೋಳಿಕ ಎಲ್ಲೆಯ ವಿವರ ಕೂಡ ಪ್ರಜಾಸತ್ತಾತ್ಮಕ ನೆಲೆಯಲ್ಲಿಯೇ ಇದೆ. ಆದರೆ ಇಲ್ಲಿನ ವಿಶ್ಲೇಷಣೆಗಳು ಮಾತ್ರ ಹೆಚ್ಚು ಸೂಕ್ಷ್ಮವಾಗಿರದೆ ಒರಟಾಗಿವೆ. ಜನಪದ ವಿದ್ವಾಂಸರಾದ ಡಿ. ಕೆ. ರಾಜೇಂದ್ರ ಅವರು ಕರ್ನಾಟಕ ಜಾನಪದವನ್ನು ನಿರ್ವಚಿಸುವುದು ಹೀಗೆ : ''ಕರ್ನಾಟಕ ಜಾನಪದವನ್ನು ಈ ದೃಷ್ಟಿಯಿಂದ ಪರಿಶೀಲಿಸುವುದಾದರೆ, ಅದರ ಬಾಹುಳ್ಯ ಬಹು ವಿಸ್ತೃತವಾದದ್ದು, ವಿಭಿನ್ನ ಪ್ರಾದೇಶಿಕ ವೈಶಿಷ್ಟ್ಯಗಳಿಂದ ಕೂಡಿದ ಕರ್ನಾಟಕ ವಿವಿಧ ಬಗೆಯ ವೃತ್ತಿಯ, ಜಾತಿ ಮತಗಳ, ಸಂಪ್ರದಾಯ ಆಚರಣೆಗಳ, ಉಡುಗೆ ತೊಡುಗೆ, ಊಟೋಪಚಾರಗಳ ಹಾಗೂ ಸಾಹಿತ್ಯ ಮತ್ತು ಕಲಾ ಸಂಪ್ರದಾಯಗಳನ್ನು ಒಳಗೊಂಡು ಶ್ರೀಮಂತಗೊಂಡದ್ದು, ಪ್ರಾದೇಶಿಕವಾಗಿ ವಿಂಗಡಿಸಿಕೊಂಡು ಅದನ್ನು ಪರಿಶೀಲಿಸ ಬಹುದಾದರೂ ಆಯಾ ಭಾಗದ ವೈಶಿಷ್ಟ್ಯ ಎದ್ದು ಕಾಣುತ್ತದೆ. ಸುಮಾರು ಒಂದು ಲಕ್ಷ ತೊಂಬತ್ತೆರಡು ಸಾವಿರ ಚದರ ಕಿ.ಮೀಟರ್‌ಗಳಷ್ಟು ಹರಹುಳ್ಳ ಈ ಪ್ರದೇಶದಲ್ಲಿ ವಾಸಿಸುವ ಜನರ ಸಂಖ್ಯೆ ಸುಮಾರು ನಾಲ್ಕು ಕೋಟಿಗೂ ಮಿಗಿಲು ಎಂದು ಗುರುತಿಸಲಾಗಿದೆ. ಇಷ್ಟೊಂದು ವ್ಯಾಪಕವಾದ ಹಾಗೂ ಬಹುಸಂಖ್ಯೆಯ ಪ್ರದೇಶದ ಜಾನಪದ ನಿಸ್ಸಂಶಯವಾಗಿ ಅಭೂತಪೂರ್ವವಾದುದು ಎಂಬುದರಲ್ಲಿ ಎರಡು ಮಾತಿಲ್ಲ.'' (ಜಾನಪದ ಭಾರತಿ, (ಸಂ) ನಲ್ಲೂರು ಪ್ರಸಾದ್, ಪು : ೨.) ಎನ್ನುತ್ತಾರೆ. ಹೀಗೆ ಕರ್ನಾಟಕ ಜಾನಪದವನ್ನು ಅಖಂಡವಾಗಿ ನಿರ್ವಚಿಸುವ ಮಾದರಿ ಏಕೀಕರಣದ ೬೦ರ ದಶಕದ ನಂತರ ಹೆಚ್ಚಾಗಿತ್ತು. ಇದು ಕರ್ನಾಟಕದ ಜಾನಪದವನ್ನು ಬೇರೆ ಬೇರೆ ನೆಲೆಗಳಲ್ಲಿ ಅರ್ಥ ಮಾಡಿಕೊಳ್ಳಲು ಸಹಕಾರಿಯೂ ಆಯಿತು. ಹಾಗೆಯೇ ಈ ಮಾದರಿ ಆ ಹೊತ್ತಿನ ಅಗತ್ಯದಂತೆಯೂ ಕಾಣುತ್ತದೆ. ಇಂತಹ ಅಧ್ಯಯನಗಳು ಹೆಚ್ಚಾಗಿ ಬೀಸುಹೇಳಿಕೆಗಳಿಂದ ಕೂಡಿರುತ್ತಿದ್ದವು.

ಜೀಶಂಪ, ವಿಲಿಯಂ ಮಾಡ್ತ ಅವರು ಸಂಪಾದಿಸಿದ 'ಕರ್ನಾಟಕ ಜಾನಪದ' (೧೯೮೯) ಕೃತಿಯೂ ಈ ಬಗೆಯ ಕರ್ನಾಟಕ ಭೂ ಪ್ರದೇಶದ ಜನಸಂಸ್ಕೃತಿಯ ಹಲವು ಆಯಾಮಗಳನ್ನು ಪರಿಚಯಿಸುತ್ತದೆ. ಕನ್ನಡ ವಿಶ್ವವಿದ್ಯಾಲಯದ ಜಾನಪದ ವಿಭಾಗವು ಹೊರತರುತ್ತಿರುವ 'ಜಾನಪದ ಕರ್ನಾಟಕ', ಜಾನಪದ ಅಧ್ಯಯನಕ್ಕೆಂದು ತೆರೆದ 'ಕರ್ನಾಟಕ ಜಾನಪದ ಅಕಾಡೆಮಿ', 'ಕರ್ನಾಟಕ ಜಾನಪದ ಪರಿಷತ್ತು' ಹೀಗೆ ಕರ್ನಾಟಕದ ಭೂಪ್ರದೇಶವನ್ನು, ಅದರೊಳಗಿನ ಬಹು ಸಂಸ್ಕೃತಿಯನ್ನು ಪ್ರತಿನಿಧಿಸುವ ಮತ್ತು ಕರ್ನಾಟಕದ ಅನನ್ಯತೆಯನ್ನು ಗಟ್ಟಿಗೊಳಿಸುವ ನೆಲೆಯಲ್ಲಿ ಜಾನಪದ ಅಧ್ಯಯನಗಳು ನಡೆದವು. ಇನ್ನು ಕರ್ನಾಟಕವನ್ನು ಹೊರತುಪಡಿಸಿ ಬೇರೆ ಬೇರೆ ರಾಜ್ಯಗಳಿಗೆ, ವಿದೇಶಿ ಜಾನಪದ ವಿದ್ವಾಂಸರಿಗೆ ಕರ್ನಾಟಕದ ಸಾಂಸ್ಕೃತಿಕ ವೈವಿಧ್ಯವನ್ನು ಪರಿಚಯಿಸುವ ನೆಲೆಯೂ 'ಕರ್ನಾಟಕ ಜಾನಪದ' ಎಂಬ ಚೌಕಟ್ಟಿನ ಅಧ್ಯಯನಗಳ ಹಿಂದಿನ ಪ್ರೇರಣೆಯಾಗಿತ್ತು. ಜೀಶಂಪ ಅವರು 'ಕರ್ನಾಟಕ ಜಾನಪದ' ಕೃತಿಗೆ ಮುನ್ನುಡಿ ಬರೆಯುತ್ತ, ''...ಇಷ್ಟೆಲ್ಲಾ ಜಾನಪದ ಚಟುವಟಿಕೆಗಳು ಕರ್ನಾಟಕದಲ್ಲಿ ನಡೆದಿದ್ದರೂ ಸರಿಯಾದ ರೀತಿಯಲ್ಲಿ ಇದರ ಪ್ರಚಾರ ಹೊರಜಗತ್ತಿನ ದೃಷ್ಟಿಯಿಂದ ನಡೆದಿಲ್ಲವೆಂದೇ ಹೇಳಬೇಕು. ಕರ್ನಾಟಕದಲ್ಲಿ ಏನು ನಡೆದಿದೆ ಎಂಬುದು ವಿಶ್ವ ಜಾನಪದ ವೇದಿಕೆಗೆ ತಿಳಿದರೆ ಜಗತ್ತಿನ ವಿದ್ವಾಂಸರ ದೃಷ್ಟಿ ಇತ್ತ ಹರಿಯುತ್ತದೆ'' (ಕರ್ನಾಟಕ ಜಾನಪದ, ಪು: xiii) ಎನ್ನುತ್ತಾರೆ. ಇದರ ಭಾಗವಾಗಿಯೇ ಕರ್ನಾಟಕ ಜಾನಪದದ ಬಗ್ಗೆ ಕೃಷ್ಣಮೂರ್ತಿ ಹನೂರು ಇಂಗ್ಲಿಷಿನಲ್ಲಿ ಕೃತಿಯೊಂದನ್ನು ಸಂಪಾದಿಸಿದರು. ಹೀಗೆ ಬೇರೆ ರಾಜ್ಯಗಳಿಗೆ, ದೇಶಗಳಿಗೆ ಕರ್ನಾಟಕವನ್ನು ಪರಿಚಯಿಸಲು ಅಖಂಡ ಕರ್ನಾಟಕದ ಅನನ್ಯತೆಗಳನ್ನು ಜನಪ್ರಿಯಗೊಳಿಸುವ ಧೋರಣೆ ಇಂತಹ ಅಧ್ಯಯನಗಳ ಹಿಂದಿದೆ. ಇದರಲ್ಲೂ ಮೇಲ್ವರ್ಗದ ಜನಪದ ಕಲೆಗಳೇ ಕರ್ನಾಟಕದ ಅನನ್ಯತೆಯನ್ನು ಬಿಂಬಿಸಲು ಬಳಕೆಯಾದದ್ದೊಂದು ವಿಪರ್ಯಾಸ. ಯಕ್ಷಗಾನವನ್ನೂ ಕರ್ನಾಟಕದ ಅನನ್ಯ ಕಲೆ ಎಂದು ಬಿಂಬಿಸಲಾಯಿತು. ಶಿವರಾಮ ಕಾರಂತರು ಯಕ್ಷಗಾನವನ್ನು ಕುರಿತ ಪ್ರದರ್ಶನ ಮತ್ತು ಅಧ್ಯಯನದಲ್ಲಿ ಪಾಲ್ಗೊಂಡದ್ದೂ ಒಂದು ಕಾರಣವಾಯಿತು. ವೀರಗಾಸೆ, ಪೂಜಾಕುಣಿತ ಮುಂತಾದ ಮೇಲ್ವರ್ಗದ, ಉತ್ತಮ ಜಾತಿಯವರ ಜನಪದ ಕಲೆ ಸಂಪ್ರದಾಯಗಳು ಕರ್ನಾಟಕದ ಅನನ್ಯತೆಯನ್ನು ಬಿಂಬಿಸಲು ಬಳಕೆಯಾದವು. ದಲಿತರು ಬಳಸುವ ಹಲಗೆ, ಮಾರಿಹಬ್ಬ ಮುಂತಾದವು ಕರ್ನಾಟಕದ ಅನನ್ಯತೆಯನ್ನು ಗುರುತಿಸುವಾಗ ಮೇಲ್ಮಟ್ಟದ ಚರ್ಚೆಗೆ ಬರಲಿಲ್ಲ.

**ಕನ್ನಡತ್ವದ ಆಯಾಮ**

ಕನ್ನಡ ಭಾಷೆ ಮತ್ತು ಕರ್ನಾಟಕದ ಭೌಗೋಳಿಕತೆ ಇವೆರಡನ್ನೂ ಒಳಗೊಂಡ ಕನ್ನಡತ್ವದ ನಿರ್ವಚನದ ಭಾಗವಾಗಿ ಜಾನಪದ ಅಧ್ಯಯನಗಳ ವಿಶ್ಲೇಷಣೆಗಳನ್ನು ಪರಿಶೀಲಿಸಬಹುದು. ಇದೊಂದು ಹೊಸ ವ್ಯಕ್ತಿತ್ವದ ಕೃತಕ ಚಹರೆ. ಇಲ್ಲಿ ಕನ್ನಡ, ಕರ್ನಾಟಕ ಮತ್ತು ಕನ್ನಡಿಗ ಎಂಬ ಮೂರು ಪರಿಕಲ್ಪನೆಗಳು ಬೆರೆತ ಒಂದು ವ್ಯಕ್ತಿತ್ವವನ್ನೇ ಕನ್ನಡತ್ವದ ಜೊತೆ ಸಮೀಕರಿಸಲಾಯಿತು. ಹಾಗೆ ನೋಡಿದರೆ ಈ ಮೂರು ಬೆರೆಯುವುದು ಕಷ್ಟ. ಇದನ್ನು ಕೆ. ವಿ. ನಾರಾಯಣ ಅವರು ಸೂಕ್ಷ್ಮವಾಗಿ ಹೀಗೆ ವಿವರಿಸುತ್ತಾರೆ : ''ಕನ್ನಡ, ಕರ್ನಾಟಕ ಮತ್ತು ಕನ್ನಡಿಗ ಎಂಬ ಈ ಮೂರು ಪರಿಕಲ್ಪನೆಗಳು ಪರಸ್ಪರ

ಬೆರೆತುಕೊಳ್ಳುವುದು ಕಷ್ಟವೇ. ಕನ್ನಡಿಗರು ಕನ್ನಡವಲ್ಲದೆ ಇತರ ಭಾಷೆಯನ್ನು ಕಲಿತು ಮಾತನಾಡಬಹುದು. ಅಲ್ಲದೆ ಬೇರೆ ದೇಶದಲ್ಲಿ ಪ್ರದೇಶದಲ್ಲಿ ವಾಸ ಮಾಡಬಹುದು. ಕನ್ನಡ ಮಾತ್ರ ಕರ್ನಾಟಕದ ಭಾಷೆಯಾಗಿ ಪರಿಗಣಿತವಾಗಲಾರದು. ಈಗಾಗಲೇ ಗಮನಿಸಿದಂತೆ ಆ ಭೂಪ್ರದೇಶದಲ್ಲಿ ಹಲವು ಭಾಷೆಗಳನ್ನು ಮಾತನಾಡುವ ಜನರು ಇರುತ್ತಾರೆ. ಸದ್ಯ ಮೇಲೆ ಹೇಳಿದ ರಾಜಕೀಯ ನಿರ್ಧಾರದಂತೆ ಹೆಚ್ಚು ಸ್ಥಿರವಾಗಿರುವುದು ಭೌಗೋಳಿಕವಾದ ಪರಿಕಲ್ಪನೆ. ಅದು ಕರ್ನಾಟಕದ ಉಳಿದೆರಡು ಪರಿಕಲ್ಪನೆಗಳು ಸದಾ ಚಲನಶೀಲ, ಅವು ದೇಶಬದ್ಧವಲ್ಲ'' (ಕನ್ನಡ ಜಗತ್ತು : ಅರ್ಧಶತಮಾನ, ಪು : ೭) ಹೀಗೆ ಕನ್ನಡತ್ವ ಎನ್ನುವ ಹೊಸ ಬಗೆಯ ವ್ಯಕ್ತಿತ್ವವೂ ಗಟ್ಟಿಯಾಗಿ ನಿಲ್ಲುವಂತದ್ದಲ್ಲ. ಈ ವ್ಯಕ್ತಿತ್ವಕ್ಕೆ ಆರೋಪಿಸುವ ಜಾನಪದ ಲಕ್ಷಣಗಳಿಗೂ ಇಂತಹದ್ದೇ ಮಿತಿಯಿದೆ.

ಕನ್ನಡ ರಾಷ್ಟ್ರೀಯತೆಯ ಬಗ್ಗೆ ಸಂಶೋಧನೆ ಮಾಡಿದ ಬಂಜಗೆರೆ ಜಯಪ್ರಕಾಶ್ ಅವರು ಕನ್ನಡತ್ವವನ್ನು ನಿರೂಪಿಸುವ ಕ್ರಮದಲ್ಲಿಯೇ ಜಾನಪದದ ಅಂತರ್ಗತ ಸ್ಥಿತಿಯನ್ನು ಗುರುತಿಸಲು ಸಾಧ್ಯ. ''ಕನ್ನಡತ್ವವೆಂಬುದು ಕೇವಲ ಒಂದು ಸಾಮಾಜಿಕ ಅಂಶವಲ್ಲ, ಅಥವಾ ಸಾಂಸ್ಕೃತಿಕ ಚಿಹ್ನೆ ಮಾತ್ರವಲ್ಲ. ಅದೊಂದು ಅಖಂಡವಾದ ಜನಜೀವನದ ಪ್ರತೀಕ, ಅದರೊಳಗೆ ರಾಜಕೀಯವಿದೆ, ಆರ್ಥಿಕತೆ ಇದೆ, ಇತಿಹಾಸವಿದೆ, ಸಾಹಿತ್ಯ, ಸಾಂಸ್ಕೃತಿಕತೆ ಇತ್ಯಾದಿ ಎಲ್ಲವೂ ಇವೆ. ಒಂದು ಸಮಾಜದ ಉತ್ಪಾದನಾ ವಿನ್ಯಾಸದೊಳಗೆ ಒಂದು ಪಂಗಡವಾಗಿ ಏರ್ಪಟ್ಟು ಕಡೆಗೆ ಒಂದು ಸಾಂಸ್ಕೃತಿಕ ಗುರುತಿಸಿಕೊಳ್ಳುವಿಕೆಯನ್ನು ರೂಢಿಸಿಕೊಂಡ 'ಜಾತಿ' ಎಂಬುದು ಹೇಗೆ ಒಂದು ನಿರ್ದಿಷ್ಟ ಜನಸಮುದಾಯದ ಸಾಮಾಜಿಕ ಸಂಘಟೀಕರಣವೋ, ಕನ್ನಡತನವೆಂಬುದೂ ಹಾಗೆಯೇ ಒಂದು ಜನ ಸಮುದಾಯದ ಪಂಗಡೀಕರಣ.'' (ಕನ್ನಡ ರಾಷ್ಟ್ರೀಯತೆ, ಪು : ೩) ಹೀಗೆ ಜಾತಿಯ 'ಸಂಘಟೀಕರಣ' ಕನ್ನಡತನದ ಜನಸಮುದಾಯದ ಪಂಗಡೀಕರಣ ಆಗುವಲ್ಲಿಯೂ ಜನಪದ ಸಾಂಸ್ಕೃತಿಕ ಲೋಕದ ಒಳಗೊಳ್ಳುವಿಕೆ ಬಹಳ ಮುಖ್ಯವಾದ ಸಂಗತಿ.

ಬೆಟಗೇರಿ ಕೃಷ್ಣಶರ್ಮರು, ''ನಮ್ಮ ನಾಡಿನ ಜನತೆ ಸಂಪ್ರದಾಯ ನಿಷ್ಠೆ, ಮತಧರ್ಮ ನಿಷ್ಠೆ, ಜಾತಿ - ಕುಲ ನಿಷ್ಠೆ, ಪ್ರಾದೇಶಿಕ ಅಭಿಮಾನ ಇವುಗಳ ಮೂಲಕ ಸಣ್ಣ ಸಣ್ಣ ವರ್ತುಲಗಳನ್ನು ಮಾಡಿಕೊಂಡಿದ್ದು ಆ ವರ್ತುಲಗಳನ್ನೇ ತಮ್ಮ ತಮ್ಮ ಲೋಕವೆಂದು ಭಾವಿಸಿ ಹೃದಯ, ಬುದ್ಧಿಯನ್ನು ಸಂಕುಚಿತಗೊಳಿಸಿಕೊಂಡಿತ್ತು. ಇಂದಿನ ರಾಜಕೀಯ ಪ್ರಜ್ಞೆ ಮತ್ತು ವಿಜ್ಞಾನದ ಅಧ್ಯಯನದ ಮೂಲಕ ವಿಶಾಲ ದೃಷ್ಟಿ, ಮತ್ತು ಮನೋವೈಕಲ್ಯ ಬೆಳೆಸಿಕೊಳ್ಳಬೇಕಾಗಿದೆ'' (ಸುವರ್ಣ ಜಾನಪದ, ಸಂ-೧, ಪು : ೫೪) ಎನ್ನುತ್ತಾರೆ. ಬಹುಶಃ ಕೃಷ್ಣಶರ್ಮರ ಮಾತುಗಳು 'ಕನ್ನಡತ್ವದ'ದಂತಹ ಹೊಸ ಅನನ್ಯತೆ ಕಟ್ಟಿಕೊಳ್ಳುವ ಕಡೆಗೆ ಮುಖ ಮಾಡಿವೆ. ೬೦-೭೦ರ ದಶಕದ ಬಹುಪಾಲು ಜಾನಪದ ವಿಶ್ಲೇಷಣೆಗಳು ಹೀಗೆ ಕನ್ನಡತ್ವದ ಅನನ್ಯತೆಯನ್ನು ಕಟ್ಟಿಕೊಳ್ಳಲು ಪೂರಕವಾದ ಆಲೋಚನೆಗೆ ಕಾರಣವಾದವು. ಇವುಗಳಿಗೆ ಶಿಷ್ಟ ಸಾಹಿತ್ಯದ ಕನ್ನಡತ್ವದ ಅನನ್ಯತೆಗಿಂತ ತೀರಾ ಭಿನ್ನವಾಗಿರುವುದನ್ನು ಗುರುತಿಸಲು ಸಾಧ್ಯವಾಗಿದೆ. ಒಟ್ಟಾರೆ 'ಕನ್ನಡತ್ವ'ವೆಂಬ ಹೊಸ ಅನನ್ಯತೆಯನ್ನು ಕಟ್ಟಿಕೊಳ್ಳುವ ಎಳೆಗಳು ೫೦ರ ದಶಕದ ನಂತರದ ಜಾನಪದ ಅಧ್ಯಯನಗಳಲ್ಲಿ ಸಿಗುತ್ತವೆ. ಈ ಬಗೆಯ ವಿಶ್ಲೇಷಣೆಗಳು ಒಂದು ಜನಪ್ರಿಯ ಆಲೋಚನಾ ಮಾದರಿ ಹುಟ್ಟಲು ಕಾರಣವಾದವು. ಅಂತೆಯೇ ಜನಪದ ಸಂಗತಿಗಳನ್ನು ಸೂಕ್ಷ್ಮವಾಗಿ ಮುಖಾಮುಖಿಯಾಗುವ ಮೊನಚನ್ನು ಮೊಂಡಾಗಿಸಿದವು.

## ಕನ್ನಡ ರಾಷ್ಟ್ರೀಯತೆ

ಈ ಮೇಲಿನ ಅಷ್ಟೂ ಚರ್ಚೆ ಕನ್ನಡ 'ರಾಷ್ಟ್ರೀಯತೆ'ಗೆ ಪೂರಕವಾದದ್ದೆ. 'ರಾಷ್ಟ್ರೀಯತೆ'ಯ ಕಲ್ಪನೆಯೇ ಹೇಗೆ ಆಲೋಚನ ವಿನ್ಯಾಸಗಳನ್ನು ರೂಪಿಸಿತು ಎನ್ನುವ ಸಣ್ಣ ಹೊರಳು ನೋಟಕ್ಕಾಗಿ ಪ್ರತ್ಯೇಕ ಘಟಕವನ್ನಾಗಿ ಇಲ್ಲಿ ವಿಭಾಗಿಸಿಕೊಳ್ಳಲಾಗಿದೆ. ಬಿ. ಎ. ವಿವೇಕ ರೈ ಅವರು ಎರಡು ಬಗೆಯ ಅನನ್ಯತೆಯನ್ನು ಗುರುತಿಸುತ್ತಾರೆ : ''ಸಮುದಾಯವೊಂದು ಗುರುತಿಸಿಕೊಂಡಿರದ, ಆದರೆ ಹೊರಗಿನವರು ಕಂಡುಕೊಳ್ಳುವ ಅನನ್ಯತೆಯನ್ನು ಆ ಸಮುದಾಯದ 'ಸಹಜ ಅನನ್ಯತೆ' ಎಂದು ತಿಳಿಯಬಹುದು ಮತ್ತು 'ಸಹಜ ಅನನ್ಯತೆ' ಎಂದು ಹೇಳುವಾಗಲೂ ಅದು ಸಮುದಾಯವೊಂದು ಅಪ್ರಯತ್ನಪೂರ್ವಕವಾಗಿ ಅಭಿವ್ಯಕ್ತಿಸುವ, ಬಳಸುವ ಅನನ್ಯತೆ ಎಂದು ಭಾವಿಸಬೇಕು. ನಿರ್ಮಿಸಿದ ಅಥವಾ ಸೃಷ್ಟಿಸಿದ ಅನನ್ಯತೆಗಳು ಆಧುನಿಕ ಸಮಾಜದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಕಾಣಿಸುತ್ತವೆ. ಒಂದು ಕಾಲದ ನಿರ್ಮಿಸಿದ ಅನನ್ಯತೆ ಇನ್ನೊಂದು ಕಾಲದ ಸಹಜ ಅನನ್ಯತೆ ಆಗಬಹುದು. ಆಡಳಿತಕ್ಕಾಗಿ ಮಾಡಿಕೊಂಡ ನಿರ್ದಿಷ್ಟ ವ್ಯಾಪ್ತಿಯ ಭೌಗೋಳಿಕ ಪ್ರದೇಶದಲ್ಲಿ ಪ್ರಾದೇಶಿಕ ಅನನ್ಯತೆಯ ಕಲ್ಪನೆ ನಿಜವಾಗಿಯೂ ಇರುವುದಿಲ್ಲ. ರಾಜಕೀಯ ಉದ್ದೇಶಗಳಿಗಾಗಿ ತೋರಿಕೆಯ ಅನನ್ಯತೆಯನ್ನು ಸಾಮಾನ್ಯವಾಗಿ ಇಲ್ಲಿ ಹೇರಲಾಗುತ್ತದೆ.'' (ಗಿಳಿಸೂವೆ, ಪು : ೩೮)



ಎನ್ನುವಲ್ಲಿಯೂ ರಾಷ್ಟ್ರೀಯತೆಯ ಕೃತಕ ನಿರ್ಮಿತಿಯ ಮಿತಿ ಇರುವ ಸೂಚನೆ ಇದೆ.

ಕನ್ನಡ ರಾಷ್ಟ್ರೀಯತೆಯ ಪರಿಕಲ್ಪನೆಯು ಅಂತಹ ಒಂದು ನಿರ್ಮಿಸಿದ ಅನನ್ಯತೆ. ಒಂದು ರಾಷ್ಟ್ರದ ಪರಿಕಲ್ಪನೆ ಕಾಲದಿಂದ ಕಾಲಕ್ಕೆ ಬದಲಾಗುತ್ತದೆ. ೧೯೫೬ರ ಬಳಿಕ ಕರ್ನಾಟಕ ಎಂಬ ರಾಜ್ಯದ ಪರಿಕಲ್ಪನೆ ರೂಪುಗೊಳ್ಳುತ್ತಾ ಹೋಯಿತು. ಈ ರಾಜ್ಯದ ಗಡಿರೇಖೆಗಳ ಒಳಗಿನ ಲಕ್ಷಾಂತರ ಮಂದಿಗೆ ರಾಜ್ಯ ಎನ್ನುವುದು ಒಂದು ಅನನ್ಯತೆ ಆಗಿರಲಿಲ್ಲ. ಅವರ ಗ್ರಾಮ, ಸೀಮೆ, ಪಟ್ಟಣ, ಊರು, ಇವಿಷ್ಟೇ ಅವರ ಪ್ರಾದೇಶಿಕ ಅನನ್ಯತೆಯನ್ನು ರೂಪಿಸಿದ್ದು. ಇಂತಹ ಸ್ಥಳೀಯ ಅನನ್ಯತೆ ಮಾತ್ರ ಇದ್ದ ಜನರಲ್ಲಿ ಕರ್ನಾಟಕ ಎನ್ನುವ ಬೃಹತ್ ರಾಜ್ಯದ ಕಲ್ಪನೆಯನ್ನುಂಟುಮಾಡುವುದು ಸುಲಭದ ಕೆಲಸವಲ್ಲ. ಜಾನಪದ ಅಧ್ಯಯನವೆನ್ನುವುದೇ ಪ್ರಾದೇಶಿಕ ಅನನ್ಯತೆಗಳನ್ನು ಗಟ್ಟಿಗೊಳಿಸುವಂಥದ್ದು. ಆದರೆ ಅದೇ ಜನಪದವನ್ನು ಪ್ರಾದೇಶಿಕ ಅನನ್ಯತೆಗಳ ಜೊತೆಯಲ್ಲಿಯೇ ಕನ್ನಡ ರಾಷ್ಟ್ರೀಯತೆಯ ಹೊಸ ಅನನ್ಯತೆಯನ್ನು ಕಟ್ಟಿಕೊಳ್ಳುವಂತೆ ಬಳಸಿಕೊಳ್ಳಲಾಯಿತು. ಹಾಗಾಗಿಯೇ 'ಕನ್ನಡ ಜನಪದ', 'ಕರ್ನಾಟಕ ಜಾನಪದ'ದಂತಹ ಶೀರ್ಷಿಕೆಯಲ್ಲಿ ಜನಪದ ಕೃತಿಗಳು ಪ್ರಕಟವಾದದ್ದು. ಯಾವುದೇ ರಾಷ್ಟ್ರೀಯ ಅನನ್ಯತೆ ಎನ್ನುವುದು ವಿಸ್ತೃತವಾದ ಪ್ರಾದೇಶಿಕ ಅನನ್ಯತೆಯೇ ಆಗಿರುತ್ತದೆ. ಈ ನೆಲೆಯಲ್ಲಿ ಕನ್ನಡ ರಾಷ್ಟ್ರೀಯತೆಯು ಕೂಡ ಜಾನಪದ ಅಧ್ಯಯನಗಳು ರೂಪಿಸಿದ ಪ್ರಾದೇಶಿಕ ಅನನ್ಯತೆಗಳಿಂದಲೇ ರೂಪುಗೊಂಡಿದೆ.

ಹೀಗೆ ಕನ್ನಡ ಮತ್ತು ಕರ್ನಾಟಕತ್ವದ ಅನನ್ಯತೆಯ ಅಧ್ಯಯನಗಳು ಅಂತಿಮವಾಗಿ ಬೃಹತ್ ವ್ಯಾಖ್ಯಾನಗಳೇ ಆಗಿವೆ. ಮೂರು ನಾಲ್ಕು ದಶಕದ ಕಾಲ ಜಾನಪದ ಅಧ್ಯಯನದ ದೃಷ್ಟಿಕೋನವೆಲ್ಲ ಕನ್ನಡ, ಕರ್ನಾಟಕದ ಅನನ್ಯತೆಯ ಜತೆ ಸಮೀಕರಿಸಿದ ಪರಿಣಾಮ, ಕರ್ನಾಟಕದಲ್ಲಿ ಜಾನಪದ ಅಧ್ಯಯನಗಳು ಬಹುಪಾಲು ಸೂಕ್ಷ್ಮತೆಯನ್ನು ಕಳೆದುಕೊಂಡವು. ಪ್ರಾದೇಶಿಕ ಅನನ್ಯತೆಯನ್ನು ಗುರುತಿಸುವ ತಿಳುವಳಿಕೆಯನ್ನು ಕೂಡ ಕನ್ನಡದ ಅನನ್ಯತೆಯನ್ನು ಗುರುತಿಸಿದ ಆಲೋಚನೆಗಳೇ ಪ್ರಭಾವಿಸಿದವು. ಕನ್ನಡ, ಕರ್ನಾಟಕತ್ವದ ಅನನ್ಯತೆಯ ಸಂಕೇತಗಳು ಹೆಚ್ಚಾಗಿ ಮೇಲ್ವರ್ಗದ ಕಲೆ ಮತ್ತು ಆಚರಣೆಯನ್ನೇ ಅವಲಂಬಿಸಿದವು. 'ಕನ್ನಡ' ಭಾಷಿಕ ಅನನ್ಯತೆಯು ಕರ್ನಾಟಕದ ಇತರೆ ಹಲವಾರು ಭಾಷಿಕ ಅನನ್ಯತೆಯ ಮೇಲೆ ಸವಾರಿ ಮಾಡಿತು. ಅಂತೆಯೇ ಅನೇಕ ಕನ್ನಡದ ಉಪಭಾಷೆಗಳನ್ನು ಬಹುಜನ ಒಪ್ಪಿತ ಪ್ರಮಾಣಿತ ಕನ್ನಡದಲ್ಲಿ ಪರಿಚಯಿಸಿ, ಉಪಭಾಷೆಗಳ ಜೀವಂತಿಕೆಯನ್ನು ಮಂಕಾಗಿಸಿತು. ಕನ್ನಡ, ಕರ್ನಾಟಕದ ರಾಷ್ಟ್ರೀಯತೆಯ ಚಿಂತನೆಯೂ ಇವುಗಳ ಅನನ್ಯತೆಯನ್ನು ಗುರುತಿಸಲು ಪರೋಕ್ಷವಾಗಿ ಪ್ರಭಾವ ಬೀರಿತು.

**ಅರುಣ್ ಜೋಳದಕೂಡ್ಲಿಗಿ**
ಜೋಳದಕೂಡ್ಲಿಗಿ (ಅಂಚೆ), ಕೂಡ್ಲಿಗಿ ತಾಲ್ಲೂಕು
ಬಳ್ಳಾರಿ ಜಿಲ್ಲೆ, ಪಿನ್ - ೫೮೩ ೨೩೫








# ವಿಜ್ಞಾನ ಮತ್ತು ಪ್ರಕೃತಿ/ಪರಿಸರ ಕುರಿತು

ವಿಜ್ಞಾನ ಮತ್ತು ತಂತ್ರಜ್ಞಾನದ ಬೆಳವಣಿಗೆ, ಪ್ರಭಾವ ಮತ್ತು ಪರಿಣಾಮಗಳು ಭೂಮಿಯ ಇಡೀ ಪ್ರಕೃತಿ/ಪರಿಸರ ಮತ್ತು ಮಾನವ ಸಮಾಜಕ್ಕೆ ಸಂಬಂಧಿಸಿವೆ. ಈ ಹಿನ್ನೆಲೆಯಲ್ಲಿ ವಿಜ್ಞಾನದ ಸಾಮಾನ್ಯ ವಿದ್ಯಾರ್ಥಿಯಲ್ಲದ ನನಗೂ ವೈಜ್ಞಾನಿಕ ಸಂಶೋಧನೆ ಮತ್ತು ಬೆಳವಣಿಗೆಯ ದಿಕ್ಕು ದಿಸೆಗಳನ್ನು ಕುರಿತು ಆಲೋಚಿಸುವ ಹಕ್ಕು , ಅಧಿಕಾರ, ಜವಾಬ್ದಾರಿ ಇದೆ ಎಂದು ನಂಬಿದ್ದೇನೆ. ಆರಂಭದ ಹೆಜ್ಜೆಯಲ್ಲೆ ವೈಜ್ಞಾನಿಕ ಮನೋಭಾವ ತನ್ನ ಪ್ರಯೋಗ ಸಾಧ್ಯ ವಿಧಾನದ ಮೂಲಕ ಹೊಸ ಸತ್ಯಗಳ ಸ್ಥಾಪನೆ ಮಾಡಿ ಯೂರೋಪಿಯನ್ ಮತಧರ್ಮ, ಭೂಮಿ ಮತ್ತು ವಿಶ್ವ ವ್ಯವಸ್ಥೆಯ ಬಗ್ಗೆ ಹೊಂದಿದ್ದ ಮತ್ತು ರೂಢಿಸಿದ್ದ ನಂಬಿಕೆಯನ್ನು ಸಡಿಲಗೊಳಿಸಿ ತಲೆ ಎತ್ತಿ ನಿಂತಿತು. ಅದೀಗ ಅದೆಷ್ಟೋ ಬೆಳಕಿನ ವರ್ಷಗಳ ದೂರದಲ್ಲಿರುವ ಮತ್ತೊಂದು ಗೆಲಕ್ಸಿಯಲ್ಲಿರುವ ಇನ್ನೊಂದು ಸಜೀವ ಭೂಮಿಯನ್ನು ಪತ್ತೆ ಮಾಡಿರುವ ವೈಜ್ಞಾನಿಕ ಸಾಧನೆಯ ಸಂದರ್ಭದಲ್ಲಿದೆ. ಇಂಥ ಅತ್ಯುನ್ನತ ಸಾಧನೆಯ ಈ ವಿಜ್ಞಾನ ಯುಗದಲ್ಲಿ ನಾವು ಜೀವಿಸುತ್ತಿರುವ ಭೂಮಿಯ ಸಜೀವತೆಯ ಸ್ಥಿತಿಗತಿಯಲ್ಲುಂಟಾದ ಬದಲಾವಣೆಯ ಸ್ಥೂಲಾವಲೋಕನವನ್ನು ಪ್ರಕೃತಿ-ಮಾನವ ಸಂಬಂಧದಲ್ಲಿ ಮಾಡಬೇಕಾದ ಅಗತ್ಯತೆ ಉಂಟಾಗಿದೆ.

''ಪ್ರಕೃತಿಯಲ್ಲಿ ಅಡಗಿರುವ ರಹಸ್ಯಗಳನ್ನು ಬಯಲು ಮಾಡುತ್ತ ಅವುಗಳ ಸದುಪಯೋಗ ಮಾಡಿಕೊಂಡು ಬಂದಿರುವುದರಿಂದಲೇ ಶಿಲಾಯುಗದ ಪ್ರಾಣಿಯಂತಿದ್ದ ಮಾನವ ಸುಗುಣ ಸಂಪನ್ನನಾಗಿ ಸ್ವಾರಸ್ಯಮಯ ಜೀವನ ಸಾಗಿಸುವಲ್ಲಿ ಸಫಲನಾಗಿದ್ದಾನೆ. ಈ ರಹಸ್ಯಗಳನ್ನು ಪ್ರಾಯೋಗಿಕವಾಗಿ ಸಮರ್ಥಿಸಿ ಅವುಗಳನ್ನು ಮಾನವ ಕಲ್ಯಾಣಕ್ಕೆ ಉಪಯೋಗಿಸಿಕೊಳ್ಳಲು ಕಂಡುಹಿಡಿದ ಮಾರ್ಗೋಪಾಯಗಳನ್ನು ವೈಜ್ಞಾನಿಕ ಹೊಸ ಹೊಸ ತಂತ್ರಜ್ಞಾನಗಳೆಂದು ಗುರುತಿಸಿಕೊಂಡಿದ್ದೇವೆ.'' ಇದು ವಿಜ್ಞಾನದ ವಿದ್ಯಾರ್ಥಿ ತಳೆದಿರುವ ಅಚಲ ನಂಬಿಕೆಯಾಗಿದೆ. ಈ ಮಾತನ್ನು ಪರಿಶೀಲಿಸಿದರೆ, ವಿಜ್ಞಾನ ಮತ್ತು ತಂತ್ರಜ್ಞಾನ ಪ್ರಕೃತಿಯ ರಹಸ್ಯವನ್ನು ಮಾನವಕೇಂದ್ರಿತವನ್ನಾಗಿ ದುಡಿಸಿಕೊಂಡಿದೆ; ಪ್ರಕೃತಿಯ ಭಾಗವಾಗಿದ್ದ ಮಾನವನನ್ನು ಅದರ ಯಜಮಾನನನ್ನಾಗಿ ಮಾಡಿ ಅವನ ಹಿಡಿತಕ್ಕೆ ಒಳಪಡಿಸಿದೆ; ಇದರಿಂದ ಶ್ರಮ ಸಂಸ್ಕೃತಿಯ ಜೀವಿಯಾಗಿದ್ದ ಮಾನವನನ್ನು ಶ್ರಮರಹಿತ ಸಂಸ್ಕೃತಿಯ ಜೀವಿಯನ್ನಾಗಿ ಬದಲಾಯಿಸಿದೆ. ಅದನ್ನೆ ನಾಗರಿಕತೆ ಎಂದೂ ಮಾನವ ಚರಿತ್ರೆಯ ಸಕಾರಾತ್ಮಕ ಗುಣವೆಂದೂ ನಂಬಿಸಿರುವುದು ತಿಳಿದುಬರುತ್ತದೆ. ಅಲ್ಲವೆ ?

ಪ್ರಕೃತಿಯ ಅಗಾಧ ರಹಸ್ಯದ ಮೂಲವನ್ನು ಬಯಲು ಮಾಡುವ ಕಾರ್ಯದಲ್ಲಿ ತೊಡಗಿದ್ದೇನೆಂದು ನಂಬಿರುವುದೇ ಪ್ರಕೃತಿಯ ಭಾಗವಾಗಿರುವ ಮಾನವನ ಅಪಾರ ಬೌದ್ಧಿಕ ಅಹಂಕಾರದ ಪ್ರದರ್ಶನ ಮಾತ್ರವಾಗಿದೆ. ಇದು ಕುರುಡ ಆನೆಯ ಒಂದೊಂದೆ ಅಂಗವನ್ನು ಮುಟ್ಟಿ ಅದನ್ನೆ ಆನೆಯೆಂದು ಭ್ರಮಿಸುವ ಕತೆಯಂತಿದೆ. ರಾಜಕೀಯ ಪ್ರಾಣಿಯಾದ ಮಾನವ ತನ್ನ ಸ್ವಭಾವದಂತೆ ಪ್ರಕೃತಿಯಲ್ಲಿ ಅಡಗಿರುವ ಅಗಾಧ ಅರಿವಿನ ಶೋಧವನ್ನು ತನ್ನ ಸ್ವಲಾಭಕ್ಕಾಗಿ ಮಾಡುತ್ತಿದ್ದಾನೆ. ಆದರೂ ಅಸಾಧ್ಯವಾದ ಹೊಸ ಜ್ಞಾನಕ್ಷೇತ್ರದ ಸೃಷ್ಟಿಕರ್ತನಂತೆ ಬಿಂಬಿಸಿಕೊಳ್ಳುತ್ತಿದ್ದಾನೆ. ಹಾಗಾಗಿಯೇ ಅರಿವಿನ ಶೋಧ ಮಾನವನ ಬೌದ್ಧಿಕ ಜಗತ್ತಿನ ಇತಿಮಿತಿಯನ್ನೂ ಅದು ಇಡೀ ಪರಿಸರದ ಮೇಲೆ ಬೀರುವ ದುಷ್ಪ್ರಭಾವ ಮತ್ತು ಪರಿಣಾಮಗಳನ್ನೂ ತನ್ನ ಸೆರಗಲ್ಲೆ ಕಟ್ಟಿಕೊಂಡಿರುವುದು ನಮ್ಮ ಅನುಭವಕ್ಕೆ ಬರುತ್ತಿದೆ. ಮಾನವ ಕಲ್ಯಾಣಕ್ಕಾಗಿ ಇಡೀ ಪ್ರಕೃತಿಯನ್ನು ದುಡಿಸಿಕೊಳ್ಳುವ ಕಲ್ಪನೆಯ ಪರಿಸರದ ಅಪವ್ಯಾಖ್ಯಾನದಿಂದ ಹುಟ್ಟಿದುದಾಗಿದೆ. ಪರಿಸರವನ್ನು ಮಾನವಕೇಂದ್ರಿತವನ್ನಾಗಿ ನೋಡುವ

ಮೊದಲ ಪ್ರಯತ್ನದಲ್ಲಿ ಅಣುಬಾಂಬು ನಿರ್ಮಾಣವಾದದ್ದೆ ಅಲ್ಲದೆ ಅದರ ಉಪಯೋಗ ಮಾನವ ಕಲ್ಯಾಣ ಎಂಬ ಆದರ್ಶ ಬೊಂಬೆಯನ್ನು ಸಮಾಧಾನ ಪಡಿಸಲು ತೋರಿಸಲಾಗುತ್ತದೆಯಾದರೂ ಮಾನವನ ವಿನಾಶಕ್ಕೆ ಹೆಚ್ಚು ಬಳಕೆಯಾಗಿದೆ. ಭೂ ಪ್ರಕೃತಿಯ ವಿನಾಶಕ್ಕೂ ಕಾರಣವಾಗಬಲ್ಲಷ್ಟು ಶಕ್ತವಾಗಿರುವ ಅಣುಶಕ್ತಿಯನ್ನು ಮಾನವ ತನ್ನ ಕುಲದ ಸ್ವನಾಶಕ್ಕೆ ಬಳಸದಿರಲಿ ಎಂದು ಸದಾ ಪ್ರಾರ್ಥಿಸಬೇಕಾದ ಸ್ಥಿತಿ ತಲುಪಿದ್ದೇವೆ. ಇದು ಒಂದು ಹಂತವಾದರೆ ಅಣುಶಕ್ತಿಯನ್ನು ಪ್ರಗತಿಯ ಉದ್ದೇಶಕ್ಕಾಗಿ ಬಳಕೆ ಮಾಡುವ ಸಂದರ್ಭದಲ್ಲಿ ಉಂಟಾದ ಅಚಾತುರ್ಯದ ಚಣಗಳಲ್ಲಿ ಸುತ್ತಲ ಪ್ರದೇಶದ ಜನಜೀವನ ನರಕಮಯ ವಾಗಿರುವುದು ಅದಕ್ಕಿಂತಲೂ ದಾರುಣವಾದುದಾಗಿದೆ.

ನೋಟದಲ್ಲೆ ಪ್ರಕೃತಿ ಮತ್ತು ಪರಿಸರದಲ್ಲಿ ಅಡಕವಾಗಿರುವ ಸಮತೋಲನ ತತ್ವ ವಿರೋಧಿ ನಿಲುವಿದೆ. ಇದು ಯುರೋಪಿನಲ್ಲಿ ಪುನರುತ್ಥಾನದೊಂದಿಗೆ ಮೊಳಕೆಯೊಡೆದ ಆಕ್ರಮಣಕಾರಿ ಪ್ರವೃತ್ತಿ ವೈಜ್ಞಾನಿಕ ಬೆಳವಣಿಗೆಯಲ್ಲೂ ನೆಲೆ ಕಂಡುಕೊಂಡ ಪರಿಣಾಮವಾಗಿದೆ. ವಿಜ್ಞಾನ ಮತ್ತು ತಂತ್ರಜ್ಞಾನದ ಮಾರ್ಗೋಪಾಯದ ಮೂಲಕ ಪ್ರಕೃತಿಯನ್ನು ಮಾನವನ ಅನುಕೂಲಕ್ಕೆ ತಕ್ಕಂತೆ ಮಣಿಸಿದ ವಿಜಯೋತ್ಸಾಹ ಇಂದು ಅನುಭೋಗಿಸುತ್ತಿರುವ ವೈಜ್ಞಾನಿಕ ಸಾಫಲ್ಯತೆಯ ತುತ್ತತುದಿಯಲ್ಲಿ ಮಲಿನತೆಯೂ ತೀವ್ರತರವಾಗಿ ಹರಡಿ ಇಡೀ ಪರಿಸರ ಜೀವ ವಿರೋಧಿ ಸ್ವರೂಪ ಪಡೆಯಲು ಕಾರಣವಾಗಿದೆ. ಇಷ್ಟೆಲ್ಲ ವೈಜ್ಞಾನಿಕ, ನವನಾಗರಿಕತೆಗಳ ಸಾಧನೆಯ ನಂತರವೂ ಮಾನವ ತನ್ನ ಇರುವಿಕೆಗಾಗಿ ಹೋರಾಟ ಮಾಡುವ ಶಿಲಾಯುಗದ ಸ್ಥಿತಿಯಲ್ಲೇ ಇದ್ದಾನೆ ಎಂಬುದು ಕಪೋಲಕಲ್ಪಿತ ಸ್ಥಿತಿಯಾಗಿ ಉಳಿದಿಲ್ಲ. ಮಾನವ ಪ್ರವೃತ್ತಿಯಾದ ರಾಜಕೀಯ ಪ್ರಜ್ಞೆ ಮತ್ತು ಬೌದ್ಧಿಕ ಅಹಂಕಾರ ಅವನ ಅವಿವೇಕತನದ ಮಟ್ಟವನ್ನು ಮಾತ್ರ ಗುರುತಿಸುವ ಸಾಧನವಾಗಿದೆ ಎಂಬುದನ್ನು ವೈಜ್ಞಾನಿಕ ಸಾಧನೆಯ ಅಡ್ಡ ಪರಿಣಾಮಗಳು ಸೂಚಿಸುತ್ತಿವೆ. ಈ ಮಾತನ್ನು ಸಮರ್ಥಿಸಲು ಸಾಕಷ್ಟು ನಿದರ್ಶನಗಳು ಇಡೀ ಜಗತ್ತಿನ ಕಣ್ಣ ಮುಂದಿವೆ. ಸಾಮಾನ್ಯರ ನೆನಪಿಗೂ ಬರಬಹುದಾದ ಉದಾಹರಣೆಯೆಂದರೆ, ಹಿರೊಶಿಮಾ-ನಾಗಸಾಕಿ ದುರಂತ, ಚೆರ್ನೊಬಿಲ್ ದುರಂತ, ಭೋಪಾಲ್ ದುರಂತ ಮಾತ್ರವಲ್ಲದೆ ಭೂಮಿಯ ಮೇಲಿನ ಸಕಲ ಜೀವಗಳ ಮೂಲಧಾತುಗಳಾದ ಅನ್ನ, ನೀರು, ವಾಯು, ಆಕಾಶ ಕ್ರಮೇಣ ವಿಷವಾಗಿ ಬದಲಾಗುತ್ತಿರುವ, ಅಗಾಧ ಪ್ರಮಾಣದಲ್ಲಿ ಜರುಗುತ್ತಿರುವ ಪರಿಸರ ಮಾಲಿನ್ಯ.

ಕ್ರಮಬದ್ಧ ಮತ್ತು ವಸ್ತುನಿಷ್ಠ ಅಧ್ಯಯನ ವಿಧಾನದಿಂದ ಜ್ಞಾನ ಕ್ಷೇತ್ರಗಳು ಅಪಾರವಾಗಿ ವಿಕಾಸವಾಗಲು ಕಾರಣವಾಗಿರುವ ವೈಜ್ಞಾನಿಕ ಮನೋಭಾವ ತನ್ನ ತರ್ಕಶುದ್ಧತೆಯಿಂದ ಮತ್ತು ಹೊಸ ಆವಿಷ್ಕಾರದತ್ತ ನಿರಂತರವಾಗಿ ದಿಟ್ಟ ನೆಟ್ಟ ಪ್ರಯೋಗಶೀಲತೆಯಿಂದ ತನ್ನ ವ್ಯಾಪ್ತಿಯ ಮಿತಿಯನ್ನು ಗುರುತಿಸಿಕೊಳ್ಳುವಲ್ಲಿ ಸೋತಿದ್ದು ಕಾರಣವಿದ್ದಿರಬಹುದು ಎಂದು ನನ್ನ ಊಹೆ. ಇದನ್ನು ಹೀಗೂ ಹೇಳಬಹುದೇನೋ, ವಸ್ತುವಿನ ಭೌತಿಕ ಮೂಲಘಟಕ ಒಡೆಯಲು ಮಾಡಿದ ಪ್ರಯತ್ನ ಅಥವಾ ಮೂಲ ಘಟಕ ರಾಸಾಯನಿಕ ರೂಪವಾಗಿದ್ದಲ್ಲಿ ಅದನ್ನು ಕೃತಕವಾಗಿ ಸೃಷ್ಟಿಸುವ ಪ್ರಯತ್ನ ಅಥವಾ ಜೈವಿಕ ಕ್ರಿಯೆಯನ್ನು ಭೌತಿಕ ವಸ್ತುವಿನಂತೆ ಮತ್ತು ರಾಸಾಯನಿಕ ಕ್ರಿಯೆಯಂತೆ ಮರುಸೃಷ್ಟಿಸುವ ಪ್ರಯತ್ನಗಳು ಕಾರಣವಾಗಿರಬಹುದು.

ಮೊದಲ ಪ್ರಯತ್ನದಲ್ಲಿ ಅಣುಬಾಂಬು ನಿರ್ಮಾಣವಾದದ್ದೆ ಅಲ್ಲದೆ ಅದರ ಉಪಯೋಗ ಮಾನವ ಕಲ್ಯಾಣ ಎಂಬ ಆದರ್ಶ ಬೊಂಬೆಯನ್ನು ಸಮಾಧಾನಪಡಿಸಲು ತೋರಿಸಲಾಗುತ್ತದೆಯಾದರೂ ಮಾನವನ ವಿನಾಶಕ್ಕೆ ಹೆಚ್ಚು ಬಳಕೆಯಾಗಿದೆ. ಭೂ ಪ್ರಕೃತಿಯ ವಿನಾಶಕ್ಕೂ ಕಾರಣವಾಗಬಲ್ಲಷ್ಟು ಶಕ್ತವಾಗಿರುವ ಅಣುಶಕ್ತಿಯನ್ನು ಮಾನವ ತನ್ನ ಕುಲದ ಸ್ವನಾಶಕ್ಕೆ ಬಳಸದಿರಲಿ ಎಂದು ಸದಾ ಪ್ರಾರ್ಥಿಸಬೇಕಾದ ಸ್ಥಿತಿ ತಲುಪಿದ್ದೇವೆ. ಇದು



ಅಣುಬಾಂಬ್ ಸ್ಫೋಟ



ಓಜೋನ್ ವಲಯದಲ್ಲಿ ಪ್ಲಾಸ್ಟಿಕ್ ಸುಡುವಿಕೆ ತೂತು ಬೀಳುವಂತೆ ಮಾಡಿದೆ

ಒಂದು ಹಂತವಾದರೆ ಅಣುಶಕ್ತಿಯನ್ನು ಪ್ರಗತಿಯ ಉದ್ದೇಶಕ್ಕಾಗಿ ಬಳಕೆ ಮಾಡುವ ಸಂದರ್ಭದಲ್ಲಿ ಉಂಟಾದ ಅಚಾತುರ್ಯದ ಚಣಗಳಲ್ಲಿ ಸುತ್ತಲ ಪ್ರದೇಶದ ಜನಜೀವನ ನರಕಮಯವಾಗಿರುವುದು ಅದಕ್ಕಿಂತಲೂ ದಾರುಣವಾದುದಾಗಿದೆ.

ಈ ಹಂತದ ನಂತರದಲ್ಲಿ ಕೃತಕ ನೂಲು (ಸಿಂಥೆಟಿಕ್) ತಯಾರಿಕೆಯ ಮೂಲಕ ಇಡೀ ಜಗತ್ತು ಪ್ಲಾಸ್ಟಿಕ್ ಯುಗವಾಗಿ ಪರಿವರ್ತನೆ ಹೊಂದಿತು. ಮಣ್ಣಿನಲ್ಲಿ ಕರಗುವ ಸಾವಯವ ಗುಣ ಕಳೆದುಕೊಂಡಿರುವ ಸಿಂಥೆಟಿಕ್‌ನಿಂದ ಮಾನವನ ಕಲ್ಯಾಣವನ್ನು ಕೇಂದ್ರೀಕರಿಸುವಂತೆ ತೋರುವ ವಿಜ್ಞಾನ ಮತ್ತು ತಂತ್ರಜ್ಞಾನದ ಬೆಳವಣಿಗೆ ಇಡೀ ಪರಿಸರಕ್ಕೆ ಸವಾಲಾಗಿ ಪರಿಣಮಿಸಿದೆ. ಬಿಸಿಲಿನ ಝಳದಿಂದ ಕಾಪಾಡಿ ನೆರಳು ನೀಡುವ ಛತ್ರಿಯಂತಿದ್ದು ಇಡೀ ಭೂಮಿಯನ್ನು ಸೂರ್ಯನ ಕ್ಷ-ಕಿರಣಗಳಿಂದ ಸಂರಕ್ಷಣೆ ಒದಗಿಸಿರುವ ಓಜೋನ್ ವಲಯದಲ್ಲಿ ಪ್ಲಾಸ್ಟಿಕ್ ಸುಡುವಿಕೆ ತೂತು ಬೀಳುವಂತೆ ಮಾಡಿದೆ. ಪ್ರಕೃತಿಯ ಕೂಸಾಗಿರುವ ಮಾನವನಿಗೀಗ ವಿಜ್ಞಾನದ ಮೂಲಕ ಪರಿಸರಕ್ಕೆದುರಾಗಿರುವ ಕುತ್ತು ಸಕಲಜೀವ ಸಂಕುಲಗಳಿಗೆ ಮುಖಾಮುಖಿಯಾಗಿರುವ ಆಪತ್ತಾಗಿ ಮನವರಿಕೆಯಾಗುತ್ತಿದೆ. ಈ ಹಿನ್ನೆಲೆಯಲ್ಲಿ ಪ್ಲಾಸ್ಟಿಕ್‌ನ ಬಳಕೆ ತ್ಯಜಿಸಿ ಪ್ಲಾಸ್ಟಿಕ್ ಯುಗದ ಪೂರ್ವಕ್ಕೆ ಮರಳಲು ತಹತಹಿಸಲಾಗುತ್ತಿದೆ. ಆದರೆ ಅದು ಅಷ್ಟು ಸುಲಭ ಸಾಧ್ಯವಾದ ಕಾರ್ಯವೆಂದೇನೂ ತೋರುವುದಿಲ್ಲ.

ಹಸಿರು ಕ್ರಾಂತಿಗೆ ಕಾರಣವಾದ ಕೃತಕ ರಾಸಾಯನಿಕ ಗೊಬ್ಬರಗಳ ತಯಾರಿಕೆ ಕೃಷಿಕ್ಷೇತ್ರದಲ್ಲಿ ದೊಡ್ಡ ಭ್ರಮೆಯನ್ನು ಸೃಷ್ಟಿಸಿದುದು ಅದರ ಅನುಸರಣೆಯಲ್ಲಿರುವ ರೈತರು ಆತ್ಮಹತ್ಯೆಗೆ ಮೊರೆಹೋಗುತ್ತಿರುವ ಸದ್ಯದ ಸ್ಥಿತಿಯಲ್ಲಿ ಅರ್ಥವಾಗುತ್ತಿದೆ. ಆ ನಂತರದ ಹಂತದಲ್ಲಿ ಬೆಳಕಿಗೆ ಬಂದ ಜೈವಿಕ ತಂತ್ರಜ್ಞಾನ, ಪ್ರಕೃತಿಯ ಸಂತಾನ ಪ್ರಕ್ರಿಯೆಯನ್ನು ಕೃತಕವಾಗಿ ಮರುಸೃಷ್ಟಿಸುವ ಜ್ಞಾನಶಾಖೆಯಾಗಿದೆ. ರಾಸಾಯನಿಕ ಗೊಬ್ಬರಗಳು ಭೂಮಿಯ ಫಲವಂತಿಕೆಯನ್ನು ಬಂಜರು ಭೂಮಿಯನ್ನಾಗಿ ಪರಿವರ್ತಿಸುವಲ್ಲಿ ಯಶಸ್ವಿಯಾಗಿವೆ ಮತ್ತು ಮೂರನೆಯ ಜಗತ್ತಿನ ಆರ್ಥಿಕ ಬೆನ್ನೆಲುಬಾದ ಕೃಷಿಯನ್ನು ಬಹುರಾಷ್ಟ್ರೀಯ ಕಂಪನಿ ಮತ್ತದರ ಒಡೆಯ ದೇಶಗಳ ಹಿಡಿತಕ್ಕೆ ಸಿಗುವಂತೆ ಮಾಡುವಲ್ಲಿಯೂ ಯಶ ಪಡೆದಿವೆ.

ಜೈವಿಕ ತಂತ್ರಜ್ಞಾನದ ಮೂಲಕ ಇಡೀ ಸಸ್ಯ ಮತ್ತು ಪ್ರಾಣಿ ಸಂಕುಲಗಳೆಲ್ಲ ಸ್ವಾರ್ಥ ಮಾನವನ ದಾಳಗಳಾಗಿ ವಿನಾಶದ ಅಂಚಿಗೆ ತಳ್ಳಲಾಗುತ್ತದೆ. ವಿಶೇಷವೆಂದರೆ ಇದರಿಂದ ಮಾನವನೂ ಹೊರತಾಗದೆ ಹೋಗುವುದು ದೊಡ್ಡ ದುರಂತ. ಮಾನವ ಕೇಂದ್ರಿತವಾದ ವಿಜ್ಞಾನದ ಮಾನವ ಕಲ್ಯಾಣ ಕಲ್ಪನೆ ವೈರುಧ್ಯದ ತುಟ್ಟತುದಿ ತಲುಪಿದ್ದಕ್ಕೆ ಇದು ಉತ್ತಮ ನಿದರ್ಶನ ಎಂದು ಹೇಳಬಹುದು. ಇಷ್ಟಲ್ಲದೆ ಎಲ್ಲ ಕಾರ್ಖಾನೆಗಳೂ ಕೃತಕ ರಾಸಾಯನಿಕಗಳನ್ನೆ ಆಧರಿಸಿ ತಮ್ಮ ಚಟುವಟಿಕೆ ಮತ್ತು ಉತ್ಪನ್ನಗಳನ್ನು ಕೈಗೊಂಡಿವೆ. ಇದರಿಂದ ನದಿ, ಸಾಗರಗಳು ಕೊಳಚೆ ಗುಂಡಿಗಳಾಗಿ ಬದಲಾಗುತ್ತಿವೆ. ಇವು ಈಗ ಉಂಟುಮಾಡುತ್ತಿರುವ ಮತ್ತು ಮುಂದೆ ಇನ್ನೂ ಹೆಚ್ಚು ಮಾಡಬಹುದಾದ ಪರಿಣಾಮಗಳು ಊಹೆಯನ್ನು ಮೀರಿದ್ದಾಗಿವೆ. ಕೃತಕ ರಾಸಾಯನಿಕಗಳ ಮೇಲಿನ ಅವಲಂಬನೆ ಮತ್ತು ಬಳಕೆ ಹೆಚ್ಚಿದಂತೆಲ್ಲ ಅದರ ಘೋರ ಪರಿಣಾಮಗಳು ಹೆಚ್ಚುತ್ತ ಸಾಗಿ ಭೂಲೋಕವೇ ನರಕ ಲೋಕವನ್ನು ಮೀರಿಸುವಂತಾಗುತ್ತದೆ.

ಮಾನವ ಕಲ್ಯಾಣಕ್ಕಾಗಿ ಪ್ರಕೃತಿ ಶಕ್ತಿಯನ್ನು ಬಯಲುಮಾಡಲು ತೊಡಗಿದ ವಿಜ್ಞಾನ ಮತ್ತು ತಂತ್ರಜ್ಞಾನ ಎಡವಿದ್ದಾದರೂ ಎಲ್ಲಿ? ವೈಜ್ಞಾನಿಕ ಮನೋಭಾವದ ಬೌದ್ಧಿಕ ಅಸೀಮ ಸಾಹಸ ಮತ್ತು ತನ್ನ ಬಗ್ಗೆ ತಾನೇ ತಳೆದ ಸರ್ವಶಕ್ತತೆಯ ನಿಲುವು ಇದಕ್ಕೆ ಕಾರಣವೆ? ನನಗೊಂದು ಕತೆ ನೆನಪಿಗೆ ಬರುತ್ತಿದೆ. ಅದು ತೈತ್ತರೀಯ ಉಪನಿಷತ್ತೋ ಕಠೋಪನಿಷತ್ತೋ ಎಲ್ಲಿಯದೋ ಗೊತ್ತಿಲ್ಲ. ಆ ಕತೆಯ ನಾಯಕ ವಿದ್ಯೆ ಕಲಿಯುವ ಹುಡುಗ (ಹೆಸರು ನೆನಪಿನಲ್ಲಿಲ್ಲ). ಅವನು ಪಪ್ಪಾಯಿ ಮರ ನೋಡುತ್ತಾನೆ. ಆ ಮರದ ತುಂಬ ಹಣ್ಣು ಬಿಟ್ಟಿರುತ್ತದೆ. ಆ ಮರ ಹೇಗೆ ಹುಟ್ಟಿತು ಎಂಬ ಪ್ರಶ್ನೆಗೆ ಬೀಜದಿಂದ ಎಂದು ಉತ್ತರ ಸಿಗುತ್ತದೆ. ಅವನು ಪಪ್ಪಾಯಿ ಕುಯ್ದು ಅದರೊಳಗಿನ ಬೀಜ ನೋಡುತ್ತಾನೆ. ಬೀಜಗಳು ಕಪ್ಪಗೆ ಸಣ್ಣಗಿರುತ್ತವೆ. ಅಷ್ಟು ಸಣ್ಣ ಬೀಜದಿಂದ ಇಷ್ಟು ದೊಡ್ಡ ಗಿಡ ಹುಟ್ಟುತ್ತದೆಯೇ ಎಂದು ಆತನಿಗೆ ಅನುಮಾನವಾಗುತ್ತದೆ. ಇದು ನಿಜವೇ ಆಗಿದ್ದಲ್ಲಿ ಅದರೊಳಗೇನಿರಬಹುದು ಎಂದು ಬೀಜವನ್ನು ಕುಯ್ದು ಎರಡು ಹೋಳು ಮಾಡುತ್ತಾನೆ. ಆ ಬೀಜದೊಳಗೆ ಅವನಿಗೆ ಅಂಥ



ವಿಶೇಷವಾದದ್ದು ಏನೂ ಕಾಣುವುದಿಲ್ಲ. ಕೊನೆಗೆ ಕತೆ ಶೂನ್ಯ ತತ್ವದೊಂದಿಗೆ ಮುಗಿತಾಯ ಕಾಣುತ್ತದೆ. ನಮಗಿಲ್ಲಿ ಕಾಣುವುದು ಪ್ರಕೃತಿಯ ರಹಸ್ಯವನ್ನು ಅರಿಯುವಲ್ಲಿ ನಮಗಿರುವ ದಾರಿಗಳು ಪರಿಮಿತವಾಗಿವೆ. ಈ ಸತ್ಯವನ್ನು ನಾವು ಒಪ್ಪಿಕೊಳ್ಳಬೇಕು ಎಂಬುದು. ಆಗ ಮಾತ್ರ ನಾವು ಪ್ರಕೃತಿಗೆ ಹಾನಿಯಾಗದಂತೆ ನಮ್ಮ ಅರಿವನ್ನು ವಿಸ್ತರಿಸಿಕೊಳ್ಳಲು ಸಾಧ್ಯ. ಪ್ರಕೃತಿಯ ಭಾಗವಾಗಿದ್ದೂ ಪ್ರಕೃತಿಯ ರಹಸ್ಯ ಶಕ್ತಿಯನ್ನು ನಮ್ಮ ಅನುಕೂಲಕ್ಕೆ ತಕ್ಕಂತೆ ಮಣಿಸುವುದು ಅತಿರೇಕದ್ದೆಂದು ಸೂಚಿತವಾಗುತ್ತದೆ. ಅಂಥ ಪ್ರಯತ್ನದಿಂದ ತೋರಿಕೆಗೆ ಅನುಕೂಲವಾದರೂ ಮೂಲದಲ್ಲಿ ನಮ್ಮ ಇರುವಿಕೆಗೆ ದೊಡ್ಡ ಪೆಟ್ಟು ಬೀಳುತ್ತದೆ. ಇದಕ್ಕೆ ವೈಜ್ಞಾನಿಕ ಮನೋಭಾವವೆ ಪ್ರಕೃತಿ ಬಗ್ಗೆ ತಳೆದ ಪೂರ್ವ ನಿರ್ಲಕ್ಷಿತ ಧೋರಣೆ ಕಾರಣವಾಗಿರುವಂತೆ ತೋರುತ್ತದೆ. ಇದನ್ನು ವಿಜ್ಞಾನದ ಪರಿಸರ/ಪ್ರಕೃತಿ ವಿರೋಧಿ ನಿಲುವು ಎಂದು ಗುರುತಿಸಬಹುದು.

ಹಾಗಿದ್ದಲ್ಲಿ ವಿಜ್ಞಾನದ ಪರಿಸರ ಸ್ನೇಹಿ ನಿಲುವು ಅಥವಾ ಮನೋಭಾವ ಯಾವುದಿರಬಹುದು ಎಂಬ ಪ್ರಶ್ನೆ ಮುಂದೆ ಬರುತ್ತದೆ. ಪ್ರಕೃತಿ/ಪರಿಸರ ಸ್ನೇಹಿ ವಿಜ್ಞಾನಕ್ಕೆ ಒಂದು ಉದಾಹರಣೆ ನೀಡಿ ಈ ಬರೆಹ ಮುಗಿಸಬಹುದೆಂದುಕೊಳ್ಳುತ್ತೇನೆ, ಮುಕ್ಕಾಲು ಪಾಲು ನೀರಿರುವ ಮನುಷ್ಯನ ದೇಹ ಭೂಮಿಯ ಪ್ರತಿರೂಪವೆಂದು ನಾನು ತಿಳಿಯುತ್ತೇನೆ. ಭೂಮಿಯಲ್ಲಿರುವ ಎಲ್ಲ ಅಂಶಗಳು ಮನುಷ್ಯನ ದೇಹಕ್ಕೆ ಅಗತ್ಯವಿವೆ. ಯಾವುದೇ ಅಂಶವೊಂದರ ಕೊರತೆಯುಂಟಾದಲ್ಲಿ ಅನಾರೋಗ್ಯ ಉಂಟಾಗುತ್ತದೆ. ಮಾನವನ ರೋಗಗಳಿಗೆ ಕೃತಕ ರಾಸಾಯನಿಕ ಗುಳಿಗೆಗಳು ಸಮರ್ಪಕ ಔಷಧೋಪಚಾರ ವಾಗಿರಲಾರದು. ಆದ್ದರಿಂದಲೇ ಗುಳಿಗೆಗಳಿಂದ ಅಡ್ಡ ಪರಿಣಾಮಗಳು ಉಂಟಾಗುತ್ತವೆ. ಸೂಕ್ತ ಔಷಧೋಪಚಾರ ಎನ್ನುವುದು ಗಿಡಮೂಲಿಕೆಗಳು (ಆಯುರ್ವೇದ ಬೇರೆ) ಮತ್ತಿತರ ಭೂಮಿಯ ಅಂಶಗಳಿಂದ ಮಾತ್ರ ಸಾಧ್ಯವಿದೆ. ಈ ಕುರಿತು ಅಧ್ಯಯನಗಳು ನಡೆದೇ ಇಲ್ಲ ಎಂದು ಹೇಳಬೇಕು. ಇತ್ತೀಚೆಗೆ ಕ್ಯಾನ್ಸರ್ ತಗುಲಿದ ಕೋಶಗಳನ್ನು ಕೊಲ್ಲಲು ರೋಗ ಯಾವುದೇ ಹಂತದಲ್ಲಿರಲಿ- ಲಿಂಬೆಹಣ್ಣಿನ ಹುಳಿ ಕಿಮೊ ಥೆರಪಿಗಿಂತ ಹತ್ತು ಸಾವಿರ ಪಟ್ಟು ಹೆಚ್ಚು ಪರಿಣಾಮಕಾರಿ ಔಷಧವಾಗಿದೆ ಎಂದು ಇನ್ಸ್ಟಿಟ್ಯೂಟ್ ಆಫ್ ಹೆಲ್ತ್ ಸೈನ್ಸಸ್, ೮೧೯, ಎನ್‌ಎಲ್‌ಎಲ್‌ಸಿ, ಚಾರ್ಲ್ಸ್ ಸ್ಟ್ರೀಟ್, ಬಾಲ್ಟಿಮೋರ್, ಎಂಡಿ ೨೧೨೦೧ ವಿಳಾಸದ ಸಂಸ್ಥೆಯೊಂದು ಪ್ರಚಾರ ಮಾಡುತ್ತಿದೆ.

ಸಿಹಿ ರುಚಿ ನೀಡುವ ಮಾವು, ಕಬ್ಬು, ಹಲಸು ಅಲ್ಲದೆ ನಮಗೆ ತಿಳಿಯದ ಬಹಳಷ್ಟು ಗಿಡಮರಗಳ ಹಣ್ಣುಗಳಿವೆ. ಬೇವಿನ ಹಣ್ಣಿನ ಸವಿರುಚಿಯನ್ನು ನಾವಾರೂ ಸವಿದಿಲ್ಲ. ಪ್ರತಿಯೊಂದೂ ಹಣ್ಣು ಬೇರೆಯೇ. ಅದರ ರುಚಿಯೂ ಬೇರೆಯೇ ಆಗಿವೆ. ಅವುಗಳಲ್ಲಿನ ಭೂಮಿಯ ರಾಸಾಯನಿಕ ಸಾರಾಂಶಗಳು ಕೂಡ ಬೇರೆ ಬೇರೆಯಾಗಿದ್ದು ಅವೆಲ್ಲವೂ ಮನುಷ್ಯ ದೇಹಕ್ಕೆ ಅಗತ್ಯವಿದೆ. ಯಾವ ಅಂಶಗಳ ಕೊರತೆ ಯಾವ ರೋಗಗಳಿಗೆ ಕಾರಣವಾಗುತ್ತದೆ, ಅಂಥ ಯಾವ ಅಂಶಗಳು ಪ್ರಕೃತಿ/ಪರಿಸರದ ಯಾವ ಗಿಡ ಮೂಲಿಕೆ ಅಥವಾ ಇತರ ಸಸ್ಯ ಮತ್ತು ಪ್ರಾಣಿಗಳ ಅಂಶದಲ್ಲಿ ಅಡಗಿದೆ ಎಂಬುದು ಬಹುಶಃ ಇದುವರೆಗೂ ಅಧ್ಯಯನದ ವ್ಯಾಪ್ತಿಗೆ ಒಳಪಟ್ಟಿಲ್ಲ. ಮಾನವ ಮತ್ತು ಪ್ರಕೃತಿಗೆ ಪೂರಕವಾದ ಇಂಥ ಕೃತಕ ರಾಸಾಯನಿಕಗಳ ನಿರ್ಮಾಣವನ್ನು ಒಳಗೊಳ್ಳದ ಅಧ್ಯಯನಗಳು ಪರಿಸರ ಸ್ನೇಹಿಯಾಗಿರಬಲ್ಲುದಾಗಿವೆ. ಇದೊಂದು ಸಣ್ಣ ಉದಾಹರಣೆಯಾಗಿದ್ದು, ಯಾವುದೇ ಜ್ಞಾನದ ಶೋಧ ಪ್ರಕೃತಿ/ಪರಿಸರಕ್ಕೆ ಹಾನಿಯುಂಟಾಗಬಾರದೆಂಬ ಎಚ್ಚರದಿಂದ ಕೈಗೊಂಡಲ್ಲಿ ಅಂಥ ಎಲ್ಲ ಅಧ್ಯಯನಗಳು ಪರಿಸರ ಸ್ನೇಹಿಯಾಗಿರಬಹುದಾಗಿವೆ. ವಿಜ್ಞಾನ ಮತ್ತು ತಂತ್ರಜ್ಞಾನ ತನ್ನಿಂದ ಪ್ರಕೃತಿ/ಪರಿಸರಕ್ಕೆ ಹಾನಿಯಾಗದ ಆಶಯ, ಉದ್ದೇಶ ಮತ್ತು ವಿಧಾನಗಳನ್ನು ತುರ್ತಾಗಿ ಅಳವಡಿಸಿಕೊಳ್ಳಬೇಕಾದುದು ಭೂಮಿಯ ಮೇಲಿನ ಇಡೀ ಜೀವ ಸಂಕುಲದ ಅವಶ್ಯಕತೆಯಾಗಿದೆ. ಇಂಥ ಧೋರಣೆಯ ಅಳವಡಿಕೆ ಮಾತ್ರ ಪ್ರಕೃತಿಯ ಭಾಗವಾದ ಮನುಷ್ಯಾದಿ ಸಕಲ ಜೀವ ಸಂಕುಲಗಳ ಕಲ್ಯಾಣದ ಹಾದಿಯಲ್ಲಿ ವಿಜ್ಞಾನವನ್ನು ಮುನ್ನಡೆಸಲು ಸಾಧ್ಯ.

**ಶ್ರೀಧರ ಪಿಸ್ಸೆ**
ಪಿಟಿ. ೨ಎಫ್/೨೩-ಎ, ೭ನೆಯ ವಾರ್ಡು, ಸುಬ್ರಹ್ಮಣ್ಯ ದೇವಸ್ಥಾನದ ಹತ್ತಿರ
ಹಂಪಿ ಪವರ್ ಹೌಸ್, ಕಮಲಾಪುರ - ೫೮೩ ೨೧೫

# ಮಳೆಗಾಲದ ಬಿಸಿಲು !



ತಗೊಳ್ಳಿ ಈಗಲೇ ಬೇಕಾದುದನು ಹೆಕ್ಕಿ
ಇದ್ದದ್ದವು ನನ್ನವು, ಎಲ್ಲವೂ ನಿಮ್ಮವೇ !

ಬಂದೆ, ಕುಳಿತೆ ಒಂದಷ್ಟು ಹರಟಿದೆ ನಿಮ್ಮ
ನಂಬಿಸಲೆಂದಲ್ಲ, ಸಾಯದಿರಲಿ ಸತ್ಯ ಎಂದು.
ಯಾರಿಗೆ ಗೊತ್ತು ಸತ್ಯದ ನಾಣ್ಯ ಬದಲಾಗಲೂ
ಬಹುದು ಬದಲಾಗುವಂತೆ ವರ್ಷಂಪ್ರತಿ ಬಿಡದೆ
ನಮ್ಮ-ನಿಮ್ಮ ಸರಕಾರೀ ರೂಪಾಯಿ ಸೈಜು !

ತಲೆಕೆಡಿಸಿಕೊಂಡಿಲ್ಲ ನಾನೆಂದೂ ಅದಕೆ ಈ
ನನ್ನ ಸತ್ಯ, ನನಗೆ ಒಳಮಾತು; ಬೇರಿಲ್ಲ ಒಂದೂ !
ಇರಬಹುದು ಕೆಲವರಿಗೆ ಗೇಲಿಯ ವಸ್ತು ಇವನು
ಗೊತ್ತಿಲ್ಲ ಅವಕೆ ಪಾಪ, ಸುಸ್ತಾಗಿಲ್ಲ ಇನ್ನೂ
ಪೃಥಿವಿಗೆ, - ತಿರುಗುತಿದೆ ಅದೇ ಅದೇ ಶಿಸ್ತಿನಿಂದ.

ಕನಸಲಿ ಬಂದ ಆ ತೀವ್ರ ಮನುಷ್ಯ ಅನ್ನುತ್ತಾನೆ : ''ಇರು ನೀನು
ನಿನ್ನಂತೆ, ನಂಬಲಾಗದು ಪೂರ್ತಿ, ಇದು ಮಳೆಗಾಲದ ಬಿಸಿಲು !''

**ವಿಷ್ಣು ನಾಯ್ಕ**
'ಪರಿಮಳ', ಅಂಬಾರಕೊಡ್ಲ, ಅಂಕೋಲಾ (ಉ. ಕ.)

# ಫೈಜ್ ನಾಮಾ; ಕನ್ನಡಕ್ಕೊಂದು ಮಹತ್ವದ ಕೊಡುಗೆ







ಸಂಪಾದಕರು : **ಹಸನ್ ನಯೀಂ ಸುರಕೋಡ**
ಕವನಗಳ ಅನುವಾದ : **ಎಲ್. ಕೆ. ಅತೀಕ್, ಕೆ. ಷರೀಫಾ**
ಪ್ರಕಾಶಕರು : ಚಿಂತನ ಪುಸ್ತಕ, ನಂ. ೪೦೫
೧೦ನೇ ಮುಖ್ಯರಸ್ತೆ, ೧ನೇ ಅಡ್ಡರಸ್ತೆ
ಡಾಲರ್ಸ್ ಕಾಲೋನಿ, ಜೆ. ಪಿ. ನಗರ, ೪ನೇ ಫೇಸ್
ಬೆಂಗಳೂರು - ೫೬೦ ೦೭೮
ಪುಟಗಳು : ೨೪೦+೪ ಬೆಲೆ : ರೂ. ೧೯೦-೦೦

**ಫೈ**ಜ್ ಅಹ್ಮದ್ ಫೈಜ್ (೧೯೧೧-೧೯೮೪)ರವರು ನೆರೋದ, ಬ್ರೆಕ್ಟ್, ಗಾರ್ಕಿ, ಗಾಲಿಬ್, ಅಲ್ಲಮ, ಇಕ್ಬಾಲರ ಸಾಲಿಗೆ ನಿಲ್ಲುವ ಕವಿ. ಬಹುಮುಖ ಪ್ರತಿಭೆಯ ಕ್ರಾಂತಿಕಾರಿ ಉರ್ದು ಕವಿ. ವಿಶ್ವದ ಸರ್ವಾಧಿಕಾರಿಗಳನ್ನು ನಿಷ್ಠುರವಾಗಿ ಖಂಡಿಸಿದ ನಿಷ್ಠುರವಾದಿ. ಇಂತಹ ಕ್ರಾಂತಿಕಾರಿ ಕವಿಯ 'ಫೈಜ್ ನಾಮಾ' ಹಸನ್ ನಯೀಂ ಸುರಕೋಡರವರು ಸಂಪಾದಿಸಿದ್ದಾರೆ. ಇದರಲ್ಲಿಯ ಕಾವ್ಯವನ್ನು ಎಲ್. ಕೆ. ಅತೀಕ್ ಹಾಗೂ ಡಾ॥ ಕೆ. ಷರೀಫಾರವರು ಅನುವಾದಿಸಿದ್ದಾರೆ. ಫೈಜ್‌ರವರ ಜನ್ಮ ಶತಮಾನೋತ್ಸವದ ಸಂದರ್ಭದಲ್ಲಿ ಕನ್ನಡದ ಓದುಗರಿಗೆ ಈ ಮಹಾನ್ ಕವಿಯ ಬದುಕು ಬರಹಗಳನ್ನು ಪರಿಚಯಿಸುವ 'ಫೈಜ್ ನಾಮಾ' ಪ್ರಕಟಿಸಿದ ಚಿಂತನ ಪ್ರಕಾಶನ ಶ್ಲಾಘನೀಯ.

ಫೈಜ್‌ರವರ ಕಾವ್ಯದ ಅನುವಾದ ಕಬ್ಬಿಣದ ಕಡಲೆ. ಅದೊಂದು ಉರ್ದು ಛಂದೋಲಯ ಒಪ್ಪಿತ ಜೀವನಾನುಭವ. ಸೂಫೀ ತತ್ವದ ಹೊಸ ಪರಿಭಾಷೆಯೂ ಹೌದು. ಇವರ ಕಾವ್ಯ ಓದುಗರಿಗೆ ಹೊಸ ಹೊಸ ಪರಿಭಾಷೆ, ಶಬ್ದಗಳನ್ನು ಪರಿಚಯಿಸುತ್ತದೆ. ಕಾಲದ ಜೊತೆಗೆ ಕಾವ್ಯದ ಷರತ್ತುಗಳು, ಉದ್ದೇಶಗಳು ಬದಲಾಗುತ್ತವೆ. ಹೊಸ ತತ್ವ, ವಿಚಾರ, ಕ್ರಾಂತಿಯ ಉದ್ದೇಶಕ್ಕಾಗಿ ಕಾವ್ಯ ಬಳಸಿದ ಪಾಬ್ಲೋ ನೆರೋದನಂತೆಯೇ ಫೈಜ್‌ರವರ ಕಾವ್ಯ. ತಮ್ಮ ಎಡಪಂಥೀಯ ಕಾವ್ಯ ಮತ್ತು ಚಳುವಳಿಗಳಿಗಾಗಿಯೇ ಅನೇಕ ವರ್ಷ ಜೈಲು ವಾಸವನ್ನನುಭವಿಸಿದವರು. ಲೋಕದ ನೋವನ್ನು ಕಾವ್ಯದಲ್ಲಿ ಹೆಪ್ಪುಗಟ್ಟಿಸಿದ ಈ ಕವಿಯ ಕಾವ್ಯವನ್ನು ಸರಳರೇಖೆಯಲ್ಲಿ ಅಳೆಯಲಾಗದು.

'ಫೈಜ್‌ನಾಮಾ' ಕೇವಲ ಫೈಜ್‌ರವರ ಕಾವ್ಯದ ಅನುವಾದವನ್ನು ಮಾತ್ರ ಒಳಗೊಂಡಿಲ್ಲ. ಫೈಜ್‌ರವರ ಬದುಕಿನ ಬಗ್ಗೆ ಅವರೇ ಬರೆದ ಎರಡು ಲೇಖನಗಳಿವೆ. ಅವರ ಮರಣದ ಕೆಲವೇ ತಿಂಗಳ ಮುಂಚೆ ಸಮ್ಮೇಳನವೊಂದರಲ್ಲಿ ನಿರೂಪಿಸಿದ್ದ ಮತ್ತು ಅವರದೇ ಕವನ ಸಂಕಲನ 'ಶಾಮೇ-ಶಹರೇ-ಯಾರಾಂ'ಕ್ಕೆ ಬರೆದ ಪ್ರಸ್ತಾವನೆಯನ್ನೂ ಅನುವಾದಿಸಲಾಗಿದೆ. ಪಾಕಿಸ್ತಾನಿ ಪ್ರಭುತ್ವದ ಕತ್ತಿಗಳು ತಲೆಮೇಲೆ ತೂಗುತ್ತಿದ್ದರೂ ಆತ್ಮವಿಶ್ವಾಸದಿಂದ ಪತಿಯೊಡನೆ ಹೆಜ್ಜೆ ಹಾಕಿದ ಅವರ ಮಡದಿ 'ಎಲಿಸ್ ಫೈಜ್'ರವರ ಬರಹ ಫೈಜ್‌ರವರ ಬದುಕಿನ ಅಪೂರ್ಣತೆಯನ್ನು ಪೂರ್ಣಗೊಳಿಸುತ್ತದೆ. 'ರಾವಲಪಿಂಡಿ ಸಂಚಿ'ನಲ್ಲಿ ಭಾಗಿಯಾಗಿದ್ದಾರೆಂಬ ಆಪಾದನೆಯ ಮೇಲೆ ನಾಲ್ಕು ವರ್ಷ ಫೈಜ್‌ರೊಂದಿಗೆ ಸೆರೆಮನೆವಾಸ ಅನುಭವಿಸಿದ ಮೇಜರ್ ಇಷ್ಹಾಕ್‌ರವರ ಬರಹ ಫೈಜ್‌ರವರ ಕವನ ಸಂಕಲನ 'ಜಿಂದಾಂ ನಾಮಾ' (ಜೈಲು ವೃತ್ತಾಂತ)ಕ್ಕೆ ಬರೆದ ಮುನ್ನುಡಿಯಾಗಿದೆ. ಜೈಲಿನ ದಿನಚರಿಯೇ ಈ ಬರಹ. ಅಫ್ತಾಬ್‌ರವರು ಫೈಜ್‌ರವರ ಅತ್ಯಂತ ನಿಕಟವರ್ತಿ. ಇವರ ಲೇಖನ ಸಮೃದ್ಧ ಹಾಗೂ ಸಂಪನ್ನ ವ್ಯಕ್ತಿತ್ವದ ಫೈಜ್‌ರವರ ವಿವಿಧ ಆಯಾಮಗಳನ್ನು ತೆರೆದಿಡುವಲ್ಲಿ ಯಶಸ್ವಿಯಾಗಿದೆ.

ಫೈಜ್‌ರವರ ಕುರಿತ ಬರಹಗಳು, ಅವರ ಕವಿತೆಗಳು ಒಳಗೊಂಡಿರುವ 'ಫೈಜ್ ನಾಮಾ'ಕ್ಕೆ ಪ್ರಮುಖ ಜನಪರ ಲೇಖಕರಾದ ಫಕೀರ್ ಮಹಮದ್ ಕಟ್ಪಾಡಿಯವರ ಮುನ್ನುಡಿ ವಿಚಾರಪೂರ್ಣವಾಗಿದೆ. ಫೈಜ್ ಕಾವ್ಯದ ಕುರಿತು ಕೆಲವರು ಅದರ ಭಾವಾನುವಾದ ಮಾಡಿದರೆ ಇನ್ನೂ ಕೆಲವರು ಅವರ ಸಾಹಿತ್ಯ (ಲಿಟರಲ್ ಟ್ರಾನ್ಸ್‌ಲೇಶನ್)ವನ್ನು ಅನುವಾದ ಮಾಡಿದ್ದಾರೆ. ಇಲ್ಲಿಯ ಕಾವ್ಯಾನುವಾದ ಎರಡನೇ ಮಾದರಿಗೆ ಸೇರಿದ್ದಾಗಿದೆ. ಫೈಜ್‌ರವರ ಕಾವ್ಯವು ಫಾರಸಿ, ಅರಬ್ಬೀ ಮತ್ತು ಉರ್ದು ಕಾವ್ಯ ಪರಂಪರೆಗಳನ್ನು ಅರಗಿಸಿಕೊಳ್ಳುತ್ತಾ ತನ್ನದೇ ಆದ ವಿಷಯ, ವಸ್ತು ಮತ್ತು ಅನುಭವಗಳನ್ನು ದಾಖಲಿಸಿದೆ. ಅವರು ನಂಬಿದ ತತ್ವ, ಆದರ್ಶಗಳನ್ನು ಎಲ್ಲಿಯೂ ಬಿಟ್ಟುಕೊಡದೇ ಬರೆದವರು. ಸಮಾನತೆಯ ತತ್ವ ಆಧರಿಸಿ, ವಸಾಹತುಶಾಹಿ, ಜಮೀನ್ದಾರಿ ಮತ್ತು ಬಂಡವಳಿಗರ ವಿರೋಧ ಕಟ್ಟಿಕೊಂಡರು.

ಕನ್ನಡಕ್ಕೆ ಫೈಜ್‌ರವರ ಕಾವ್ಯವನ್ನು ಭಾಷಾಂತರಿಸಿದರೂ ಆ ಉರ್ದುವಿನ ಛಂದೋಲಯಗಳನ್ನು, ಅದರ ಮಾಧುರ್ಯವನ್ನು ಇತರೇ ಭಾಷೆಗಳಿಗೆ ತರುವುದು ಅಸಾಧ್ಯ ಕೂಡ. ಅವರ ಕಾವ್ಯದ ಧ್ವನಿ, ಲಯದ ಜಾಡು ಹಿಡಿದ ಅನೇಕರು ತಮ್ಮದೇ ಆದ ವಸ್ತು, ವಿಷಯ ಮತ್ತು ಅನುಭವಗಳನ್ನು ಕನ್ನಡಕ್ಕೆ ನೀಡಿದ್ದಾರೆ. ಇಲ್ಲಿ ಹಾಸುಹೊಕ್ಕಾಗಿ ಕಂಡುಬರುವ ಸಮಾಜವಾದೀ ಆದರ್ಶ, ವೈಚಾರಿಕ ನೆಲೆ, ತಾತ್ವಿಕ ಬದ್ಧತೆಗಳಿವೆ. ಇವರ ಕಾವ್ಯವನ್ನು ಅನುವಾದಿಸಲು ಉರ್ದು ಭಾಷಾ ಪ್ರೌಢಿಮೆ ಮಾತ್ರ ಇದ್ದರೆ ಸಾಲದು. ಫೈಜ್‌ರವರ ಭಾವತೀವ್ರತೆ, ವೈಚಾರಿಕ ನೆಲೆ, ಧೋರಣೆಗಳಿರುವುದು ಅವಶ್ಯಕ. ಫೈಜ್‌ರವರ ಜೀವನಪ್ರೀತಿ ಜೀವಪರ ಧೋರಣೆಗಳು ಅವರ ಕಾವ್ಯದಲ್ಲಿಯೂ ಕಂಡುಬರುತ್ತವೆ. ಕನ್ನಡದಲ್ಲಿಯೂ ಕುವೆಂಪು, ಬೇಂದ್ರೆಯಂತಹ ಸಾಹಿತಿಗಳು ನಮ್ಮಲ್ಲಿದ್ದಾರೆ. ಆದರೆ ಸಮಾಜಮುಖಿ ಧೋರಣೆಗಳಿಂದ ವ್ಯವಸ್ಥೆಯ ಶೋಷಕ ನೀತಿಯ ವಿರುದ್ಧ ಉರ್ದು ಕಾವ್ಯವನ್ನು ಅಣಿಗೊಳಿಸಿದ ಶ್ರೇಯಸ್ಸು ಫೈಜ್‌ರವರದು. ಅವರ ಕಾವ್ಯದ ಕನ್ನಡಾನುವಾದ ಜಗತ್ತಿಗೆ ಆರೋಗ್ಯಕರ ಸಮಾಜ ಸ್ಥಾಪನೆಗೆ ಪ್ರೇರಕವಾಗಿರುವಂತೆ, ಕನ್ನಡ ಕಾವ್ಯವನ್ನು ಲೋಕದಲ್ಲೂ ಹೊಸ ಭಾವ, ಧೋರಣೆ, ಉದ್ದೇಶ - ಸಮಾಜಮುಖಿ, ಜನಪರ ಬರಹಕ್ಕೆ ಪ್ರೇರಣೆ ಯಾಗುವುದಾದರೆ, ಲೇಖಕರ, ಅನುವಾದಕರ ಶ್ರಮ ಸಾರ್ಥಕವಾಗುವುದು. ಕನ್ನಡ ಓದುಗರಿಗೆ ಅಪರಿಚಿತರಾದ ಫೈಜ್‌ರವರ ಕಾವ್ಯ, ಬದುಕುಗಳು, ಕನ್ನಡಕ್ಕೆ ಪ್ರೇರಣೆಯಾಗಲಿ. ಈ ಉರ್ದು ಕವಿಯ ಮಹತ್ವದ ಬರಹಗಳು ಕೋಮುವಾದೀ ರಾಜಕಾರಣದ ಕಾರಣಕ್ಕೆ ಮೂಲೆಗುಂಪಾಗಬಾರದು. ಧರ್ಮಕಾರಣಗಳು ಭಾವಗಳ ತಡೆಯುವ ಅಡ್ಡಗೋಡೆಗಳಾಗಬಾರದು. ಫೈಜ್ ಜನತೆಯ ಕವಿ. ಅವರ ಕಾವ್ಯ ಜನರ ಕಾವ್ಯ. ಚಿಲಿ ದೇಶದ ನೆರೋದನ ಕಾವ್ಯದಂತೆ ಫೈಜ್‌ರವರ ಕಾವ್ಯ ಕೂಡ ಜನರ ಕಾವ್ಯ. ಪ್ರಭುತ್ವಗಳಿಂದ ಅದನ್ನು ತಡೆಯಲು ಸಾಧ್ಯವಿಲ್ಲ. ಸಮಾಜವಾದಕ್ಕೆ ಬದ್ಧನಾದ ಫೈಜ್‌ರವರು ವಾಸ್ತವದ ಕುರಿತೇ ಬರೆದರು. ಬದುಕಿಗೂ ಬರಹಕ್ಕೂ ವ್ಯತ್ಯಾಸ ವಿಲ್ಲದಂತೆ ಬದುಕಿದರು. ಆ ಮಹೋನ್ನತ ಸಮಾಜವಾದೀ ಕವಿಯ ಬದುಕು-ಬರಹಗಳು ಕನ್ನಡ ಕಾವ್ಯಕ್ಕೆ, ಕನ್ನಡಿಗರು ಘನತೆಯಿಂದ ಬದುಕುವುದಕ್ಕೆ ಪ್ರೇರಣೆಯಾಗುವುದಾದರೆ, ಅದೇ ಫೈಜ್‌ರವರಿಗೆ ನೀಡುವ ಉನ್ನತ ಮಟ್ಟದ ಗೌರವ. ಫೈಜ್ ನಾಮಾ ಕೃತಿಯನ್ನು ಅನುವಾದಿಸಿ ಕನ್ನಡ ಸಾಹಿತ್ಯ ಲೋಕಕ್ಕೆ ಅರ್ಪಿಸಲು ಶ್ರಮಿಸಿದವರೆಲ್ಲ ಅಭಿನಂದನಾರ್ಹರು.

**ನಫೀಸಾ**
೫ ಎ, ೧ನೇ ಮಹಡಿ, ೧ನೇ ಬ್ಲಾಕ್, ೩ನೇ ಮುಖ್ಯ ರಸ್ತೆ
ಆರ್. ಟಿ. ನಗರ, ಬೆಂಗಳೂರು - ೫೬೦ ೦೩೨

# ದ್ರೋಣನ ಪಾಪಪ್ರಜ್ಞೆ ಮತ್ತು ನಾವು

ಡಾ|| ಕಾ. ವೆಂ. ಶ್ರೀನಿವಾಸಮೂರ್ತಿ

ದ್ರೋಣ ಮತ್ತು ಏಕಲವ್ಯರನ್ನೊಳಗೊಂಡ ಕಥನ ಕಳೆದ ನೂರು ವರ್ಷಗಳಲ್ಲಿ ಅನೇಕ ನಾಟಕಗಳಲ್ಲಿ, ಅನೇಕ ವಿಮರ್ಶೆಗಳಲ್ಲಿ ಪ್ರಕಟಗೊಂಡಿದೆ. ದ್ರೋಣ ತನ್ನ ಗುರುದಕ್ಷಿಣೆಯ ಹೆಸರಿನಲ್ಲಿ ಏಕಲವ್ಯನ ಹೆಬ್ಬೆರಳನ್ನು ಕೇಳುವುದು ಮತ್ತು ಏಕಲವ್ಯ ಈ ತನ್ನ ನಾಮಾಂಕಿತ ಗುರು ದ್ರೋಣನಿಗೆ ಅದನ್ನು ಕತ್ತರಿಸಿ ಕೊಡುವುದು ಈ ಕಥನಗಳ ಮುಖ್ಯ ಕೇಂದ್ರವಾಗಿದೆ. ಗೋವಿಂದ ಪೈ ಅವರ 'ಹೆಬ್ಬೆರಳು', ಕುವೆಂಪು ಅವರ 'ಬೆರಳ್‌ಗೆ ಕೊರಳ್', ಸಿದ್ಧಲಿಂಗಯ್ಯ ಅವರ 'ಏಕಲವ್ಯ' ಮುಂತಾದ ನಾಟಕಗಳು, ಟಿ. ಪಿ. ಕೈಲಾಸಂ, ಪರ್ವತವಾಣಿ ಮುಂತಾದ ಅನೇಕರು ಸಹ ಬರೆದ ನಾಟಕಗಳು ದೊಡ್ಡ ಸಾಲಿನಲ್ಲಿ ಇವೆ. ಇವುಗಳಲ್ಲಿ ಏಕಲವ್ಯ ಉದಾತ್ತ ನಾಯಕನಾಗಿ, ದ್ರೋಣ ಪ್ರತಿ ನಾಯಕನಾಗಿ ಕಂಡುಬರುತ್ತಾನೆ. ಹಾಗಾಗಿ ಯಾರಿಗೇ ಆದರೂ ಮೊದಲು ಸೆಳೆಯುವುದು 'ಏಕಲವ್ಯ'ನ ಪಾತ್ರವೇ. ಇಲ್ಲಿ ತಾನು ಬೆರಳನ್ನು ಕಳೆದುಕೊಳ್ಳುವುದರಿಂದ ಹಾಗೂ ಈ ಮೂಲಕ ಶೋಷಿತನಾಗಿರುವುದರಿಂದ ಸಹಜವಾಗಿ ಯಾರ ಅನುಕಂಪವನ್ನಾದರೂ ಈತ ಮೊದಲು ಗಳಿಸುತ್ತಾನೆ. ಈ ಕ್ರಮದಲ್ಲಿ ನನ್ನ ಈವರೆಗಿನ ಓದು ಸಹ ಇತ್ತು. ಆದರೆ ಈ ಬಾರಿ ಕುವೆಂಪು ಅವರ 'ಬೆರಳ್‌ಗೆ ಕೊರಳ್' ನಾಟಕವನ್ನು ಓದುವಾಗ ಏಕಲವ್ಯನ ಪಾತ್ರಕ್ಕಿಂತ ದ್ರೋಣನ ಪಾತ್ರವೇ ನನ್ನನ್ನು ಹೆಚ್ಚು ಆಕರ್ಷಿಸಿತು. ಅದಕ್ಕೆ ಕಾರಣಗಳಿವೆ. ಆ ಕಾರಣಗಳ ಕಾಣ್ಕೆಯಲ್ಲಿಯೇ ಕುವೆಂಪು ಅವರು ನಾಟಕವನ್ನು ಬರೆದಿರುವುದು.

ಅದೆಂದರೆ ಏಕಲವ್ಯ ಇಲ್ಲಿ ಶೋಷಿತ. ಅನ್ಯರ ಮಾತಿಗಾಗಿ ತನ್ನ ಬೆರಳನ್ನು ಕಳೆದುಕೊಂಡಿದ್ದಾನೆ. ಆದರೆ ಈ ಅರಿವು ತನಗೆ ಇದೆಯೇ ? ಇಲ್ಲ. ಆದರೆ ಈ ಅರಿವು ದ್ರೋಣನಿಗಿದೆ. ಅಶ್ವತ್ಥಾಮ ಸಹ ಇದನ್ನು ಮೊದಲಿಗೆ ಊಹಿಸಿದ್ದಾನೆ. ಆದ್ದರಿಂದಲೇ ಈ ಪ್ರಮಾದವನ್ನು ತಪ್ಪಿಸಲು ತನ್ನ ತಂದೆ ದ್ರೋಣನೊಂದಿಗೆ ಸಾಕಷ್ಟು ವಾದ ಹೂಡಿ ಅದಕ್ಕೆ ತಡೆಯೊಡ್ಡಲು ಪ್ರಯತ್ನಿಸುವುದು. ಆದರೆ ಅದು ವಿಫಲ ಪ್ರಯತ್ನವಾಗುತ್ತದೆ. ಅದನ್ನು ಮೀರಿ ದ್ರೋಣ ಏಕಲವ್ಯನನ್ನು ಸಂಧಿಸುತ್ತಾನೆ. ಈ ಕ್ರಮದಲ್ಲಿ ತಾನು ತನ್ನ ಮಗನೊಂದಿಗಿನ ಅಧಿಕಾರದ ಸಂಬಂಧವನ್ನು ಬಳಸಿಕೊಳ್ಳುತ್ತಾನೆ. ತಂದೆಯಾಗಿ ತಾನು ಹೇರಿದ ನಿರ್ಬಂಧಕ್ಕೆ ಮಗನಾದ ಅಶ್ವತ್ಥಾಮ ಹಿಂದಕ್ಕುಳಿಯಲೇಬೇಕಾಗುತ್ತದೆ. ಪರಿಣಾಮವಾಗಿ ದ್ರೋಣ ಏಕಲವ್ಯನ ಬೆರಳನ್ನು ನಿರಾಯಾಸವಾಗಿ ಪಡೆಯುವುದು ಸಾಧ್ಯವಾಗುತ್ತದೆ.

ಏನೇ ಆದರೂ ಇಲ್ಲಿ ದ್ರೋಣ ಶೋಷಕ ಆಗುತ್ತಾನೆ. ಏಕಲವ್ಯ ಶೋಷಿತ ಆಗುತ್ತಾನೆ. ಈ ಸ್ಪಷ್ಟ ಅರಿವು ದ್ರೋಣನಿಗಿದೆ. ತನ್ನ ಈ ಶೋಷಣೆಗೆ ಮೂಲ ತಾನು ಅರಸು ಕುಲದೊಂದಿಗೆ ಇರಿಸಿಕೊಂಡಿರುವ ಜೋಳವಾಳಿಯೆಂಬುದಾಗಿದೆ. ಅದರಲ್ಲೂ ತಾನು ಅರ್ಜುನನನ್ನು ಬಿಲ್ವಿದ್ಯೆಯಲ್ಲಿ ಜಗದಲ್ಲಿ ಅದ್ವಿತೀಯನನ್ನಾಗಿ ಮಾಡುವೆನೆಂಬ ಕೊಟ್ಟ ಮಾತು ಸಹ ಇಲ್ಲಿದೆ. ಇಂತಹ ಜೋಳವಾಳಿಯೊಂದಿಗೆ ಅರ್ಜುನನ ಮತ್ಸರವೂ ಸೇರಿರುವುದರಿಂದ ತಾನು ವ್ಯವಸ್ಥೆ ಮತ್ತು ಸನ್ನಿವೇಶದ ಕೂಸಾಗಿ ಏಕಲವ್ಯನ ವಿಚಾರದಲ್ಲಿ ಶೋಷಕನಾಗಬೇಕಾಗಿದೆ.

ಹೀಗೆ ದ್ರೋಣ ಶೋಷಕನಾದ ಹಿನ್ನೆಲೆ, ಅದರ ಸ್ವರೂಪ, ಆ ಶೋಷಣೆಗೆ ಗುರಿಯಾದ ಶೋಷಕ ಯಾರು ? ಎಂಬ ಎಲ್ಲ ವಿವರಗಳ ಬಗೆಗಿನ ಅರಿವು ಅಥವಾ ಪ್ರಜ್ಞೆ ದ್ರೋಣನಿಗಿದೆ. ಈ ಪ್ರಜ್ಞೆ ತನಗಿದ್ದುದರಿಂದಲೇ ಅಮಾಯಕನಾದ ಏಕಲವ್ಯನ ಹೆಬ್ಬೆರಳನ್ನು ಪಡೆಯುವ ಕೃತ್ಯ ಪಾಪದ್ದು ಎಂದು ತನಗೆ ಅನ್ನಿಸುವುದು. ಅಂತಹ ಪಾಪ ಪ್ರಜ್ಞೆ ತನಗೆ ಮೊಳೆಯುವುದರಿಂದಲೇ ಹೆಬ್ಬೆರಳು ಕತ್ತರಿಸಿ ಬಿದ್ದಿರುವ ರಕ್ತದ ಮಡುವಿನಲ್ಲಿ ಆ ಬೆರಳಿಗೆ ಪ್ರತಿಯಾಗಿ ತನ್ನ ಕೊರಳಿನಿಂದ ಬೇರಾದ ರುಂಡ ಅಲ್ಲಿ ಕತ್ತರಿಸಿಕೊಂಡು ಬಿದ್ದಂತೆ ಕಾಣುವುದು. ಈ ಪಾಪಪ್ರಜ್ಞೆ ತನಗೆ ಇಲ್ಲದೇ ಹೋಗಿದ್ದರೆ ರಕ್ತದ ಮಡುವನ್ನು ಬಾಗಿ ನೋಡಿದಾಗ ಅಲ್ಲಿ ಬೆರಳು ಮಾತ್ರ ಕಾಣಬೇಕಿತ್ತು. ಆದರೆ ಅದು ಮುಖ್ಯವಾಗಿ ಕಾಣದೆ, ಅಲ್ಲಿ ಸ್ಪಷ್ಟವಾಗಿ ಮುಂಡದಿಂದ ಕತ್ತರಿಸಿಕೊಂಡಂತೆ ರುಂಡ ಮಾತ್ರ ಕಾಣುವುದು ಸಾಧ್ಯವಾಗಿದೆಯೆಂದರೆ ಅದಕ್ಕೆ ಕಾರಣ ಪಾಪಪ್ರಜ್ಞೆ ಮಾತ್ರವೇ ಆಗಿದೆ. ಹೆದರುಪುಕ್ಕಲನಿಗೆ



*ಏಕಲವ್ಯ ಇಲ್ಲಿ ಶೋಷಿತ. ನೋವನ್ನು ಉಂಡವನು. ಶೋಷಣೆ ಇಲ್ಲಿ ಯಾರೇ ಮಾಡಿದರೂ ನೋವು ಮೊದಲಿಗೆ ಅರಿವಿಗೆ ಬರುವುದು ಶೋಷಿತನಿಗೇ. ಆದರೆ ಏಕಲವ್ಯನಿಗೆ ಆ ಪ್ರಜ್ಞೆ; ಅರ್ಥಾತ್ ಶೋಷಿತ ಪ್ರಜ್ಞೆ ಇಲ್ಲಿ ಮೂಡಿಲ್ಲ. ಹಾಗಾಗಿ ಬೆರಳನ್ನು ಕೊಟ್ಟ ನಂತರವೂ ತಾನು ನಿರಾಳವಾಗಿ ಉಳಿಯುತ್ತಾನೆ. ತನ್ನ ಅಬ್ಬೆ ನೊಂದು, ಅದಕ್ಕೆ ಕಾರಣನಾದವನಿಗೆ ಶಾಪ ಹಾಕುವಾಗಲೂ ತಾನು ಗುರುವಿನ ಪರವಾಗಿ ನೋಯುತ್ತಾನೆ ಎಂದರೆ ತಾನು ಇಲ್ಲಿ ಶೋಷಿತನಾಗಿದ್ದೇನೆ ಎಂಬ ಪ್ರಜ್ಞೆ ತನಗೆ ಲವಲೇಶವೂ ಇಲ್ಲ ಎಂಬುದು ಸ್ಪಷ್ಟವಾಗುತ್ತದೆ.*

ಹಗ್ಗವೂ ಹಾವಾಗಿ ಕಾಣುವಂತೆ ಅಪರಾಧೀ ಪ್ರಜ್ಞೆ ಇರುವವನಿಗೆ ಎಲ್ಲರಲ್ಲಿಯೂ ಗುಪ್ತದಳದವರು ಕಾಣುವಂತೆ ತಾನು ಪಾಪ ಮಾಡಿದ್ದೇನೆಂಬ ಪ್ರಜ್ಞೆಯನ್ನು ಹೊತ್ತ ದ್ರೋಣನಿಗೆ ಸಹಜವಾಗಿಯೇ ಬೆರಳ್‌ಗೆ ಪ್ರತಿಯಾಗಿ ಕೊರಳ್ ಎಂಬ ಮುಂಗಾಣ್ಕೆ ಕಾಣುತ್ತದೆ.

ಇದು ಯಾಕೆ ಸಾಧ್ಯವಾಯಿತೆಂದರೆ ದೇವನೂರ ಮಹಾದೇವ ಅವರು ತಮ್ಮ 'ಎದೆಗೆ ಬಿದ್ದ ಅಕ್ಷರ' ಎಂಬ ಕೃತಿಯ ಒಂದು ಲೇಖನದಲ್ಲಿ ಹೇಳುವಂತೆ, ಹಿಂಸೆಯನ್ನು ಸಾಂದರ್ಭಿಕವಾಗಿ ಮಾಡಿದವನಿಗೆ ಪಾಪಪ್ರಜ್ಞೆ ಇರುತ್ತದೆ. ಆದರೆ ಅದನ್ನು ತಾತ್ವೀಕರಿಸಿಕೊಂಡವನಿಗೆ ಆ ಪ್ರಜ್ಞೆಯಿರುವುದಿಲ್ಲ. ಬದಲಿಗೆ ಆತ ಆ ಹಿಂಸೆಯನ್ನು ಮಾಡಿ ತಲೆಯೆತ್ತಿಕೊಂಡೇ ನಡೆಯುತ್ತಾನೆ. ಅಂತಹ ಕ್ರಿಯೆ ಬಾಬರಿ ಮಸೀದಿ ಧ್ವಂಸದಲ್ಲಿ ಸಹ ಇದೆ ಎಂದು ಅವರು ಚರ್ಚಿಸುತ್ತಾರೆ. ಇದೇ ನೆಲೆಯಲ್ಲಿ ಹರಿಹರನ 'ಏಣಾಧಿನಾಥನ ರಗಳೆ'ಯ ನಾಯಕ ಏಣಾಧಿನಾಥ ಸಹ ಕಾಣುತ್ತಾನೆ. ಈತ ವೀರ ಮಾಹೇಶ್ವರ. ಈತ ಶೈವರಲ್ಲದವರನ್ನು ಸಹಿಸುವುದಿಲ್ಲ. ಅವರನ್ನು ಹಿಂಸಿಸಿ ಗಣ ಪದವಿಯನ್ನು ಪಡೆಯುತ್ತಾನೆ. ಇಂಥವರ ಕೂಸುಗಳು ಎಲ್ಲ ಶತಮಾನ ಗಳಲ್ಲೂ ಇದ್ದಾರೆ. ಇವರಿಗೆ ಸೌಹಾರ್ದವೆಂದರೆ ಆಗದು. ಕೋಮುವಾದ ಎಂಬುದು ಮಾತ್ರ ಇವರಿಗೆ ಸಹ್ಯ. ಇಂಥವರ ಹೊಸ ತಲೆಮಾರು ಇಂದು ನಮ್ಮೊಡನೆ ಇದೆ. ಇವರು ಈ ಬಗೆಯ ಮತೀಯ ಹಿಂಸೆಯನ್ನು ಸಾಂದರ್ಭಿಕವಾಗಿ ಮಾಡುವ ಪಾಪಪ್ರಜ್ಞೆಯವರಲ್ಲ; ಅದನ್ನು ತಾತ್ವೀಕರಿಸಿಕೊಂಡ ಅಮಾನುಷರು. ಇವರಿಗೆ ತಮ್ಮ ಅಮಾನುಷತ್ವದ ಬಗೆಗೆ ಅರಿವಿಲ್ಲ. ಹಾಗೊಮ್ಮೆ ಇದ್ದರೂ ಅದು ಹೆಮ್ಮೆಯ ಭಾವದ್ದೇ ಆಗಿದೆ.

ಈ ವಿವರಗಳನ್ನು ಇಲ್ಲಿ ಯಾಕೆ ತಂದೆನೆಂದರೆ ಇಲ್ಲಿ ಶೋಷಿತನ ಸ್ಥಾನದಲ್ಲಿ ಕಾಣುವ ದ್ರೋಣನಿಗೆ ತಾನು ಮಾಡಿದ ಕೃತ್ಯದ ಬಗ್ಗೆ ಗುಣಾತ್ಮಕ ಭಾವವಿಲ್ಲ. ಬದಲಿಗೆ ನೇತ್ಯಾತ್ಮಕ ಭಾವವಿದೆ. ಅದು ತಾನು ಪಾಪವನ್ನು ಮಾಡಿದ್ದೇನೆಂಬ ಪ್ರಜ್ಞೆ ಇಲ್ಲಿ ತಾನು ಮಾಡಿದ ಹಿಂಸೆಯನ್ನು ತಾನು ತಾತ್ವೀಕರಿಸಿಕೊಂಡಿಲ್ಲ. ಹಾಗೊಮ್ಮೆ ಅದನ್ನು ಹಾಗೆ ತಾತ್ವೀಕರಿಸಿಕೊಂಡಿದ್ದರೆ ತಾನು ನಿರ್ಭಿಡೆಯಿಂದ ಶೋಷಣೆ ಮಾಡುತ್ತ ಬಂದಿರುವ ಶೋಷಕ ವರ್ಗದ ವಕ್ತಾರನೇ ಆಗುತ್ತಿದ್ದನು. ಆದರೆ ಇಲ್ಲಿ ತಾನು ಹಾಗೆ ಆಗುವುದಿಲ್ಲ. ಬದಲಿಗೆ ತನ್ನ ಪಾಪಕೃತ್ಯವನ್ನು ಸಾಂದರ್ಭಿಕವಾಗಿ ಮಾಡಿದ್ದೇನೆಂಬ ಅರಿವು ಇದೆ. ಹಾಗಾಗಿ ಆತನಿಗೆ ಪಾಪಪ್ರಜ್ಞೆ ಕಾಡುತ್ತದೆ.

ದ್ರೋಣನ ಈ ಪಾಪಪ್ರಜ್ಞೆ ನಮಗೆ ಇಂದು ಯಾಕೆ ಮುಖ್ಯ? ಈತ ಏಕಲವ್ಯನಿಗಿಂತ ನಮಗೆ ಯಾಕೆ ಮುಖ್ಯವಾಗಿ ಕಾಡಬಲ್ಲ? ಎಂಬ ಪ್ರಶ್ನೆಗಳು ಕಾಡುತ್ತವೆ.

ಏಕಲವ್ಯ ಇಲ್ಲಿ ಶೋಷಿತ. ನೋವನ್ನು ಉಂಡವನು. ಶೋಷಣೆ ಇಲ್ಲಿ ಯಾರೇ ಮಾಡಿದರೂ ನೋವು ಮೊದಲಿಗೆ ಅರಿವಿಗೆ ಬರುವುದು ಶೋಷಿತನಿಗೇ. ಆದರೆ ಏಕಲವ್ಯನಿಗೆ ಆ ಪ್ರಜ್ಞೆ; ಅರ್ಥಾತ್ ಶೋಷಿತ ಪ್ರಜ್ಞೆ ಇಲ್ಲಿ ಮೂಡಿಲ್ಲ. ಹಾಗಾಗಿ ಬೆರಳನ್ನು ಕೊಟ್ಟ ನಂತರವೂ ತಾನು ನಿರಾಳವಾಗಿ ಉಳಿಯುತ್ತಾನೆ. ತನ್ನ ಅಬ್ಬೆ ನೊಂದು, ಅದಕ್ಕೆ ಕಾರಣನಾದವನಿಗೆ ಶಾಪ ಹಾಕುವಾಗಲೂ ತಾನು ಗುರುವಿನ ಪರವಾಗಿ ನೋಯುತ್ತಾನೆ ಎಂದರೆ ತಾನು ಇಲ್ಲಿ ಶೋಷಿತನಾಗಿದ್ದೇನೆ ಎಂಬ ಪ್ರಜ್ಞೆ ತನಗೆ ಲವಲೇಶವೂ ಇಲ್ಲ ಎಂಬುದು ಸ್ಪಷ್ಟವಾಗುತ್ತದೆ. ಇದರರ್ಥ ತನ್ನ ಭೌತಿಕ ನೋವು ತನ್ನ ಪರಮೋಚ್ಚ ಧ್ಯೇಯ ಸಾಧನೆಯ ನಿಮಿತ್ತ ಮಾತ್ರವಾಗಿದೆ. ಅದಕ್ಕಾಗಿ ತನಗೆ ಸಾರ್ಥಕ್ಯ ಭಾವನೆ ಇದೆ. ದೂರ ಶಿಕ್ಷಣದಲ್ಲಿ ತಾನು ವಿದ್ಯೆ ಪಡೆದಾಗಲೂ ತನಗಿರುವ ಈ ಭಾವ ಉದಾತ್ತವಾದುದೇ ಸರಿ. ಇದಕ್ಕೆ ವಿರುದ್ಧ ದಿಕ್ಕಿನಲ್ಲಿ ಸಾಂಪ್ರದಾಯಿಕ ಶಿಕ್ಷಣದಲ್ಲಿ ಅದೇ ಗುರುವಿನಿಂದ ಅರ್ಜುನ ಮೊದಲಾದವರು ಶಿಕ್ಷಣ ಪಡೆಯುತ್ತಿರುವುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು.

ಒಟ್ಟಾರೆ ಏಕಲವ್ಯ ತಾನು ಶೋಷಿತ ಎಂಬ ಜಾಗೃತ ಪ್ರಜ್ಞೆಯನ್ನು ಇಲ್ಲಿ ತಳೆಯುವುದಿಲ್ಲ. ಶೋಷಿತರಾದವರಿಗೆ ಇಂತಹ ಶೋಷಣೆಯ ಪ್ರಜ್ಞೆ ಮೊದಲಿಗೆ ಮೊಳೆಯ ಬೇಕಾದ್ದು ಸಹಜ. ಇದು ಎಂದಿನಿಂದಲೂ ಸಾಧ್ಯವಾಗುತ್ತ ಬಂದಿದೆ. ಆದರೆ ಅದನ್ನು ಪ್ರಕಟಿಸಲು ಸಾಧ್ಯವಾಗದ ಅಸಹಾಯಕ ಸ್ಥಿತಿ ಚರಿತ್ರೆಯ ಎಲ್ಲ ಕಾಲಘಟ್ಟಗಳಲ್ಲಿ ಇದ್ದ ಉಳ್ಳವರ ಪರವಾದ ವ್ಯವಸ್ಥೆಯಲ್ಲಿ ಇತ್ತು ಎಂಬುದು ಚರಿತ್ರೆ ಮತ್ತು ವರ್ತಮಾನವನ್ನು ಬಲ್ಲವರು ಸಹ ಬಲ್ಲರು. ಬಡವನ ಕೋಪ ರಟ್ಟೆಗಲ್ಲ; ದವಡೆಗೆ ಮೂಲ ಎಂಬ ಮಾತು ಸಹ ಈ ಹಿನ್ನೆಲೆಯಲ್ಲಿಯೇ ಅಲ್ಲವೆ ಹುಟ್ಟಿರುವುದು!

ಹೀಗೆ ನಿರೀಕ್ಷೆಗೆ ಅನುಗುಣವಾಗಿ ಏಕಲವ್ಯನಿಗೆ ಜಾಗೃತ ಪ್ರಜ್ಞೆ ಮೂಡಬೇಕಿತ್ತು. ಆದರೆ ಅದು ಮೂಡಿಲ್ಲ. ಆ ಪ್ರಜ್ಞೆ ಇಂದಿನ ಶೋಷಿತರಿಗೆ ಮುಂದುವರಿದರಂತೂ ಅಪಾಯ ದೊಡ್ಡದೇ ಆಗಿರುತ್ತದೆ. ಆದರೆ ಇದಕ್ಕೆ ವಿರುದ್ಧ ಗತಿಯಲ್ಲಿ ಇಲ್ಲಿ ಶೋಷಕನೆನಿಸಿದ ದ್ರೋಣನಿಗೆ ಆ ಪ್ರಜ್ಞೆ; ಅದು ಪಾಪಪ್ರಜ್ಞೆ ಮೂಡಿಬಿಡುತ್ತದೆ. ಅದು ಇಲ್ಲಿಯ ವಿಶೇಷ.

ಶೋಷಿತನಿಗೆ ತನ್ನ ಮೇಲಾಗುತ್ತಿರುವ ಶೋಷಣೆಯ ಕುರಿತಾದ ಜಾಗೃತ ಪ್ರಜ್ಞೆ ಮೂಡಿದಲ್ಲಿ ಸಮಾಜದಲ್ಲಿ ಬದಲಾವಣೆಯೆಂಬುದು ಇಂದು ಆರಂಭಗೊಂಡು ನಾಳೆ ಸಂಭವಿಸಬಹುದು. ಆದರೆ ಶೋಷಿತನಾದವನಿಗೆ ಆ ಕುರಿತ ಪಾಪಪ್ರಜ್ಞೆ ಮೂಡಿದಲ್ಲಿ ಇದೇ ಬದಲಾವಣೆ ನಾಳೆಯಲ್ಲ, ಇಂದೇ ಸಂಭವಿಸುತ್ತದೆ ಎಂದು ಭಾವಿಸಬಹುದಾಗಿದೆ. ಅಂಥದರಲ್ಲಿ ವರ್ಗರಹಿತ ಸಮಾಜ ಅಥವಾ ಸಮಸಮಾಜದ ಕಲ್ಪನೆ ಸಾಕಾರಗೊಳ್ಳುವುದು ಸುಲಭ. ಅದಕ್ಕೆ ಹಿಡಿಯಬೇಕಾದ ದಿಕ್ಕು ಹಿಡಿಯಬೇಕು; ಕ್ರಮಿಸಬೇಕಾದ ದಾರಿ ಕ್ರಮಿಸಬೇಕು. ಅಲ್ಲಿ ಸೈದ್ಧಾಂತಿಕ ನೆಲೆಗಟ್ಟು, ರಾಜಕೀಯ ದೃಷ್ಟಿಕೋನ ಇರಬೇಕು. ಅದು ಒಟ್ಟಾರೆ ವರ್ಗ ದೃಷ್ಟಿಕೋನವಲ್ಲದೆ ಬೇರೆಯಲ್ಲ, ಆ ಮಾತು ಬೇರೆ.

ಒಟ್ಟಾರೆ ಶೋಷಕ ವರ್ಗದ ವಕ್ತಾರನಾದ ದ್ರೋಣನಿಗೆ ಶೋಷಿತ ವರ್ಗದ ವಕ್ತಾರನಾದ ಏಕಲವ್ಯನಿಗಿಂತ ಮೊದಲಿಗೆ ತನ್ನ ಕೃತ್ಯದ ಬಗೆಗಿನ ಪ್ರಜ್ಞೆ ಮೂಡುವುದು ಚರಿತ್ರೆ ಮತ್ತು ವರ್ತಮಾನದತ್ತ ನಮ್ಮ ಕಣ್ಣನ್ನು ಹೊರಳಿಸುವಂತೆ ಮಾಡುತ್ತದೆ. ಚರಿತ್ರೆಯನ್ನು ಇಲ್ಲಿ ವಿವಕ್ಷಿಸುವುದಾದರೆ ಚೆನ್ನಣ್ಣ ವಾಲೀಕಾರ ಅವರು ತಮ್ಮ ಮಹಾಕೃತಿಯಾದ 'ವ್ಯೋಮಾವ್ಯೋಮ'ದಲ್ಲಿ ಒಂದೆಡೆ ಹೇಳಿರುವಂತೆ ನಮ್ಮ ಸಮಾಜದಲ್ಲಿ ಅನೇಕರಿಗೆ ಅನೇಕ ಮದಗಳಿವೆ. ಅವು ಸಾಮಾಜಿಕ ಮದಗಳು. ಅವುಗಳೆಂದರೆ : ಜಾತಿ ಮದ, ಲಿಂಗ ಮದ, ಧರ್ಮ ಮದ, ಧನ ಮದ, ವರ್ಗ ಮದ, ಪ್ರದೇಶ ಮದ, ರೂಪ ಮದ, ಅಧಿಕಾರ ಮದ ಇತ್ಯಾದಿ. ಈ ಮದಗಳನ್ನು ಹೊಂದಿರುವವರನ್ನು ನುಡಿಸುವುದು ಕಷ್ಟ! ಬಸವಣ್ಣ ಸಹ ಒಂದೆಡೆ ಧನ ಮದ ಇರುವವರನ್ನು ನುಡಿಸಲು ಬಾರದು ಎನ್ನುತ್ತಾನೆ. ಈ ಮದವೂ ಸೇರಿ ಇಲ್ಲಿಯ ಅನೇಕ ಮದಗಳು ಅನೇಕರಲ್ಲಿ ಇವೆ. ಇವುಗಳನ್ನು ಹೊಂದಿರುವವರು ಒಂದಲ್ಲ ಒಂದು ಬಗೆಯಲ್ಲಿ ತಮ್ಮ ಮದಕ್ಕೆ ಕಾರಣವಾದ ಅಂಶವು ಇಲ್ಲದ ಜನರನ್ನು ಎರಡನೆಯ ದರ್ಜೆಯವರನ್ನಾಗಿಯೇ ಕಾಣುತ್ತಾರೆ. ಧನಿಕ ಬಡವನನ್ನು ನೋಡುವ ಬಗೆ, ಬ್ರಾಹ್ಮಣ ಶೂದ್ರರನ್ನು ನೋಡುವ ಬಗೆ, ಶೂದ್ರರು ಅಸ್ಪೃಶ್ಯರನ್ನು ನೋಡುವ ಬಗೆ, ಪುರುಷ ಸ್ತ್ರೀಯನ್ನು ನೋಡುವ ಬಗೆ, ದೆಹಲಿಯವರು ದಕ್ಷಿಣ ಭಾರತದವರನ್ನು ಕಾಣುವ ಬಗೆ, ಯೂರೋಪು-ಅಮೇರಿಕಾದವರು ಏಷ್ಯಾದವರನ್ನು ಕಾಣುವ ಬಗೆ, ಬಿಳಿಯರು ಕರಿಯರನ್ನು ಕಾಣುವ ಬಗೆ, ಇಂಗ್ಲಿಷ್ ಬಲ್ಲವರು ತಮಗೆ ಹೊರತಾದವರನ್ನು ನೋಡುವ ಬಗೆ, ಪಟ್ಟಣಿಗರು ಹಳ್ಳಿಗರನ್ನು ನೋಡುವ ಬಗೆ ಇತ್ಯಾದಿ. ಇಲ್ಲಿಯೇ ಒಂದು ಪ್ರಸಂಗವನ್ನು ಉದಾಹರಿಸಬಹುದು. ಅದು ದೇವನೂರ ಮಹಾದೇವ ಅವರು ಶ್ರೀಕೃಷ್ಣ ಆಲನಹಳ್ಳಿ ಅವರ ಒಂದು ಪ್ರಸಂಗವನ್ನು ಕುರಿತು ಬರೆದದ್ದು. ಅದು ಹೀಗಿದೆ ಒಮ್ಮೆ ಶ್ರೀಕೃಷ್ಣ ಆಲನಹಳ್ಳಿ ಅವರು ದೇವನೂರ ಅವರ ಸಮ್ಮುಖದಲ್ಲಿಯೇ ತಮ್ಮ ತೋಟದಲ್ಲಿ ಕೆಲಸ ಮಾಡುವ ಆಳುಗಳನ್ನು ಒಡೆಯ ಮಾತಾಡಿಸುವ ಏಕವಚನಯುಕ್ತ ದೇಸೀ ಶೈಲಿಯಲ್ಲಿ ಮಾತನಾಡಿಸುತ್ತಾರೆ. ಇದನ್ನು ಕಂಡ ದೇವನೂರರಿಗೆ ನೋವಾಗುತ್ತದೆ ಹಾಗೂ ಇದು ಸರಿಯೇ ಎಂದು ಪ್ರಶ್ನಿಸುತ್ತಾರೆ. ಅದಕ್ಕೆ ಆಲನಹಳ್ಳಿ ಅವರು ಈ ಸಂದರ್ಭದಲ್ಲಿ ಇದು ಸರಿ ಎಂದು ವಾದಿಸುತ್ತಾರೆ. ಅಂತಹದ್ದೇ ಇನ್ನೊಂದು ಸಂದರ್ಭ ಸ್ವತಃ ಆಲನಹಳ್ಳಿ ಅವರಿಗೆ ದೇವರಾಜ ಅರಸು ಅವರ ಮನೆಯಲ್ಲಿ ಎದುರಾಗುತ್ತದೆ. ಆಗ ಇದ್ದ ಒಂದು ವ್ಯತ್ಯಾಸವೆಂದರೆ ಸ್ಥಾನಪಲ್ಲಟ. ಅಂದರೆ ಮೇಲ್ ಶ್ರೇಣಿಯಲ್ಲಿ ಅರಸು ಅವರ ಪತ್ನಿ ಹಾಗೂ ಕೆಳ ಶ್ರೇಣಿಯಲ್ಲಿ ಆಲನಹಳ್ಳಿ ಅವರು ಇದ್ದದ್ದು. ಇದಕ್ಕೆ ಕಾರಣ, ಅವರು ಅರಸು ಮನೆತನದವರು, ಇವರು ಸಾಮಾನ್ಯ ಹಳ್ಳಿಯ ಗೌಡ ಕುಟುಂಬದವರು ಎಂಬುದು. ಅಷ್ಟೊತ್ತಿಗಾಗಲೇ ಇವರಿಗೆ ಅನೇಕ ಸಾಹಿತ್ಯಕ ಪ್ರಶಸ್ತಿಗಳು ಲಭಿಸಿ ಪ್ರತಿಷ್ಠಿತರಾಗಿರುತ್ತಾರೆ; ಆ ಪ್ರತಿಷ್ಠೆ ತಮ್ಮ ಮನಸ್ಸಿನ

## ನೇತಾರ

**ನೇತಾರರನ್ನು ಮತ ಕೊಟ್ಟು**
**ಗೆಲ್ಲಿಸುತ್ತದೆ**
**ನಮ್ಮ ಸಮಾಜ,**
**ಪುಡಾರಿ ನೇತಾರರು**
**ಸರಕಾರಿ ಹಣದೋಚುತ್ತ,**
**ಮಾಡುತ್ತಿದ್ದಾರೆ ಮಜ.**

**ತಾರನಾಥ ಜಿ. ಮೇಸ್ತ, ಶಿರೂರು**
ಕರಿಕಟ್ಟೆ, ನಿತ್ಯಾನಂದ ನಗರ
ಕುಂದಾಪುರ ತಾ॥ 576228

# ಅತ್ಲಾಗೇ ಹೋಗಿಬಿಡ್ತಾರ



ಅವನು ಇಡೀ ಊರಿಗೆ ಧನಿಕನಾಗಿದ್ದ
ದೇವರಿಗೆ ಕಿರೀಟ ಮಾಡಿಸಿ ಇಟ್ಟಿದ್ದ
ಪುರೋಹಿತರಿಗೆ ಕೈತುಂಬ ದಾನ ಮಾಡ್ತಿದ್ದ
ಊರ ಜನರಿಗೆ ಸದಾ ಭೂರಿ ಭೋಜನ ಇದ್ದದ್ದೆ
ಇವತ್ತು ಆಕಸ್ಮಾತ್ ಸತ್ತುಹೋದ

ಸುಡುಗಾಡಿ ತನಕ ಸಾವಿರಾರು ಜನ
ಹೋಗಿ ಕಳಿಸಿ ಬಂದಿವಿ
ಮುಂದ ಅವ ಒಬ್ಬನೇ ಸ್ವರ್ಗಕ್ಕೆ ಹೋದನೊ !
ಎಲ್ಲಿ ಹೋದನೊ ! ಗೊತ್ತಿಲ್ರೆಪಾ

ಈ ತನಕ ಸತ್ತು ಹೋದವರು
ಯಾರೂ ತಿರುಗಿ ಬಂದು ಹೇಳೇ ಇಲ್ಲ

ನಾವು ದಿಲ್ಲಿಗೆ ಹೋದ್ರ
ರಾಮೇಶ್ವರಕ ಹೋದ್ರ
ಕಾಸಿಗೆ ಹೋದ್ರ ಕಾಬಾಕ್ಕೆ ಹೋದ್ರ
ತಿರುಗಿ ಬಂದು ಅಲ್ಲಿ ಸುದ್ದಿ ಹೇಳ್ತಿವಿ
ಇವರೇನೂ ಇಲ್ರೆಪಾ
ಹೋದರು ಹೋದರು ಹೋದರು
ಅತ್ಲಾಗSS ಹೋಗಿಬಿಡ್ತಾರ

**ಎಂ. ಡಿ. ಗೋಗೇರಿ**
ನವ ಅಯೋಧ್ಯಾನಗರ, ಹುಬ್ಬಳ್ಳಿ - ೫೮೦ ೦೨೪

ಮೂಲೆಯೊಂದರಲ್ಲಿ ಸಹ ನೆಲೆಗೊಂಡಿರುತ್ತದೆ. ಅಂತಹ ಸನ್ನಿವೇಶದಲ್ಲಿ ಅರಸು ಅವರ ಪತ್ನಿ ಅರಸು, ಮತ್ತು ಅವರ ಮಗಳ ಎದುರಿನಲ್ಲಿಯೇ ಇವರು... ಗೌಡನ ಮಗನಾ... ಎಂದು ಉದ್ಗರಿಸುತ್ತಾಳೆ. ಇದರಿಂದ ತನ್ನ ಪ್ರತಿಷ್ಠೆಗೆ ಧಕ್ಕೆಯುಂಟಾಗಿ ನೋವಾಗುತ್ತದೆ. ಈ ನೋವು ಇವರಿಗೆ ಇದ್ದ ಮೇಲೆ, ಇದೇ ನೋವು ಇವರ ತೋಟದಲ್ಲಿ ಇರುವ ಕೆಲಸದಾಳುಗಳಿಗೆ ಯಾಕಿರಬಾರದು ? ಇಲ್ಲಿ ಆಲನಹಳ್ಳಿ ಅವರ ಬಾಯಿ ಕಟ್ಟಾಕಿದಂತೆ ಅವರ ಬಾಯಿ ಸಹ ಅಲ್ಲಿ ಯಾಕೆ ಕಟ್ಟಾಕಿರಬಾರದು ? ಇದನ್ನು ಆಲನಹಳ್ಳಿ ಅವರು ದೇವನೂರ ಅವರ ಮುಂದೆ ಪ್ರಸ್ತಾಪಿಸುತ್ತಾರೆ. ದೇವನೂರ ಅವರು ಇದನ್ನು ಹೀಗೆ ಎಲ್ಲ ಮನುಷ್ಯರಿಗೂ ಸಮಾನ ಮನಃಸ್ಥಿತಿ ಇರುತ್ತದೆ ಎಂಬ ಒಳನೋಟವನ್ನು ಒಂದು ಲೇಖನದಲ್ಲಿ ಹೀಗೆ ಮೂಡಿಸುತ್ತಾರೆ. ಈ ಎಲ್ಲ ಮದಗಳು ಸಾಮಾಜಿಕವಾಗಿ ಪಾಪಕೃತ್ಯ ಮೂಲದವೇ ಆಗಿವೆ. ಆ ಪಾಪಪ್ರಜ್ಞೆ ಇಲ್ಲಿ ಮೊಳೆಯಿತೆಂದರೆ ಅನೇಕರು ಮೇಲ್ಜಾತಿ ಸೂಚಕ ಶಾಸ್ತ್ರಿ, ರಾವ್, ಗೌಡ ಮುಂತಾದ ಪದಗಳನ್ನು ತಮ್ಮ ಅಂಕಿತನಾಮಗಳಿಂದ ಕಿತ್ತೊಗೆಯುತ್ತಾರೆ ಎನ್ನಿಸುತ್ತದೆ.

ಒಟ್ಟಾರೆಯಾಗಿ ಅನೇಕ ಮದಗಳಿವೆ. ಇವುಗಳಿದ್ದಾಗ ತಾವು ಅನ್ಯರ ಮೇಲೆ ಮಾಡುವ ಸಾಮಾಜಿಕ ಹಿಂಸೆ ಅದು ಹಿಂಸೆಯೇ ಎನ್ನಿಸದು. ಅದಕ್ಕೆ ಕಾರಣ ದೇವನೂರ ಅವರು ಹೇಳುವಂತೆ ಅವರು ಈ ಹಿಂಸೆಯನ್ನು ತಾತ್ವೀಕರಿಸಿಕೊಂಡಿರುವುದು. ಅದನ್ನು ಸಾಂದರ್ಭಿಕವಾಗಿ ಆಚರಿಸುತ್ತಿದ್ದೇವೆ ಎಂದು ಬಲ್ಲವರಿಗೆ ಕನಿಷ್ಠ ಸಂಕೋಚ, ಮುಜುಗರವಾದರೂ ಇರುತ್ತದೆ. ಇದು ನಿರೀಕ್ಷಿತ. ಇರಲಿ.

ಏನೇ ಆದರೂ ಇಲ್ಲಿ ಶೋಷಿತನಿಗೆ ದುರ್ಲಭವಾದ ಪ್ರಜ್ಞೆ ಶೋಷಕನಿಗೆ ಉಂಟಾಗಿದೆ. ಅದು ದ್ರೋಣನಲ್ಲಿ ಮಾತ್ರ. ಅಂತಹ ದ್ರೋಣರು ಚರಿತ್ರೆಯಲ್ಲಿ ಮತ್ತು ಇಂದು ನಾವಾಗಿಲ್ಲವೇ ? ಈಗಾಗಲೇ ಪ್ರಸ್ತಾಪಿಸಿರುವಂತೆ ವರ್ಗ, ಜಾತಿ, ಧರ್ಮ, ಪ್ರದೇಶ, ಲಿಂಗ, ಭಾಷೆ ಮುಂತಾದ ಸ್ತರಗಳಲ್ಲಿ ನಾವಿಲ್ಲವೇ ? ನಮ್ಮಿಂದ ಶೋಷಿತರು ನರಳುತ್ತಿಲ್ಲವೇ ? ಅವರಿಗೆ ನೋವು ಇರುವಂತೆ ನಮಗೆ ಪಾಪಮೂಲದ ಸಾಮಾಜಿಕ ನೋವು ಕಾಡಬಾರದೇ ? ಆ ನೋವು ದ್ರೋಣನಲ್ಲಿ ಏಕಲವ್ಯ ಪಡುತ್ತಿರುವ ಕತ್ತರಿಸಿಕೊಂಡ ಹೆಬ್ಬೆರಳಿನ ನೋವಿಗಿಂತ ಅಧಿಕವಾಗಿ ಉಂಟಾಗಿದೆಯಲ್ಲವೇ ?

ಹೀಗೆ ಭಾರತದ, ವಿಶ್ವದ ಪ್ರತಿಯೊಬ್ಬರಲ್ಲಿಯೂ ದ್ರೋಣ ಇದ್ದಾನೆ. ಕೆಲವರಲ್ಲಿ ಒಬ್ಬ ಅಥವಾ ಕೆಲವು ದ್ರೋಣಂದಿರು ಇದ್ದರೆ ಇನ್ನೂ ಕೆಲವರಲ್ಲಿ ಹೆಚ್ಚು ದ್ರೋಣಂದಿರು ಇದ್ದಾರೆ. ಉದಾಹರಣೆಗೆ, ಕೆಳಜಾತಿಯ ಪುರುಷನಲ್ಲಿ ಪುರುಷನೆಂಬ ದ್ರೋಣ ಇದ್ದರೆ ಮೇಲ್ಜಾತಿಯ ಪುರುಷನಲ್ಲಿ ಜಾತಿ ಮತ್ತು ಪುರುಷ ಎಂಬ ಇಬ್ಬರು ದ್ರೋಣಂದಿರು ಇದ್ದಾರಲ್ಲವೇ ! ಆದ್ದರಿಂದಲೇ ಪ್ರತಿಯೊಬ್ಬರಲ್ಲಿಯೂ ದ್ರೋಣ ಅಥವಾ ದ್ರೋಣಂದಿರು ವ್ಯತ್ಯಸ್ಥಗೊಂಡ ಸಂಖ್ಯೆಯಲ್ಲಿ ಇದ್ದಾರೆ. ಇದನ್ನು ಅರಿಯಬೇಕು ಅಥವಾ ಆ ಅರಿವು ಮೂಡಬೇಕು. ಆಗ ನಮ್ಮನ್ನು ನಡೆಸುವ ಸಿದ್ಧಾಂತಗಳು, ಚರಿತ್ರೆಯ ಪಾಠಗಳು, ಸಾಹಿತ್ಯದ ಸಂವೇದನೆಗಳು ನಮಗೆ ಆದ್ಯತೆಯಾಗುತ್ತವೆ. ಅಂತಹ ಕನಸು ಕಂಡ ಯಾರಿಗಾದರೂ ಒಂದಲ್ಲ ಒಂದು ಮಟ್ಟದಲ್ಲಿ ನನಸು ಸಾಧ್ಯ. ಅಂತಹ ಆಶಾವಾದವೇ ಚರಿತ್ರೆಯನ್ನು ಆರೋಗ್ಯಕರ ದಿಕ್ಕಿನತ್ತ ನಡೆಸುತ್ತ ಬಂದಿರುವುದು. ಅದು ಮುಂದುವರಿಯಬೇಕು. ಅದನ್ನು ಮುಂದುವರಿಸುವುದು ಅಸಾಧ್ಯವೆಂದು ಅನ್ನಿಸಿದಾಗ ಹಿಂದಕ್ಕಂತೂ ಜಗ್ಗಿಸಕೂಡದು. ಅದನ್ನು ಮುಂದುವರಿಸುವವರು ಚರಿತ್ರೆಯಲ್ಲಿ ಇರುವಂತೆ ಭವಿಷ್ಯದಲ್ಲಿ ಸಹ ಇರುತ್ತಾರೆ. ಕಡೆಯ ಪಕ್ಷ ಅದಕ್ಕೆ ನಾವು ಸೇತುವೆಯಾದರೂ ಆಗಬೇಕಿದೆ.

**ಡಾ|| ಕಾ. ವೆಂ. ಶ್ರೀನಿವಾಸಮೂರ್ತಿ**
ಸಹ ಪ್ರಾಧ್ಯಾಪಕ, ಕನ್ನಡ ವಿಭಾಗ, ಸ್ನಾತಕೋತ್ತರ ಕೇಂದ್ರ
ಬೆಂಗಳೂರು ವಿಶ್ವವಿದ್ಯಾಲಯ
ಮಂಗಸಂದ್ರ, ಕೋಲಾರ - ೫೬೩ ೧೦೩




# ನಿಮ್ಮ ಅಕ್ಷಾಂಶ ತಿಳಿಸುವ ಸೂರ್ಯ

ನೀಲಿ ಬಣ್ಣದ ಆಕಾಶ ಬೂದು ಬಣ್ಣಕ್ಕೆ ತಿರುಗುತ್ತಿದ್ದಂತೆಯೇ ಸಂಜೆಯ ಆಕಾಶದಿಂದ ಒಂದೊಂದಾಗಿ ಗ್ರಹಗಳು ದೂರವಾಗುತ್ತವೆ. ಪಶ್ಚಿಮದಲ್ಲಿ ಕಾಣುತ್ತಿದ್ದ ಮಂಗಳ, ಬುಧ ಎರಡೂ ದಿಗಂತದ ಅಂಚನ್ನು ದಾಟುತ್ತವೆ. ಮಂಗಳವನ್ನು ಹುಡುಕಲು ಕೊನೆಯ ಅವಕಾಶ ಅಮಾವಾಸ್ಯೆಯ ಮರುದಿನ.

ಆ ದಿನ ಚಂದ್ರನನ್ನು ಹುಡುಕುವುದು ಸಾಧ್ಯವಾದರೆ ಪಕ್ಕದಲ್ಲಿ ಮಂಗಳವನ್ನೂ ನೋಡಬಹುದು. ಹೀಗಾಗಿ ಸಂಜೆಯಲ್ಲಿ ಉಳಿಯುವ ಗ್ರಹ ಗುರು ಮಾತ್ರ. ೧೮ರಂದು ಇದು ಚಂದ್ರನ ಸನಿಹದಲ್ಲಿಯೇ ಕಾಣುವ ಸಂದರ್ಭ ಇದೆ. ಗುರುಗ್ರಹದ ಪಕ್ಕದಲ್ಲಿಯೇ ರೋಹಿಣಿ ಮತ್ತು ಕೃತ್ತಿಕಾ ನಕ್ಷತ್ರಗಳನ್ನೂ ಕಾಣಬಹುದು.




ಅತಿ ಪ್ರಕಾಶಮಾನವಾದ ನಕ್ಷತ್ರ ಲುಬ್ಧಕ (ಸಿರಿಯಸ್) ಮತ್ತು ಅಗಸ್ತ್ಯ (ಕೆನೋಪಸ್) ಇವುಗಳನ್ನು ಮಹಾಶ್ವಾನ ಮತ್ತು ದೇವನೌಕೆ ಪುಂಜಗಳಲ್ಲಿ ಸುಲಭವಾಗಿ ಗುರುತಿಸಬಹುದು. ಮಹಾವ್ಯಾಧ, ವಿಜಯಸಾರಥಿ ಈ ಪುಂಜಗಳನ್ನು ಗುರುತಿಸಬಹುದು. ಶುಭ್ರ ಆಕಾಶವಿದ್ದಲ್ಲಿ ದಕ್ಷಿಣದಲ್ಲಿ ಅಗಸ್ತ್ಯದ ಪಕ್ಕದಿಂದ ಹೊರಟು ಮಹಾವ್ಯಾಧದ ಮೂಲಕ ಹಾದು ಉತ್ತರದಲ್ಲಿ ಕುಂತಿಯವರೆಗೂ ಹರಿಯುವ ಆಕಾಶಗಂಗೆಯನ್ನು ಕಾಣಬಹುದು. ಅದರ ಪಕ್ಕದಲ್ಲಿ ಪಾರ್ಥ ಕಾಣಬಹುದು. ಈಶಾನ್ಯದಲ್ಲಿ ಸಪ್ತರ್ಷಿಮಂಡಲ ಪೂರ್ವದಲ್ಲಿ ಸಿಂಹ ಮತ್ತು ಮಿಥುನ ಇವುಗಳನ್ನು ಕಾಣಬಹುದು.

ಇನ್ನೊಂದು ಗ್ರಹ ಶನಿ. ಮಧ್ಯರಾತ್ರಿಯ ನಂತರ ಉದಯಿಸುತ್ತದೆ. ೪ರಂದು ಮತ್ತು ೨೯ರಂದು ಬೆಳಗಿನ ಜಾವ ಚಂದ್ರನ ಪಕ್ಕದಲ್ಲಿ ಕಾಣುತ್ತದೆ. ಬುಧ, ಶುಕ್ರ ಮತ್ತು ಮಂಗಳವನ್ನು ನೋಡುವ ಅವಕಾಶ ಇಲ್ಲ, ಅದೇಕೆ ಎಂದು ತಿಳಿಯೋಣ.

ಕಳೆದ ತಿಂಗಳು ಸಂಜೆಯಲ್ಲಿದ್ದ ಬುಧ ಗ್ರಹ ಸೂರ್ಯನ ಮುಂದೆ ಹಾದು ಹಿನ್ನಡೆದಾಗ ಬೆಳಗಿನ ಜಾವ ಕಾಣುತ್ತದೆ. ತಿಂಗಳ ಕೊನೆಗೆ ಅದು ಗರಿಷ್ಠ ಕೋನದಲ್ಲಿ ಕಾಣುವ ಸಂದರ್ಭವಿದೆ. ಶುಕ್ರ ಗ್ರಹ ಸೂರ್ಯನ ಇನ್ನೊಂದು ಬದಿಯಿಂದ ಹಾದು ಹೋಗುವ ಕಾರಣ ಮುಂಜಾವಿನ ಬದಲಾಗಿ ಸಂಜೆ ಕಾಣಿಸತೊಡಗುತ್ತದೆ. ಮುಂದಿನ ತಿಂಗಳುಗಳಲ್ಲಿ ಸಂಜೆಯ ಆಕಾಶದಲ್ಲಿ ಕಾಣುತ್ತದೆ. ಹೀಗೆ ಈ ಎರಡೂ ಗ್ರಹಗಳೂ ಸೂರ್ಯನನ್ನು ಹಾಯುವ ಘಟನೆಗೆ ಯುತಿ ಎಂದು ಹೆಸರು. ಬುಧ ಸೂರ್ಯನಿಗೂ ಭೂಮಿಗೂ ಮಧ್ಯ ಹಾದು ಹೋಗುತ್ತದೆ. ಇದಕ್ಕೆ ನೀಚಯುತಿ ಎಂದು ಹೆಸರು. ಶುಕ್ರಕ್ಕೂ ಭೂಮಿಗೂ ಮಧ್ಯೆ ಸೂರ್ಯ ಬರುವ ಘಟನೆಗೆ ಉಚ್ಚಯುತಿ ಎಂದು ಹೆಸರು. ಮಂಗಳ, ಗುರು, ಶನಿ ಇವು ಹೀಗೆ ಭೂಮಿ-ಸೂರ್ಯರ ನಡುವೆ ಹಾದು ಹೋಗುವುದು ಸಾಧ್ಯವೇ ಇಲ್ಲ. ಆದ್ದರಿಂದ ಇವುಗಳಿಗೆ ನೀಚಯುತಿ ಇರುವುದಿಲ್ಲ, ಉಚ್ಚಯುತಿ ಮಾತ್ರ. ಉಚ್ಚ ಎಂಬ ಪದದ ಅಗತ್ಯವೇ ಇಲ್ಲ, ಮಂಗಳ ಗ್ರಹದ ಯುತಿ ಏಪ್ರಿಲ್‌ನಲ್ಲಿ ನಡೆಯುತ್ತದೆ.

ಈ ತಿಂಗಳಲ್ಲಿ ಭೂಮಿ ತನ್ನ ಕಕ್ಷೆಯ ಪ್ರಮುಖ ಹಂತವೊಂದನ್ನು ದಾಟುತ್ತದೆ. ಅದೇ ವಿಷುವ - ಮಾರ್ಚ್ ೨೦ರಂದು - ಆ ದಿನ ಸೂರ್ಯ ಉದಯಿಸುವ ಮತ್ತು ಕಂತುವ ಬಿಂದುಗಳನ್ನು ಗುರುತಿಸಿಕೊಳ್ಳಿ. ನಿಖರವಾದ ಪೂರ್ವ ಮತ್ತು ಪಶ್ಚಿಮ ಬಿಂದುಗಳೇ ಇವು. ಆ ದಿನ ಸೂರ್ಯ ಮಧ್ಯಾಹ್ನ ರೇಖೆಯನ್ನು ಹಾದು ಹೋಗುವಾಗ ನೆರಳನ್ನು ಗಮನಿಸಿ. ಅದನ್ನು ನಿಖರವಾಗಿ ಅಳತೆ ಮಾಡಿ ಸಣ್ಣ ಲೆಕ್ಕ ಮಾಡಿದರೆ ನಿಮ್ಮ ಊರಿನ ಅಕ್ಷಾಂಶ ದೊರಕುತ್ತದೆ.

ಈ ತಿಂಗಳು ಚಂದ್ರ ಚಿತ್ರಾ ನಕ್ಷತ್ರವನ್ನು ಮರೆಮಾಡುವ ಆಚ್ಛಾದನೆ ೧ರಂದು ಮತ್ತು ೨೮ರಂದು ನಡೆಯಲಿದೆ. ಆದರೆ ಎರಡೂ ಸಂದರ್ಭಗಳಲ್ಲಿ ಚಂದ್ರೋದಯಕ್ಕೆ ಮುಂಚೆ ಮುಗಿದುಹೋಗಿರುತ್ತದೆ. ಆದ್ದರಿಂದ ರಾತ್ರಿ ೮ ಗಂಟೆಗೆ ನೀವು ಪೂರ್ವ ದಿಕ್ಕನ್ನು ಗಮನಿಸಿದರೆ ಹೆಚ್ಚು ಕಡಿಮೆ ಪೂರ್ಣವಾಗಿಯೇ ಕಾಣುವ ಚಂದ್ರನಿಗೆ ಅಂಟಿಕೊಂಡಂತೆ ಚಿತ್ರಾ ನಕ್ಷತ್ರವನ್ನು ಕಾಣಬಹುದು.

ಕ್ಯಾಮೆರಾ ಇರುವವರಿಗೊಂದು ವಿಶೇಷ ಅವಕಾಶ ಇದೆ. ೪-೫ರ ಬೆಳಗಿನ ಜಾವ ಅರ್ಧಚಂದ್ರದ ಚಿತ್ರ ತೆಗೆಯಿರಿ. ಕ್ಯಾಮೆರಾದ ಝೂಮ್ ಮುಂತಾದವುಗಳನ್ನು ಗುರುತುಹಾಕಿಕೊಳ್ಳಿ. ಪುನಃ ಅದೇ ಸೆಟಿಂಗ್ ಇಟ್ಟು ೧೯ರ ಸಂಜೆ ಪುನಃ ಅರ್ಧಚಂದ್ರದ ಚಿತ್ರ ತೆಗೆಯಿರಿ. ಎರಡನ್ನೂ ಹೋಲಿಸಿ. ವ್ಯಾಸದಲ್ಲಿ ವ್ಯತ್ಯಾಸವಿದೆ ಎಂದು ತಿಳಿಯುತ್ತದೆ. ಇದರ ಕಾರಣ ಕೆಳಗೆ ಕೊಟ್ಟಿರುವ ಖಗೋಳ ದಿನಚರಿಯಲ್ಲಿ ಅಡಗಿದೆ.

**ಖಗೋಳ ದಿನಚರಿ**

| | |
|---|---|
| ೧ | ಚಂದ್ರ-ಚಿತ್ರಾ ಜೋಡಿ (ಆಚ್ಛಾದನೆ ಕಾಣುವುದಿಲ್ಲ) |
| ೪ | ಮುಂಜಾವು ಶನಿ - ಚಂದ್ರ ಜೋಡಿ * |
| | ಬುಧ ಗ್ರಹದ ನೀಚಯುತಿ |
| | ಚಾಂದ್ರಮಾಸದ ಕೊನೆಯ ಪಾದ* - ಚಂದ್ರೋದಯ ನಡುರಾತ್ರಿಗೆ |
| ೫ | ಚಂದ್ರ - ಭೂಮಿ ನಡುವೆ ಕನಿಷ್ಠ ಅಂತರ |
| ೧೦ | ಚಂದ್ರ - ಶುಕ್ರ - ಬುಧ ಇವುಗಳ ಪುಟ್ಟ ಗುಂಪು |
| ೧೨ | ಅಮಾವಾಸ್ಯೆ (ಸಂಜೆ) ಮಂಗಳ - ಚಂದ್ರ ಜೋಡಿ |
| ೧೭ | ಬುಧ ಗ್ರಹದ ಹಿನ್ನಡೆ ಮುಕ್ತಾಯ |
| ೧೮ | ಸಂಜೆ ಗುರು - ಚಂದ್ರ ಜೋಡಿ* |
| ೧೯ | ಚಂದ್ರ - ಭೂಮಿ ಅಂತರ ಗರಿಷ್ಠ |
| | ಚಾಂದ್ರಮಾಸದ ಮೊದಲ ಪಾದ - ಚಂದ್ರಾಸ್ತ ನಡುರಾತ್ರಿಗೆ |
| ೨೦ | ವಿಷುವ |
| ೨೭ | ಹುಣ್ಣಿಮೆ |
| ೨೮ | ಚಂದ್ರ - ಚಿತ್ರಾ ಜೋಡಿ. ಶುಕ್ರಗ್ರಹ ಉಚ್ಚಯುತಿ |
| ೨೯ | ಶನಿ - ಚಂದ್ರ ಜೋಡಿ* |
| ೩೧ | ಚಂದ್ರ - ಭೂಮಿ ನಡುವೆ ಕನಿಷ್ಠ ಅಂತರ |
| | ಬುಧ ಗ್ರಹದ ಗರಿಷ್ಠ ಕೋನೋನ್ನತಿ* |

**(* ಛಾಯಾಗ್ರಹಣಕ್ಕೆ ಉತ್ತಮ ಅವಕಾಶ)**


*೧೮ ಸಂಜೆ*
*ಗುರು-ಚಂದ್ರ ಜೋಡಿ*

*ಪ್ಯಾನ್ ಸ್ಟಾರ್ ಎಂಬ ದೂರದರ್ಶಕ ೨೦೧೧ರಲ್ಲಿ ಕಂಡುಹಿಡಿದ ಧೂಮಕೇತು ಮಾರ್ಚ್ ೧೧ರಂದು ಸೂರ್ಯನಿಗೆ ಸಮೀಪವಾಗಿ ಹಾದುಹೋಗಲಿದೆ. ಇದು ಬರಿಗಣ್ಣಿಗೆ ಕಾಣುವಷ್ಟು ಪ್ರಕಾಶವಾಗಬಹುದು ಎಂದು ಲೆಕ್ಕ ತಿಳಿಸುತ್ತದೆ. ಆದರೆ ೯ರಿಂದ ೧೫ರ ವರೆಗೆ – ಅಂದರೆ ಅದರ ಪ್ರಕಾಶ ಗರಿಷ್ಠವಾಗಿರುವ ಸಮಯದಲ್ಲಿ ಪಶ್ಚಿಮ ದಿಗಂತದ ಅಂಚಿನಲ್ಲಿ ಕಾಣುವುದು. ಬಾಲ ಬಹಳ ಉದ್ದ ಇದ್ದರೆ ಸೂರ್ಯಾಸ್ತವಾದ ನಂತರದ ಸುಮಾರು ಅರ್ಧಗಂಟೆ ನೋಡಲು ಸಿಗಬಹುದು. ೧೩ರಂದು ಮಂಗಳ ಗ್ರಹ ಮತ್ತು ರೇಖಾ ಚಂದ್ರಗಳ ನಡುವೆ ಇರುತ್ತದೆ.*

**ಡಾ|| ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್
ಬೆಂಗಳೂರು - ೫೬೦ ೦೦೧



# ದಾನವೆಂಬುದು ದಾಸೋಹವಾಗಲಿ

'ದಾನ' ಅತ್ಯಂತ ಪವಿತ್ರ-ಪಾವನ ಮತ್ತು ಮಾನವೀಯ ಅಂತಃಕರಣದ ಮಹೋನ್ನತ ಕಾರ್ಯವಾಗಿದೆ. ಜಗತ್ತಿನಲ್ಲಿ ಸೌಲಭ್ಯ-ಸವಲತ್ತು-ಸಂಪತ್ತು-ಶಕ್ತಿ-ಸಮ- ಸಮವಾಗಿದ್ದರೆ ದಾನ-ಧರ್ಮಾದಿ ಕಾರ್ಯಗಳಿಗೆ ಅವಕಾಶಗಳೇ ಸಿಗುತ್ತಿರಲಿಲ್ಲ. ಭಾರತೀಯ ಸಮಾಜದೊಳಗೆ ಧಾರ್ಮಿಕತೆ ದಾನ-ದತ್ತಿಗಳಿಂದಲೇ ಪರಿಪುಷ್ಟಿಗೊಂಡಿದೆ. ಅಸಮಾನತೆ, ದಾರಿದ್ರ್ಯ, ನಿರುದ್ಯೋಗ, ಅಜ್ಞಾನ, ಆಲಸ್ಯ, ಮೈಗಳ್ಳತನ, ಮರುಳುತನ, ಭಿಕ್ಷಾಟನೆ, ಪರಾವಲಂಬಿಗಳಿರುವೆಡೆ ದಾನ ಧನ್ಯತೆಗೆ ಭಾಜನವಾಗುತ್ತದೆ. ಇಂದು ದಾನ ಧಾರ್ಮಿಕ ವಲಯದಾಚೆಯೂ ಹಬ್ಬಿಕೊಂಡಿದೆ. ರಾಜಕೀಯ, ಸಾಮಾಜಿಕ, ಸ್ವಯಂ ಸೇವಾ ಸಂಸ್ಥೆಗಳು ದಾನ ಪಡೆಯುವಲ್ಲಿ ಮುಂಚೂಣಿಯಲ್ಲಿವೆ. ದಾನ ಅನುದಾನವಾಗಿಯೂ ಪ್ರಸಿದ್ಧಿ ಪಡೆದುಕೊಂಡಿದೆ. ಅನುದಾನ ಪಡೆದು ದಾನ ಮಾಡುವವರ ಸಂಖ್ಯೆಯೂ ಹೆಚ್ಚಿದೆ. ಪಾಪ ಪರಿಹಾರಕ್ಕೆಂದು ದಾನ ಮಾಡುವ ಪ್ರತೀತಿಗಂತೂ ಕಡಿವಾಣವೇ ಬೀಳದಂತಿದೆ. ನಮ್ಮಲ್ಲಿ ದಾನಶೂರರರೂ ಇದ್ದಾರೆ, ದಾನ ಕೊಟ್ಟದ್ದಕ್ಕೆ ಹೆಸರು ಹಾಕಿಸಿಕೊಂಡು ಪ್ರಸಿದ್ಧಿ ಪಡೆದವರೂ ಇದ್ದಾರೆ. ದೇವರಿಗೆ ದಾನ, ಬಡವರಿಗೆ ದಾನ, ದೀನ ದಲಿತರಿಗೆ ಅನುದಾನ ಸಾರ್ವತ್ರಿಕಗೊಂಡಿದೆ. ಪ್ರತಿ ಹಂತದ ಬದುಕಿನೊಳಗೆ ದಾನದ ವಿಧಾನವಿದೆ. ಈ ವಿಧಾನವನ್ನು ಸರ್ವಜ್ಞ ಕವಿಯು ಲೋಕಾನುಭವಗೊಳಿಸಿರುವ ವಿಚಾರಗಳು ಮನನ ಯೋಗ್ಯವಾಗಿವೆ :

*ಇಚ್ಛೆಯನು ಅರಿದಿತ್ತ । ನುಚ್ಚೊಂದು ಮಾಣಿಕವು ।*
*ಇಚ್ಛೆಯದು ತೀರ್ದ ಬಳಿಕಿತ್ತ ಮಾಣಿಕವು ।*
*ನುಚ್ಚಿಗೂ ಕಷ್ಟ ಸರ್ವಜ್ಞ ॥*



ಸ. ರಾ. ಸುಳಕೂಡೆ

ದಾನ ಕಾಡಿ ಬೇಡಿ ಪಡೆದುಕೊಳ್ಳಬಾರದೆಂಬ ಸ್ಪಷ್ಟ ನಿಲುವನ್ನು ತಾಳಿರುವ ಕವಿ ಸರ್ವಜ್ಞ ಸಮಯೋಚಿತ ಸಹಾಯವೇ ದೊಡ್ಡ ದಾನವೆಂದಿದ್ದಾನೆ. ಪ್ರಸಂಗಗಳು ಏರು-ಪೇರು-ಪೇಚಿಗೆ ಸಿಲುಕಿಸುತ್ತವೆ. ಪ್ರಸಂಗವಿದ್ದಾಗ ಹಿಂಜರಿದು ನಿಲ್ಲುವುದು ಬದುಕಿಗೆ ಘಾತಕವೇ ಆಗಿದೆ. ಸಹಾಯ ಹಸ್ತ ಚಾಚುವ ಶಕ್ತಿಯಿದ್ದರೂ ಪೇಚಾಡಲಿ, ಪೀಡನೆಗೆ ಒಳಗಾಗಲಿ, ಒದ್ದಾಡಲಿ, ಹಾಳಾಗಿ ಹೋಗಲಿ ಎಂಬ ಮನೋಗತವೇ ಜನರ ದಾರುಣ ಸ್ಥಿತಿಗೆ ಕಾರಣವಾಗಿದೆ. ಸಮಯವನರಿತು ಸಹಾಯ ಮಾಡುವವನೇ ಗೆಳೆಯನೆಂದು ಹೇಳಲಾಗುತ್ತದೆ. ಜಗತ್ತಿನೊಳಗೆ ಹೃದಯ ದಾರಿದ್ರ್ಯದಿಂದಲೇ ಅನೇಕ ಅನಾಹುತಗಳೂ ಹುಟ್ಟಿಕೊಂಡಿವೆ. ಪ್ರಸಂಗಕ್ಕೆ ಅನುಗುಣವಾಗಿ ಸಹಾಯ ಹಸ್ತ ಚಾಚುವುದೇ ಬಹು ಮೂಲ್ಯ ದಾನವಾಗಿದೆ.

*ಸೊಡರೆಣ್ಣೆ ತೀರಿದರೆ । ಕೊಡನೆತ್ತಿ ಹೊಯ್ಯುವರೆ ?।*
*ಕೊಡಬೇಡ ಕೊಡದೆ ಇರಬೇಡ ಧರ್ಮವನು ।*
*ಬಿಡಬೇಡವೆಂದ ಸರ್ವಜ್ಞ ॥*

ನಿಜವಾದ ಧರ್ಮದ ತಿರುಳು ಅಸಹಾಯಕರಿಗೆ, ಅನಾನುಕೂಲಸ್ಥರಿಗೆ, ಅಂಗವಿಕಲರಿಗೆ, ವೃದ್ಧರಿಗೆ, ಬಾಲಕರಿಗೆ ಸಮಯಾನುಸಾರ ಬೆಂಬಲವಾಗಿ ನಿಲ್ಲುವುದಾಗಿದೆ. ನಮ್ಮ ಬೆಂಬಲ ಕಾಲೋಚಿತವಾಗಿರಬೇಕಲ್ಲದೆ ಮಿತಿಯೊಳಗೂ ಇರಬೇಕು. ಮಾನವೀಯ ಸಂಬಂಧಗಳನ್ನು ಸಮಾನತೆಯ ಆಧಾರದೊಳಗೆ ನಿಭಾಯಿಸುವಷ್ಟು ಬೆಂಬಲವಿರಬೇಕೇ ವಿನಾ ಗುಲಾಮಗಿರಿಗೆ ತಳ್ಳುವಂತಾಗಬಾರದು. ದಾನ, ಧರ್ಮವೆಂದು ನಾವಿಂದು ಮನುಷ್ಯನನ್ನು ಕಟ್ಟಿ ಹಾಕುತ್ತಿದ್ದೇವೆ. ಅನುದಾನ, ಅನುಕೂಲತೆ ಎಂದು ಬಲಹೀನರನ್ನಾಗಿಸುವ ಅನೇಕ ಯೋಜನೆಗಳು ಕಣ್ಣು ತೆರೆದುಕೊಳ್ಳುತ್ತಲಿವೆ. ಪ್ರತಿ ಹಂತದ ಬದುಕಿನೊಳಗೆ ದಾನ, ಅನುದಾನ ವ್ಯವಸ್ಥೆ ಒದಗಿಸಿ ಶ್ರಮ ಸಂಸ್ಕೃತಿಗೆ ಧಕ್ಕೆ ತರಲಾಗುತ್ತಿದೆ. ದುಡ್ಡಿದ್ದವರು ಹೂಡುವ ಆಟ-ನೋಟಗಳಲ್ಲಿ ಕೈಗೊಂಬೆಗಳಾಗಿ ನಿಂತಿರುವ ಪ್ರಸಂಗಗಳು ಮಾನವ ಮರ್ಯಾದೆಯನ್ನು ದಿಕ್ಕು ತಪ್ಪಿಸುತ್ತಿರುವುದು ವಾಸ್ತವತೆಯಾಗಿದೆ.

ದಾನ ಎಷ್ಟೊಂದು ಹಿಂಸಾತ್ಮಕ ಮತ್ತು ವಿದ್ರೋಹದಿಂದ ಕೊಡಿತ್ತೆಂಬುದಕ್ಕೆ ಅನೇಕ ದೃಷ್ಟಾಂತಗಳು ನಮ್ಮಲ್ಲಿವೆ. ೧೨ನೇ ಶತಮಾನದಲ್ಲಿ ಪ್ರವರ್ಧಮಾನಕ್ಕೆ ಬಂದ ಶರಣ ಸಂಸ್ಕೃತಿಯು ಅನೇಕ ಅನಾಚಾರ-ಅವಿಚಾರಗಳನ್ನು ಪಲ್ಲಟಗೊಳಿಸಿದ್ದನ್ನು ಎತ್ತಿ ತೋರಿಸಿದೆ. ಅದಕ್ಕೆಂದೇ ಶರಣರು ದಾನ ಎಂಬ ಪ್ರತೀತಿಯನ್ನೇ ಮರೆಯಾಗುವಂತೆ ಮಾಡಿ ದಾಸೋಹ ತತ್ವವನ್ನು ಚಾಲ್ತಿಗೆ ತಂದು ಮಾನವ ಘನತೆಯನ್ನು ಬೆಳಗಿಸಿದರು.

ದಾನ ಇಂದಿನ ದಿನಮಾನಗಳಲ್ಲಿ ವಿಧ-ವಿಧ ರೂಪಾಂತರಗಳನ್ನು ಪಡೆದುಕೊಳ್ಳತೊಡಗಿದೆ. ಎಲ್ಲ ದಾನಗಳಲ್ಲಿ ಅನ್ನ ದಾನ ಶ್ರೇಷ್ಠವೆಂದು ಹೇಳಲಾಗುತ್ತಿತ್ತು. ಇಂದು ರಕ್ತ ದಾನ, ಕಣ್ಣು ದಾನ, ಶರೀರ ದಾನ, ಕಿಡ್ನಿ ದಾನ, ಪಾತ್ರೆ ದಾನ, ವಸ್ತ್ರದಾನ, ಭೂಮಿ ದಾನ, ಪ್ರಸಿದ್ಧಿಗೆ ಬಂದಿವೆ. ವಿದ್ಯೆಯು ದಾನವಾಗಿ ಇಂದು ಉಳಿದುಕೊಂಡಿಲ್ಲ. ವಿದ್ಯೆಗೆ ಬಹಳಷ್ಟು ಸಂಪತ್ತು ಸುರಿಯಬೇಕಾಗಿದೆ. ಆದರೂ ವಿದ್ಯೆ ದಾನವೆಂದು ಹೇಳಲಾಗುತ್ತಿದೆ. ಬಸವಣ್ಣನವರು ಅಂದಿನ ಜನರ ಮನೋಗತದೊಳಗೆ ದಾನ ಕೀರ್ತಿಗಾಗಿ ಇತ್ತೆಂದು ಹೇಳಿ, ಇದು ವ್ಯರ್ಥತೆಗೆ ಭಾಜನವಾದ ಪ್ರಸಂಗವೆಂಬುದನ್ನು ಗುರುತಿಸುವ ಅನುಭಾವ ಹಂಚಿಕೊಂಡಿದ್ದಾರೆ. ನಮ್ಮ ಪೂರ್ವಜರು ನಿಸ್ವಾರ್ಥತೆಯಿಂದ ಬದುಕಿದ್ದರಿಂದ ಕೊಡುವ ಮತ್ತು ತೆಗೆದುಕೊಳ್ಳುವಿಕೆ ಎಲ್ಲವೂ ಬದುಕಿನ ಸಹಜತೆಗಳಾಗಿ ದಾನ ದಾಟಿದವುಗಳಾಗಿದ್ದವು.

ದಾನ ಇಂದಿನ ದಿನಮಾನಗಳಲ್ಲಿ ವಿಧ-ವಿಧ ರೂಪಾಂತರಗಳನ್ನು ಪಡೆದುಕೊಳ್ಳತೊಡಗಿದೆ. ಎಲ್ಲ ದಾನಗಳಲ್ಲಿ ಅನ್ನ ದಾನ ಶ್ರೇಷ್ಠವೆಂದು ಹೇಳಲಾಗುತ್ತಿತ್ತು. ಇಂದು ರಕ್ತ ದಾನ, ಕಣ್ಣು ದಾನ, ಶರೀರ ದಾನ, ಕಿಡ್ನಿ ದಾನ, ಪಾತ್ರೆ ದಾನ, ವಸ್ತ್ರದಾನ, ಭೂಮಿ ದಾನ, ಪ್ರಸಿದ್ಧಿಗೆ ಬಂದಿವೆ. ವಿದ್ಯೆಯು ದಾನವಾಗಿ ಇಂದು ಉಳಿದುಕೊಂಡಿಲ್ಲ. ವಿದ್ಯೆಗೆ ಬಹಳಷ್ಟು ಸಂಪತ್ತು ಸುರಿಯಬೇಕಾಗಿದೆ. ಆದರೂ ವಿದ್ಯೆ ದಾನವೆಂದು ಹೇಳಲಾಗುತ್ತಿದೆ.

ಕೆಳದಿ ಗಾದೆ

ನೆಲದ ಕಸವೆಲ್ಲ
ಮೌನ
ನಡೆದಾಡುವ ಕಸವೇ
ಆರ್ಭಟ.



*ಶ್ರದ್ಧಯಾ ದೇಯಮ್; ಅಶ್ರದ್ಧಯಾ ಅದೇಯಮ್;*
*ಶ್ರಿಯಾ ದೇಯಮ್; ಹ್ರಿಯಾ ದೇಯಮ್; ಭಿಯಾ ದೇಯಮ್*
*ಸಂವಿದಾ ದೇಯಮ್ –*

ತೈತ್ತಿರೀಯೋಪನಿಷತ್ತಿನಲ್ಲಿ ಹೇಳಿರುವ ದಾನದ ಮಹತ್ವವು ಮಾನವೀಯ ಗುಣವಿಶೇಷವನ್ನೇ ಗುರುತಿಸಿದಂತಿದೆ. ಭಾರತೀಯರು ಸಹಜೀವನಕ್ಕೆ ಬಹಳಷ್ಟು ಗೌರವಸ್ಥಾನವನ್ನು ಕೊಟ್ಟ ಕಾಲಘಟ್ಟಗಳಲ್ಲಿ ದಾನವೆಂಬ ಪ್ರತೀತಿಯೇ ಇರಲಿಲ್ಲ, ಆ ಕಾಲಘಟ್ಟದೊಳಗೆ ದಾಸೋಹವೇ ಬದುಕಿನ ಆದರ್ಶವಾಗಿತ್ತೆಂಬುದು ಗಮನಿಸಬೇಕಾಗಿರುವ ಸಂಗತಿಯಾಗಿದೆ. ಇಂದಿನ ದಾನ ವಾಗ್ದಾನವಾಗಿ ಆಗ ಬಾ, ಈಗ ಬಾ ಎಂಬ ಹಂತದಲ್ಲಿದೆ. ಇದು ದಾನದ ರೀತಿಯೂ ಅಲ್ಲ, ದಾನವೂ ಅಲ್ಲ.

*ಆಗ ಬಾ ಈಗ ಬಾ ! ಹೋಗಿ ಬಾ ಎನ್ನದಲೆ ।*
*ಆಗಲೇ ಕರೆದು ಕೊಡುವವನ ಧರ್ಮ ।*
*ಹೊನ್ನಾಗದೇ ಬಿಡದು ಸರ್ವಜ್ಞ ॥*

ಸರ್ವಜ್ಞ ದಾನ, ದಾನ ಕೊಡುವ - ತೆಗೆದುಕೊಳ್ಳುವ ನೆಲೆಯೊಳಗೆ ಅನೇಕ ಚಿಂತನೆಗಳನ್ನು ನಮ್ಮ ಮುಂದೆ ಪಸರಿಸಿ, ದಾನವು ದಾಸೋಹದ ನೆಲೆಯೊಳಗಿರ ಬೇಕೆಂದು ಅಭಿಪ್ರಾಯಪಟ್ಟಿದ್ದಾನೆ. ನಮ್ಮಲ್ಲಿ ಕೆಲವರು ಅಕ್ರಮವಾಗಿ ಸಂಪಾದಿಸಿ 'ಗುಪ್ತ ದಾನ' ಎಂಬ ಪ್ರಣಾಳಿಕೆಯನ್ನೇ ಜಾರಿಗೊಳಿಸಿದ್ದಾರೆ. ಇನ್ನೂ ಕೆಲವರು ದಾನ ಎನ್ನದೆ ಉಡುಗೊರೆ ಎಂದು ಹೇಳಿ ಒಂದು ಕೊಟ್ಟು ಹನ್ನೊಂದು ಪಡೆದುಕೊಳ್ಳುತ್ತಲೂ ಇದ್ದಾರೆ.

ದಾನ ದೊಡ್ಡಸ್ತಿಕೆಯ ಪ್ರತೀಕವಾಗುತ್ತಲಿದೆ. ದೊಡ್ಡ, ದೊಡ್ಡ ಉದ್ಯೋಗಪತಿಗಳೂ ಶ್ರಮಿಕರಿಗೆ ತಕ್ಕ ಸಂಬಳ ನೀಡದೆ ದಾನಕ್ಕೆಂದೇ ಸಂಪತ್ತು ವಿನಿಯೋಗಿಸುವ ಪಣ ತೊಟ್ಟಿದ್ದಾರೆ. ಪ್ರತಿ ಗ್ರಾಮ, ನಗರ ಪ್ರದೇಶಗಳಲ್ಲಿ ಇವರು ಮಾಡಿರುವ ದಾನ ಜನಜನಿತಗೊಂಡಿರುತ್ತದೆ. ದಾನ ಎಂದರೆ ಅಕ್ರಮವನ್ನು ಸಕ್ರಮಗೊಳಿಸುವುದೆಂಬ ಭ್ರಾಂತಿಯು ಪ್ರಚಲಿತಕ್ಕೆ ಬಂದಿದೆ. ಶ್ರಮಿಕರಿಗೆ, ರೈತರಿಗೆ, ಕೂಲಿಕಾರರಿಗೆ, ಮುಗ್ಧರಿಗೆ ದೊರೆಯಬೇಕಾದ ಪ್ರತಿಫಲ ಸುನಿಶ್ಚಿತಗೊಳಿಸುವುದೇ ಬಹು ದೊಡ್ಡ ದಾನವಾಗಿದೆ. ಉದ್ಯೋಗಪತಿಗಳು ನಡೆಸುತ್ತಿರುವ ಅನ್ನ ಛತ್ರಗಳು, ಉಚಿತ ಪ್ರಸಾದ ನಿಲಯಗಳು, ಅರವಟ್ಟಿಗೆಗಳು, ಯಾತ್ರಾ ನಿವಾಸಗಳು, ಉತ್ಸವಗಳು ಮಾನವೀಯ ಅನುಕಂಪ ಹೊಂದಿರದೆ ದೊಡ್ಡಸ್ತಿಕೆಯ ನೋಟಗಳೇ ಆಗಿವೆ. ಪ್ರಜಾಪ್ರಭುತ್ವದ ನೆಲೆಯೊಳಗೆ ತನ್ನ ಅವಶ್ಯಕತೆಗಳಿಗೆ ಅಗತ್ಯವಿರುವಷ್ಟು ಸಂಪತ್ತು, ಸೌಕರ್ಯ ಹೊಂದಿರಬೇಕೆಂಬುದು ಮೂಲ ಸಿದ್ಧಾಂತವಾಗಿದೆ. ಸರ್ವರಿಗೂ ಸಮ ಬಾಳು, ಸಮ ಪಾಲು ಎಂದು ಹೇಳುತ್ತ ದಾನ ಕೊಡುವಷ್ಟು ಸಂಗ್ರಹಿಸಿಕೊಂಡಿರುವುದು ಸಕ್ರಮವೆಂದೂ ಆಗಲಾರದು. ನಮ್ಮ 'ಗಳಿಕೆ' ಶ್ರಮಕ್ಕೆ ತಕ್ಕಂತೆ ಇರಬೇಕು. ಶ್ರಮದಿಂದ ಗಳಿಸಿದವರಲ್ಲಿ ಉಳಿದರೆ ಅವಶ್ಯಕತೆ ಇರುವ ಸಹಚರರಿಗೆ ಹಂಚುವ ಮನೋಭಾವ ರೂಢಿಗೊಂಡರೆ ದಾನ ದಾಸೋಹವೇ ಆಗುತ್ತದೆ.

*ಸಂಚಯಿಸಿದಾ ಧನವು । ಕಂಚು-ಕಬ್ಬುವನಕ್ಕು ।*
*ಹಂಚಕ್ಕು ಹೆರರಿಗುಣವಕ್ಕು ದಾನದಾ ।*
*ಸಂಚು ಬೇರೆಂದ ಸರ್ವಜ್ಞ ॥*

ಬದುಕಿನೊಳಗೆ ಪರೋಪಕಾರಕ್ಕಿಂತಲೂ ಮಿಗಿಲಾದ ಧರ್ಮವಿಲ್ಲ. ಪರಹಿತ ಸಾಧಿಸುವುದೆಂದರೆ ತಮ್ಮ ಹಿತವನ್ನು ಸಂರಕ್ಷಿಸುವುದೆಂದೇ ಅರ್ಥ. ಅಲ್ಲಸಲ್ಲದ ರೀತಿಯಿಂದ ಗಳಿಸಿ ಪಾಪಪ್ರಜ್ಞೆಯೊಳಗೆ ನಲುಗಿ ಪರ ಗಳಿಸುವ ಆಸೆ ಹೊಂದಿ ಮಾಡುವ ದಾನವಾಗಲಿ, ಪರೋಪಕಾರವಾಗಲಿ ಬದುಕಿಗೆ ಭವ್ಯತೆಯನ್ನು ತರಲಾರದು. ಸಿರಿತನ ಶ್ರಮ ಸಂಸ್ಕೃತಿಯೊಳಗೆ ಬಂದರೆ ದಾನಕ್ಕೊಂದು ಅರ್ಥ ಬರುತ್ತದೆ. ಪರಲೋಕದೊಳಗೆ ಸ್ಥಾನ ಗಿಟ್ಟಿಸಲು, ಪಾಪಪ್ರಜ್ಞೆಯಿಂದ ಪಾರಾಗಲು ಮಾಡುವ ದಾನ ದಾಸೋಹವಾಗಲಾರದು, ಭವ್ಯತೆಯನ್ನು ತರಲಾರದು.

*ಜನ್ಮ ಜನ್ಮಕ್ಕೆ ಹೋಗಲೀಯದೆ, 'ಸೋಹಂ' ಎಂದೆನಿಸದೆ*
*'ದಾಸೋಹಂ' ಎಂದೆನಿಸಯ್ಯಾ.*
*ಲಿಂಗಜಂಗಮದ ಪ್ರಸಾದವ ತೋರಿ ಬದುಕಿಸಯ್ಯಾ.*
*ಕೂಡಲ ಸಂಗಮದೇವಾ.*

ಮಾನವನ ಬದುಕಿನ ಭವ್ಯತೆಯು ಶ್ರಮ ಸಂಸ್ಕೃತಿಯನ್ನು ಪಾಲಿಸುವ, ಶ್ರಮಕ್ಕೆ ತಕ್ಕ ಪ್ರತಿಫಲವನ್ನಷ್ಟೇ ಅನುಭವಿಸುವ ಮನೋಭಾವ ಹೊರಹೊಮ್ಮುವ ಅವಕಾಶವಾಗಿದೆ. ದಾನ ಕೊಡುವವನು ಯೋಗ್ಯನಾದಷ್ಟು ಸುಮಧುರ ಮಾನವೀಯ ಪರಿಸರವು ಗಟ್ಟಿಗೊಳ್ಳುತ್ತದೆ. ಯಾರದೋ ದುಡ್ಡು ಇನ್ನಾರಿಗೋ ಹಂಚುವುದು ದಾನದ ಉದ್ದೇಶವನ್ನು ಎಂದೂ ಸಾರ್ಥಕಗೊಳಿಸಲಾರದು. ಇಂದು ಶ್ರಮವಂತರಿಗೆ ತಕ್ಕ ಸ್ಥಾನಮಾನ ಕೊಡುವ ವ್ಯವಧಾನವೇ ದೊಡ್ಡ ದಾನವಾಗಿದೆ. ಸ್ವಾವಲಂಬಿ ಸಮಾಜ ನಿರ್ಮಾಣಕ್ಕೆ ಕಟಿಬದ್ಧತೆ ತರುವುದೇ ಬದುಕಿನ ದಿವ್ಯತೆಯೂ, ಭವ್ಯತೆಯೂ ಆಗಿದೆ.

**ಸ. ರಾ. ಸುಳಕೂಡೆ** ನಂ. ೧೩೪೯, 'ಶಿವಪ್ರಸಾದ', ರಾಮತೀರ್ಥನಗರ, ಬೆಳಗಾವಿ - ೫೯೦ ೦೧೬

## ಮಾರ್ಚ್– ೮ : ಮಹಿಳಾ ದಿನಾಚರಣೆಯ ಶುಭಾಶಯಗಳು.







ವ್ಯವಸ್ಥೆಯ ಕ್ರೂರತೆಗೆ ಬಲಿಯಾಗಿ, ನೆಮ್ಮದಿಯ ಬದುಕಿಗಾಗಿ ಹಂಬಲಿಸುತ್ತಿರುವ ವಿಶ್ವದ ಮಹಿಳೆಯರಿಗೆ , ಸ್ವಾತಂತ್ರ್ಯ, ಸ್ವಾಭಿಮಾನ, ಸಮಾನತೆಗಾಗಿ ಹೋರಾಡುತ್ತಿರುವ ವಿಶ್ವದ ಮಹಿಳೆಯರಿಗೆ ಮಹಿಳಾ ದಿನಾಚರಣೆಯ ಶುಭಾಶಯಗಳು. ನೆಮ್ಮದಿಯ ನಾಳೆ ನಮ್ಮದಾಗಲಿ. – 'ಹೊಸತು' ಬಳಗ

**HOSATHU** Kannada Monthly / MARCH 2013 / Rs. 12
RNI Regd. KARKAN / 1999 / 614. Karnataka Regd. KRNA/BGE/7/2012-14
Licenced to post without prepayment. WPP No.14.
Posted at MBC, Bangalore GPO-560001 on the 28th of every month. (No. of Pages 64)